ಮನೋಹರ ಗ್ರಂಥ ಮಾಲೆಯ ೩೫ನೆಯ ಕುಸುಮ

# ಸುಳಿವು-ಹೊಳವು

( ಇಪ್ಪತ್ತಾರು ಪ್ರಬಂಧ ಸಂಗ್ರಹ )

ವಿ. ಕೃ. ಗೋಕಾಕರ

**ಮುನ್ನುಡಿ**

ಸಂಪಾದಕ :

**ಜಿ. ಬಿ. ಜೋಶಿ**

ಏಪ್ರಿಲ್ ೧೯೩೯ ] [ಬೆಲೆ ೧-೦-೦

ಸಾಹಿತ್ಯವಿಷಯದಲ್ಲಿ ಸಲಹೆಗಾರರು :

ದ. ರಾ. ಬೇಂದ್ರೆ, M. A.

ರಂ. ಶ್ರೀ. ಮುಗಳಿ, M. A. B. T.

ವಿ. ಕೃ. ಗೋಕಾಕ, M. A. (BOM) B. A. (OXON)

ಮುದ್ರಕರು :

ಶೇಷಗಿರಿರಾವ ಗೋವಿಂದರಾವ

ಕುಲಕರ್ಣಿ

ಸಾಧನ ಪ್ರೆಸ್, ಧಾರವಾಡ

೪೨—೩೯

ಪ್ರಕಾಶಕರು :

ಜಿ. ಬಿ. ಜೋಶಿ

ಮನೋಹರ ಗ್ರಂಥಮಾಲಾ

ಧಾರವಾಡ

ಸಂಪಾದಕರು :

**ಜಿ. ಬಿ. ಜೋಶಿ**

# ಪರಿವಿಡಿ

# ಮುನ್ನುಡಿ

## (೧)

ಈ ಸಂಗ್ರಹದಲ್ಲಿ ಕಂಡುಬರುವ ಲಘುಪ್ರಬಂಧಗಳನ್ನು ಒಂದು ಕ್ರಮವನ್ನು ಹಿಡಿದು ಹೆಣೆಯಲಾಗಿದೆ. ಸಂಗ್ರಹವು ಪೂರ್ಣವಾಗಿದೆ ಯೆಂದು ಹೇಳುವದು ಸಾಧ್ಯವಿಲ್ಲ. ಅನೇಕ ನಾಮಾಂಕಿತ ಸಾಹಿತಿಗಳ ಲೇಖಗಳನ್ನು ದೊರಕಿಸುವದು ಸಾಧ್ಯವಾಗಿಲ್ಲ. ಆದರೂ ಈ ವಿಷಯ ವನ್ನು ಲಕ್ಷ್ಯದಲ್ಲಿಟ್ಟು 'ಸುಳಿವು–ಹೊಳವ'ನ್ನು ಓದಿದಲ್ಲಿ ಇಂದಿನ ನಮ್ಮ ಸಾಹಿತಿಗಳ ವಿಚಾರಪದ್ಧತಿಯನ್ನೂ ಭಾವನಾಶೀಲತೆಯನ್ನೂ ಪ್ರತಿಭಾಸಂಪನ್ನತೆಯನ್ನೂ ನಾವಿಲ್ಲಿ ಸ್ಪಷ್ಟವಾಗಿ ಕಾಣಬಹುದು; ಅವು ಸಾಹಿತ್ಯದಲ್ಲಿ ಹೊಂದುವ ವಿಶಿಷ್ಟರೂಪವನ್ನು ನಾವಿಲ್ಲಿ ಪರಿಶೀಲಿಸ ಬಹುದು.

'ಹರಟೆ' ಯೆಂದರೆ ನವನಾಗರಿಕತೆಯ ಆಂತರಿಕ ಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯಪ್ರಕಾರವೆಂದರೆ ತಪ್ಪಾಗಲಾರದು. ಪದ್ಯಕಾವ್ಯ ದಲ್ಲಿ ಛಂದಸ್ಸಿನ ಸಂಗೀತವಿರುತ್ತದೆ; ಭಾವಗೀತೆಗಳಲ್ಲಿ ಈ ಸಂಗೀತಕ್ಕೆ ಮೇಳವಾಗುವ ಹೃದಯಸಂಗೀತವಿರುತ್ತದೆ. ಹರಟೆಗಳಲ್ಲಿ ಭಾವನಾ ಪ್ರಧಾನತೆಗೆ ಇಷ್ಟೊಂದು ಆಸ್ಪದವಿಲ್ಲ. ಎದುರಿಗಿದ್ದ ಪ್ರಪಂಚ, ಅದರ ಒಳತಿರುಳನ್ನು ಕಾಣುವ ಕಲ್ಪನಾಶಕ್ತಿ ಇಲ್ಲವೆ ಒಳಗಣ್ಣು, ಪ್ರಪಂಚದ ರಹಸ್ಯವನ್ನು ಕುರಿತು ವಿಚಾರಪರಂಪರೆಯ ಮಾಲೆಗಳನ್ನೇ. ಹೆಣೆಯುವ ಬುದ್ಧಿಶಕ್ತಿ ಮತ್ತು ಪ್ರಪಂಚದ ರೂಪ-ಕುರೂಪಗಳಿಂದ ಸ್ಪಂದನಗೊಂಡು ಮಿಡಿಯುವ ಭಾವನಾಶಕ್ತಿ,–ಇವೆಲ್ಲವುಗಳ ಅಂಶಗಳು ರಮ್ಯವಾಗಿ ಕವಿಯ ವ್ಯಕ್ತಿತ್ವದಲ್ಲಿ ಮೇಳವಿಸಿ ಶಬ್ದಸೃಷ್ಟಿಯಲ್ಲಿ ರೂಪಗೊಂಡಾಗ ಸಾಹಿತ್ಯವು ಹುಟ್ಟುತ್ತದೆ. ಭಾವಗೀತಗಳಲ್ಲಿ ಉಳಿದ ಅಂಶಗಳಿಗಿಂತ ಭಾವನಾಶೀಲತೆಯು ಉತ್ಕಟವಾಗಿರುತ್ತದೆ. ಲಘುಪ್ರಬಂಧದಲ್ಲಿಯೂ

ಭಾವನಾಪ್ರಾಧಾನ್ಯವಿದೆ; ಆದರೆ ಛಂದಸ್ಸಿನ ರೂಪವನ್ನು ಬೇಡುವಷ್ಟು ಅದು ತೀವ್ರವಾಗಿರುವದಿಲ್ಲ. ಕಲ್ಪನಾಶಕ್ತಿಯ ಉತ್ಕಟತೆಯನ್ನೂ ನಾವಿಲ್ಲಿ ಕಾಣಬಹುದು; ಆದರೆ ಪದ್ಯಕಾವ್ಯದ ಚಿತ್ರವಿಚಿತ್ರ ಸೃಷ್ಟಿಸಂಪತ್ತು ಇಲ್ಲಿ ಅದಕ್ಕಿಲ್ಲ. ಭಾವಗೀತೆಗಳಲ್ಲಿ ವಿಚಾರಿತ ರಮಣೀಯತೆಯು ಗಾಳಿಯ ಮೇಲೆ ತೇಲಿಬರುವ ಸುಗಂಧದಂತೆ ಹಗುರಾಗಿ ಬರುತ್ತದೆ; ಆದರೆ ಪ್ರಬಂಧಕಾರನ 'ಮೂಡು' ಇಲ್ಲವೆ ರಸನಿಮಿಷದಲ್ಲಿ ಅದು ಅವಿರಳವಾಗಿ ಬೆರೆತುಕೊಂಡಿರುತ್ತದೆ. ಭಾವಗೀತೆಗೂ ಲಘುಪ್ರಬಂಧಕ್ಕೂ ಇರುವ ಅಂತರವೆಂದರೆ ಇಷ್ಟೆ.

ಏಕೆಂದರೆ, ಗೀತಕಾರನೂ ಪ್ರಬಂಧಕಾರನೂ ಕಾಣುವ ಪ್ರಪಂಚವು ಒಂದೇ. ಯಾವ ದಿಕ್ಕಿನಿಂದಲೂ ಅವರು ತಮ್ಮ ವಸ್ತುಗಳನ್ನು ಆಯ್ದು ಕೊಳ್ಳಬಹುದು. ಪರಮಾನ್ನದಿಂದ ಪರಮಾರ್ಥದ ವರೆಗಿನ ಪ್ರಪಂಚವು ಇಬ್ಬರಿಗೂ ತೆರೆದಿಟ್ಟಿದೆ. 'ಶಾಂತಿ', 'ಭೂವೈಕುಂಠ', 'ನೌಕಾಚಂದ್ರ' ಎಂಬ ಪ್ರಬಂಧಗಳ ವಸ್ತುಗಳನ್ನು ಕುರಿತು ಉತ್ತಮ ಗೀತೆಗಳನ್ನಾದರೂ ಬರೆಯುವದು ಸಾಧ್ಯವಿದೆ. ನಿಜವಾಗಿ ನೋಡಿದರೆ ಅವು ಪದ್ಯಕಾವ್ಯದ ಪ್ರಪಂಚಕ್ಕೆ ಸೇರಬೇಕಾದುವು; ಆದರೆ ಅವನ್ನು ಮನೋಹರವಾಗಿ ಬಣ್ಣಿಸುವಷ್ಟು ನಮ್ಮ ಗದ್ಯವೂ ಬೆಳೆದಿದೆ. 'ಚಾಲಸ್ ಲ್ಯಾಮ್' ಎಂಬ ನಾಮಾಂಕಿತ ಆಂಗ್ಲ ಪ್ರಬಂಧಕಾರನ 'Dream-Children' (ಸ್ವಪ್ನ ಸಂತತಿ) ಎಂಬ ಹರಟೆಯಲ್ಲಿಯ ಗೀತವಾಣಿಯನ್ನು ಯಾರು ತಾನೆ ಅಲ್ಲ ಗಳೆಯಬಹುದು? ಇತ್ತೀಚೆಗೆ ಪದ್ಯಕಾವ್ಯವಾದರೂ ತನ್ನ ಸೃಷ್ಟಿಯನ್ನು ವಿಶಾಲವಾಗಿಸಿದೆ. 'ಹೋಟೆಲುಗಳು' (ಕೀಟ್ಸ ಕವಿಯು 'The Mermaid Tavern' ಎಂಬ ವಿಶ್ರಾಂತಿಗೃಹವನ್ನು ಕುರಿತು ಬರೆದ ಕವನವನ್ನು ಜ್ಞಾಪಿಸಿಕೊಳ್ಳಬಹುದು.), ರೈಲುಗಾಡಿ, ಹೊಲಗಳನ್ನುಳುವಾಗ ಸತ್ತು ಬಿದ್ದ ಮನಮೋಷಕ,—ಇವೆಲ್ಲ ಗೀತಗಳ ಪ್ರಧಾನ ವಸ್ತುಗಳಾಗ ಬಹುದು. ಮಹಾ ಪದ್ಯಕಾವ್ಯದ ವಸ್ತುವು ಘನವಾದುದೇ ಇರಬೇಕೆಂಬ ವಾದವೂ ಇದೆ. ಆದರೆ ಕಾವ್ಯದ ಮಹೋನ್ನತಿಯು ವಸ್ತುವಿಗಿಂತ ಅದನ್ನು ಸಾಹಿತ್ಯವಾಗಿ ಮಾರ್ಪಡಿಸುವ ವಿಧಾನ (Treatment)

ದಲ್ಲಿಯೇ ಹೆಚ್ಚಾಗಿದೆಯೆಂದು ಪ್ರತಿಪಾದನವೂ ಇದೆ. ಆದಕಾರಣ ಗೀತೆಯು ಇಲ್ಲವೆ ಪ್ರಬಂಧದ ವಸ್ತುವು ಇಂಥದೇ ಇರಬೇಕೆಂದು ನಿರ್ಬಂಧಿಸುವದು ಶಕ್ಯವಿಲ್ಲದ ಮಾತು.

ಲಘುಪ್ರಬಂಧವು ನಸನಾಗರಿಕತೆಯ ಆಂತರಿಕ ಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯಪ್ರಕಾರವೆಂದು ಹಿಂದೆ ಹೇಳಿತಷ್ಟೆ. ಪದ್ಯ ಕಾವ್ಯವು ಪ್ರಾಚೀನವಾದುದು; ಗದ್ಯವು ಅದಕ್ಕಿಂತ ಅರ್ವಾಚೀನ ವಾದುದು. ಅಡವಿಯಿಂದ 'ತಾಂಡೆ'ಗೂ ತಾಂಡೆಯಿಂದ ಹಳ್ಳಿಗೂ ಹಳ್ಳಿ ಯಿಂದ ಊರಿಗೂ ಮನುಷ್ಯನು ಸ್ಥಲಾಂತರ ಮಾಡುತ್ತ ನಡೆದಾಗ ಅವನ ಸಾಮಾಜಿಕ ಜೀವನವು ಮಾರ್ಪಡಹತ್ತಿತು. ಅದರಿಂದ ಜನಿಸಿದ ಕೂಟಪ್ರಶ್ನೆಗಳನ್ನು ಬಿಡಿಸಲು ಹೃದಯಪಂತಿಕೆಗಿಂತ ಬುದ್ಧಿವಂತಿಕೆಯು ಹೆಚ್ಚಾಗಿ ಬೇಕಾಯಿತು. ಮೊದಲು ವಾಸ್ತವಿಕ ಪ್ರಪಂಚವನ್ನು ದುರ್ಲ ಕ್ಷಿಸಿದ್ದರೆ ನಡೆಯಬಹುದಾಗಿತ್ತು; ಆದರೆ ಈಗ ಮಾತ್ರ ಯಥಾರ್ಥದ ತೊಡಕಿಗೆ ಉತ್ತರ ದೊರೆತ ನಂತರವೇ ಪರಮಾರ್ಥವನ್ನು ಸಾಧಿಸಬೇಕಾ ಯಿತು. ಈ ಕೂಟಪ್ರಶ್ನೆಗಳನ್ನು ಸಾಹಿತ್ಯದಲ್ಲಿ ಚರ್ಚಿಸುವದೂ ನಿರೂಪಿ ಸುವದೂ ಅವಶ್ಯವೆನಿಸಿದೊಡನೆ ಕಾದಂಬರಿ, ಪ್ರಬಂಧ, ಜೀವನಚರಿತ್ರ ಮೊದಲಾದ ಗದ್ಯಪ್ರಕಾರಗಳು ಹುಟ್ಟಿದವು. ಔದ್ಯೋಗಿಕ ಯುಗದ ಪ್ರಾದುರ್ಭಾವವೇ ಈ ಕಾಲವೆಂದು ಹೇಳಬಹುದು. ಹದಿನಾರನೆ ಶತ ಮಾನದ ಕೊನೆಯ ಭಾಗದಲ್ಲಿ ಪ್ರಸಿದ್ಧವಾದ 'ಮೊಂಟೇನ್' ಎಂಬ ಫ್ರೆಂಚ್ ಪ್ರಬಂಧಕಾರನ ಸಂಗ್ರಹವೇ ಈ ಸಾಹಿತ್ಯಪ್ರಕಾರದ ಮೊದಲ ನೆಯ ಉದಾಹರಣೆಯೆಂದೂ ಅವನ ಕೋಣೆಯೇ ಅದರ ಜನ್ಮಸ್ಥಾನ ವೆಂದೂ ಹೇಳಿದರೆ ಅತಿಶಯೋಕ್ತಿಯಾಗಲಾರದು.

## (೨)

ಆದರೂ ಎಲ್ಲದರ ಇತಿಹಾಸವು ಹಿಂದುವರಿದರೆ ಅಜ್ಞೇಯದ ಸಮುದ್ರವನ್ನು ಕೂಡುವಂತೆ ಲಘುಪ್ರಬಂಧದ ಕಥೆಯು ಇನ್ನೂ ಹಿಂದೆ ಹೋಗುತ್ತದೆ. ಪಡುವಣದ ಪುನರುಜ್ಜೀವನಕಾಲವು ಸುರುವಾದು

ದೆಂದರೆ,– ಹದಿನಾಲ್ಕನೆಯ ಶತಮಾನದ ಮಧ್ಯದ ಸುಮಾರು, ಮಹಮ್ಮದೀಯರು ಕಾನ್‌ಸ್ಟ್ಯಾಂಟಿನೋಪಲ್ ಪಟ್ಟಣ ಹಾಗು ಸಮೀಪದ ಪ್ರಾಂತಗಳಿಂದ ಗ್ರೀಕ್ ಮತ್ತು ರೋಮನ್ ವಿದ್ವಾಂಸರನ್ನು ತಳ್ಳಿದಾಗ ಅಂತಃಕಲಹದಿಂದ, ಧರ್ಮಧರ್ಮಗಳ ತಾಕಲಾಟದಿಂದ, ಯುರೋಪಿನವರು ತಮ್ಮ ಸಾಹಿತ್ಯಪರಂಪರೆಯನ್ನು ಕಳೆದುಕೊಂಡು ಬಿಟ್ಟಿದ್ದರು. ಗ್ರೀಸ್ ಹಾಗು ಇಟಲಿಯ ಚಕ್ರವರ್ತಿಗಳೂ ಸರ್ವಾಧಿಕಾರಿಗಳೂ ಜಯಿಸಿದ್ದ ವಸಾಹತುಗಳಲ್ಲಿ ಮಾತ್ರ ವಿದ್ವಾಂಸರು ಆ ಪರಂಪರೆಯನ್ನು ಇನ್ನೂ ಕಾಯ್ದಿಟ್ಟಿದ್ದರು. ಮಹಮ್ಮದೀಯರು ಪ್ರಬಲರಾದೊಡನೆ ಅವರೆಲ್ಲ 'ತಿರುಗುಪ್ಪಾ'ಗಿ ಯುರೋಪಿಗೆ ಮರಳಬೇಕಾಯಿತು. ತಮ್ಮೊಡನೆ ಆ ಪಂಡಿತರೆಲ್ಲ ಯುರೋಪು ಮರೆತಿದ್ದ ಅಮೌಲ್ಯಗ್ರಂಥಗಳ ಹಸ್ತಪ್ರತಿಗಳನ್ನೊಯ್ದರು. ಗ್ರೀಕ್ ಹಾಗು ಲ್ಯಾಟಿನ್ ಭಾಷೆಗಳಲ್ಲಿದ್ದ ಈ ಗ್ರಂಥಗಳ ಅಭ್ಯಾಸವು ಮತ್ತೆ ಯುರೋಪಿನಲ್ಲಿ ಸುರುವಾಯಿತು. ಹೊಸಗನ್ನಡದ ಸಂಪ್ರದಾಯದೊಡನೆ ಈಗ ನಮ್ಮಲ್ಲಿ ಹಳಗನ್ನಡದ ಪರಂಪರೆಯೂ ಬೆರೆಯುತ್ತಿರುವಂತೆ ಆಂಗ್ಲರ, ಫ್ರೆಂಚರ ಹಾಗು ಇನ್ನಿತರರ ನವೀನ ಸಾಹಿತ್ಯಕ್ಕೆ ಇಂತಹ ಅಭ್ಯಾಸದಿಂದ ಪುಟಸಿಕ್ಕಿತು. 'ಎರಿಸ್ಟಾಟಲ್' 'ಪ್ಲೇಟೊ' 'ಸಿನೆಕಾ' ಮೊದಲಾದ ಸಾಹಿತಿಗಳ ಅನುಕರಣವೇ ಮೊದಲು ಮೊದಲಿಗೆ ಒಳ್ಳೆಯ ಸಾಹಿತ್ಯವೆನಿಸಿಕೊಂಡಿತು.

ನೀತಿಯ ಮಾತುಗಳನ್ನೂ ತಾತ್ವಿಕ ವಿಚಾರಗಳನ್ನೂ ಗದ್ಯದಲ್ಲಿ ವ್ಯಕ್ತಪಡಿಸುವ ಸಂಪ್ರದಾಯವನ್ನು 'ಸಿಸಿರೊ' 'ಸಿನೆಕಾ' 'ಪ್ಲೂಟಾರ್ಕ' ಮೊದಲಾದವರು ಪ್ರಾರಂಭಿಸಿದ್ದರು. ಪ್ರಾಚೀನ ಸಾಹಿತಿಗಳ ಪತ್ರವ್ಯವಹಾರದಲ್ಲಿಯೂ ಅಲ್ಲಲ್ಲಿ ಈ ಸಾಹಿತ್ಯಪ್ರಕಾರವು ಕಾಣಿಸಿಕೊಳ್ಳುತ್ತಿತ್ತು. ಆದರೆ ಹರಟೆಯ ವಿಶಿಷ್ಟ ಗುಣಗಳು ನೆಲೆನೆಲೆಯಾಗಿ ಸಾಹಿತ್ಯದಲ್ಲಿ ಮೊದಲನೆಯ ಸಲ ನಿಂತುದೆಂದರೆ ಮೊಂಟೇನನ ಕೃತಿಗಳಲ್ಲಿಯೇ ಎಂದು ಹೇಳಬೇಕಾಗುತ್ತದೆ. ಮಧ್ಯಕಾಲೀನ ಯುಗದ ವಾತಾವರಣದಲ್ಲಿ ಹುಟ್ಟಿ ಬೆಳೆದ ಮೊಂಟೇನನು ಆಧುನಿಕ ಯುಗದವರಂತೆ ಪ್ರತ್ಯಕ್ಷಾನುಭವದಲ್ಲಿ ವಿಶ್ವಾಸವಿಟ್ಟ ಕುತೂಹಲಿಯಾಗಿದ್ದನು. ಗೆಳೆತನ, ದುಃಖ, ಉಡಾಳತನ,

ಕಲ್ಪನಾಶಕ್ತಿ, ಅರಿವೆಗಳ ಉಪಯೋಗ,– ಇವು ಅವನ ಕೆಲವು ಪ್ರಬಂಧ ಗಳ ವಿಷಯಗಳಾಗಿವೆ. ಒಂದೆರಡರಲ್ಲಿ ತನ್ನ ಸ್ವಭಾವವನ್ನೇ ದೀರ್ಘವಾಗಿ ಬಣ್ಣಿಸಿದ್ದಾನೆ. ಇಂಥ ಕೃತಿಗಳನ್ನು ಓದುವ ವಾಚಕವೃಂದವು ಯಾವುದು? ನಾಗರಿಕರದು; ದುಡ್ಡುಳ್ಳವರದು; ಸಾಮಾಜಿಕ ಜೀವನದಲ್ಲಿ ಆಸ್ಥೆ ಯಿದ್ದು ಅದರ ಕೂಟಪ್ರಶ್ನೆಗಳನ್ನು ಬಿಡಿಸಲು ವಿಶ್ರಾಂತಿಯುಳ್ಳವರದು. ಔದ್ಯೋಗಿಕ ಯುಗದಲ್ಲಿ ಇಂತಹ ವೃಂದವು ಅಸ್ತಿತ್ವದಲ್ಲಿದ್ದಿತೆಂದು ಮೇಲೆಯೇ ಕಾಣುತ್ತದೆ. ಅರಸರು ಇಲ್ಲವೆ ಪಾಳೆಗಾರರಿಗೆ ರುಚಿಸುವ ಯುದ್ಧವಾರ್ತೆ ಹಾಗು ಪ್ರೇಮವಾರ್ತೆಯ ಪುನರಾವೃತ್ತಿಯನ್ನು ಬಿಟ್ಟು ಮಾನವನ ದೈನಿಕ ಜೀವನದಲ್ಲಿಯ ಪರಿಚಿತಗಳನ್ನು ಮೊಂಟೇನನು ಗದ್ಯ ಕಾವ್ಯದಲ್ಲಿ ಬಣ್ಣಿಸಿದನು. ಇಲ್ಲಿಯ ವರೆಗೆ ಅನೇಕ ಸಾಹಿತಿಗಳು ಗ್ರಂಥ ಗಳನ್ನು ಬರೆದರೂ ತಮ್ಮ ಹೆಸರುಳಿಯುವ ಹಾಗೆ ಮಾಡಿರಲಿಲ್ಲ; ಏಕಂದರೆ ತಮ್ಮ ಹೆಸರನ್ನು ಸಹ ಅವರು ಬರೆಯುತ್ತಿರಲಿಲ್ಲ. ದೇವರ ಸೇವೆಗೆಂದು ಭಕ್ತಿಪೂರ್ವಕವಾಗಿ ಬರೆದ ಕಾವ್ಯದಲ್ಲಿ ಹೆಸರಿನ ಹೆಮ್ಮೆಯೇಕೆ? ಆದರೆ ಮೊಂಟೇನನು ಯಾವಾಗಲು 'ನಾನು',—'ನನ್ನದು' ಎಂದು ಹರಟೆ ಹೊಡೆಯುತ್ತಾನೆ. 'ಕಲ್ಪನಾಶಕ್ತಿಯ ಪ್ರಭಾವ'ದ ಬಗ್ಗೆ ಬರೆಯುವಾಗ 'ಇತರರ ದುಃಖಗಳನ್ನು ಕಂಡಾಗ ನನ್ನ ಸಂಕಟವೂ ಮಿತಿಮೀರುತ್ತದೆ; ಯಾವ ಸಂಬಂಧವೂ ಇಲ್ಲದ ಮೂರನೆಯವನೊಬ್ಬನ ಹೃದಯಪ್ರವೇಶ ವನ್ನು ಅನೇಕ ಸಲ ನಾನು ಮಾಡಿದ್ದೇನೆ. ಯಾರೇ ಆಗಲಿ, ಒಂದೇ ಸಮನೆ ಕೆಮ್ಮಹತ್ತಿದರೆ ನನ್ನ ಪುಪ್ಪುಸಗಳಿಗೂ ಗಂಟಲಕ್ಕೂ ತ್ರಾಸಾಗು ತ್ತದೆ' ಎಂದು ಅವನು ಹೇಳುತ್ತಾನೆ. ಪ್ರಬಂಧದಲ್ಲಿ ಸ್ವಯಂಸ್ವರೂಪ ವೆಂದರೆ ಇದಲ್ಲದೆ ಮತ್ತೇನು?

ಮೊಂಟೇನನ ಕೃತಿಗಳು ಪ್ರಸಿದ್ಧವಾದೊಡನೆ ಇಂಗ್ಲಿಷಿನಲ್ಲಿ 'ಫ್ಲೋರಿಯೊ' ಎಂಬವನು ಅವನ್ನು ಭಾಷಾಂತರಿಸಿದನು. 'ಬೇಕನ್ನ'ನೆಂಬ ಪ್ರಸಿದ್ಧ ಆಂಗ್ಲ ತತ್ತ್ವಜ್ಞಾನಿಯು ಅನೇಕ ಪ್ರಬಂಧಗಳನ್ನು ಬರೆದನು. ಹೊಸ ಪದ್ಧತಿಯನ್ನು ಬಳಕೆಯಲ್ಲಿ ತರುವ ಕೆಲಸವು ಅವನದು. 'ನಾನು ಪಾಂಚಜನ್ಯವನ್ನು ಊದುವವನು ಮಾತ್ರ; ಯುದ್ಧದಲ್ಲಿ ಧುಮುಕುವ

ದಿಲ್ಲ 'ವೆಂದು ಆತನೇ ಹೇಳಿದ್ದಾನೆ. ಮೊಂಟೇನನ ಕೃತಿಗಳನ್ನು ಬೇಕನ್ನನು ಓದಿದ್ದನು. ಆದರೆ ಅವನೆದುರಿಗಿದ್ದ ಮಾದರಿಯು ಹರಟೆಯದಲ್ಲ, ನಿಬಂಧದ್ದು. ಆಸ್ಥಾನದಲ್ಲಿಯೇ ಆಗಲಿ ಜಗತ್ತಿನಲ್ಲಿಯೇ ಆಗಲಿ,— ಮಹತ್ವಾಕಾಂಕ್ಷಿಗಳು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಬೇಕನ್ನನು ತನ್ನ ಸೂತ್ರಶೈಲಿಯಲ್ಲಿ ತಿಳಿಯಪಡಿಸಿದ್ದಾನೆ. ಅವನ ನೀತಿ ಚಾಣಕ್ಯ ನೀತಿ. ಸ್ನೇಹ ಪ್ರೇಮಗಳೆಂದರೆ ಅವನಿಗೆ ಪವಿತ್ರವಾದ ಭಾವನೆಗಳಲ್ಲ; ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಬೇಕಾದ ಸಾಧನೆಗಳು ಮಾತ್ರ. ಆದರೂ ಅವನ ಅಗಾಧವಾದ ಬುದ್ಧಿಶಕ್ತಿಯನ್ನು 'ನಾಸ್ತಿಕವಾದ' 'ಪ್ರವಾಸ' ಮೊದಲಾದ ಪ್ರಬಂಧಗಳಲ್ಲಿ ಕಾಣಬಹುದು. 'ತೋಟಗಳು' ಎಂಬ ಪ್ರಬಂಧದಲ್ಲಿ ಮೊಂಟೇನನಂತೆ ಆತನು ತನ್ನ ಒಲವುಗಳನ್ನೇ ವಿಶದ ಪಡಿಸಿರುವಂತೆ ಕಾಣುತ್ತದೆ. ಒಟ್ಟಿನ ಮೇಲೆ ಆದಿಪ್ರಬಂಧಕಾರನಂತೆ 'ನಾನು ಚಿತ್ರಿಸುವದು ನನ್ನನ್ನೇ' ಎಂದು ಬೇಕನ್ನನು ಹೇಳಲಾರ.

ಬೇಕನ್ನನ ಸಮಕಾಲೀನರನೇಕರು ಪ್ರಬಂಧಗಳನ್ನು ಬರೆದರು. ಕೆಲವು ವರ್ಷಗಳಾದ ಮೇಲೆ 'ಕೌವಲೆ' ಎಂಬಾತನು ಹನ್ನೊಂದು ಹರಟೆಗಳನ್ನು ಬರೆದನು. ಇಲ್ಲಿ ನಾವು ನಿಚ್ಚಳವಾಗಿ ಮೊಂಟೇನನ ರಚನಾ ಪದ್ಧತಿಯನ್ನು ಕಾಣಬಹುದು. 'ನನ್ನನ್ನು ಕುರಿತು' ಎಂಬ ಅವನ ಹರಟೆಯು 'ಸ್ವಂತದ ವಿಷಯಕ್ಕೆ ಬರೆಯುವದೆಂದರೆ ಬಹಳ ಸೂಕ್ಷ್ಮತ್ರವಾದ, ಕಠಿಣವಾದ ವಿಷಯ' ಎಂಬ ಆಕರ್ಷಕ ವಾಕ್ಯದಿಂದ ಪ್ರಾರಂಭವಾಗುತ್ತದೆ. ಆಂಗ್ಲ ಸಾಹಿತ್ಯದಲ್ಲಿ ಮೊದಲನೆಯ ಹರಟೆಯ ಮಲ್ಲನೆಂದರೆ ಇವನೆ.

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಸಿದ್ಧರಾದ ಪ್ರಬಂಧಕಾರರಲ್ಲಿ 'ಡ್ರಾಯಡನ' ಹಾಗು 'ಟೆಂಪಲ್' ಎಂಬವರು ಮುಖ್ಯರಾದವರು. ಇವರ ಕಾಲಕ್ಕೆ ಗದ್ಯಶೈಲಿಗೆ ಬಳಕೆಮಾತಿನ ದೀಕ್ಷೆಯು ದೊರೆತು ಅದು ಹಗುರಾಯಿತು, ಪದ್ಯಕಾವ್ಯದ ಶೈಲಿಯಿಂದ ಬೇರ್ಪಟ್ಟಿತು. ವಿಮರ್ಶೆಯೇ ಈ ಪ್ರಬಂಧಕಾರರ ಮುಖ್ಯ ವಿಷಯವಾಯಿತು. ಆದರೆ ಪ್ರಬಂಧಕ್ಕೆ ದೊರೆಯಬೇಕಾದ ಪ್ರಾಮುಖ್ಯವು ಹದಿನೆಂಟನೆಯ

ಶತಮಾನದಲ್ಲಿ ಗೋಚರವಾಯಿತು. ಈ ಕಾಲಕ್ಕೆ ಆಂಗ್ಲ ಗದ್ಯಸಾಹಿತ್ಯದ ಸುವರ್ಣಯುಗವೆಂದು ಹೇಳುವದು ಉಚಿತವಾಗಿದೆ. ಸ್ಟೀಲ್, ಎಡಿಸನ್, ಸ್ವಿಫ್ಟ್, ಡಿಫೊ, ಜಾನ್ಸನ್, ಗೋಲ್ಡ್‌ಸ್ಮಿಥ್ ಮೊದಲಾದ ಪ್ರಸಿದ್ಧ ಸಾಹಿತಿಗಳು ಪ್ರಬಂಧದ ವಸ್ತುಲೋಕವನ್ನು ವಿಶಾಲವಾಗಿಸಿದರು; ಹೊಸ ರೀತಿಗಳನ್ನು ಪ್ರಚಾರದಲ್ಲಿ ತಂದರು. ಜಾನ್ಸನ್ನನು ಹೇಳಿದಂತೆ 'ಪ್ರಬಂಧವೆಂದರೆ ಕಟ್ಟುನಿಟ್ಟಿಲ್ಲದ ಸಣ್ಣ ಬರವಣಿಗೆ, ಮನಸ್ಸಿನ ಸ್ವಚ್ಛಂದ ಲಹರಿಯೊಂದು' ಎಂಬ ಅಭಿಪ್ರಾಯವು ನೆಲೆಗೊಂಡಿತು. ಅಲ್ಲದೆ ಇಲ್ಲಿ ನೆನಪಿಡಬೇಕಾದ ಇನ್ನೊಂದು ಮುಖ್ಯ ಮಾತೆಂದರೆ ಪತ್ರಿಕಾವ್ಯವಸಾಯದೊಡನೆ ಪ್ರಬಂಧಕ್ಕೆ ಒದಗಿ ಬಂದ ಸಂಬಂಧ. ದೈನಿಕಪತ್ರಗಳಲ್ಲಿ ಜನತೆಯ ಅಭಿರುಚಿಯು ಹೆಚ್ಚಿತು. ವಾಚಕರ ಮನೋರಂಜನಾರ್ಥವಾಗಿ ಸಂಪಾದಕರು ಲಘುಪ್ರಬಂಧಗಳನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಸಿದ್ಧಿಸಹತ್ತಿದರು. ಇದರಲ್ಲಿ 'ಸ್ಟೀಲ್' ಮೊದಲಾದ ಸಾಹಿತಿಗಳು ನೀತಿಪ್ರಚಾರವನ್ನೂ ತಮ್ಮ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದರು. ಬೇಕನ್ನನ ಸಮಕಾಲೀನರಾದ 'ಅರ್ಲ್' ಮೊದಲಾದವರು ಬೆಳೆಯಿಸಿದ ಸ್ವಭಾವವಿಭಜನ ಪ್ರಬಂಧ, ಸಿಡ್ನಿ ಡ್ರಾಯಡನ್ ಮೊದಲಾದವರು ಬಳಕೆಯಲ್ಲಿ ತಂದ ವಿಮರ್ಶಾತ್ಮಕ ಪ್ರಬಂಧ, ಹರಟೆಗತೆ, ಹರಟೆಯೋಲೆ ಮೊದಲಾದ ವಿಭಾಗಗಳು ಟ್ಯಾಟ್ಲರ್ ಸ್ಪೆಕ್ಟೇಟರ್, ರ್‍ಯಾಂಬ್ಲರ್, ದಿ ಬೀ ಮೊದಲಾದ ಪತ್ರಿಕೆಗಳಲ್ಲಿ ಪ್ರಮುಖ ಸ್ಥಾನವನ್ನು ಆಶ್ರಯಿಸಿದವು.

ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ 'ದೇಸಿ' ಯ ಪುನರುತ್ಥಾಪನೆಯಾಗಿ ಪ್ರಬಂಧವು ಲ್ಯಾಮ್, ಹ್ಯಾಜಲಿಟ್, ಡಿಕ್ವಿನ್ಸಿ ಮೊದಲಾದವರ ಕೃತಿಗಳಲ್ಲಿ ಭಾವಗೀತೆಗಳ ಮೆರುಗನ್ನು ಸಮೀಪಿಸಿತು. ಮಾಸಪತ್ರಿಕೆಗಳು ಪ್ರಚಾರದಲ್ಲಿ ಬಂದು ವಿಶೇಷವಾಗಿ ಜನಪ್ರಿಯವಾಗಿ ವಿಮರ್ಶಾತ್ಮಕ ಪ್ರಬಂಧದ ಕ್ಷೇತ್ರವನ್ನು ವಿಶಾಲವಾಗಿಸಿದವು. ಕಳೆದ ನೂರು ವರ್ಷಗಳಲ್ಲಿ ಆಂಗ್ಲಸಾಹಿತ್ಯದಲ್ಲಿಯ ಪ್ರಬಂಧವು ದಶದಿಶೆಗಳನ್ನು ವ್ಯಾಪಿಸಿದೆ. ಅದು ಹಾಕಿದ ಹೊಂಚನ್ನು ಇಲ್ಲಿ ತಿಳಿಸುವದು ಅಸಾಧ್ಯವಾದ ಮಾತು. ಮೆಕಾಲೆ, ರಸ್ಕಿನ್, ಕಾರ್ಲಾಯಿಲ್, ಅರ್ನೋಲ್ಡ್,

ಮಿಲ್ ಮೊದಲಾದವರು ನಿಬಂಧದ ಬೇರೆ ಬೇರೆ ವಿಭಾಗಗಳಿಗೆ ನೀರುಣಿಸಿದರು. ಇತ್ತೀಚೆಗೆ ಸ್ಟೀವ್ಹನ್‌ಸನ್ ಬೆಲಾಕ್, ಬೆನ್ಸನ್, ಚೆಸ್ಟರ್‌ಟನ್, ಲಿಂಡ್, ಲೂಕಾಸ್, ಗಾರ್ಡಿನರ್ ಮೊದಲಾದವರು 'ಹರಟೆ'ಗಿರುವ ಉತ್ತಮಸ್ಥಾನವನ್ನು ಕಾಯ್ದಿದ್ದಾರೆ.

ಒಂದು ಕಾಲದಲ್ಲಿ ಪ್ರಬಂಧಕ್ಕೆ ಪತ್ರಿಕಾವ್ಯವಸಾಯದಿಂದ ಪುಟ ಸಿಕ್ಕಿತು; ಇಂದು ಅದೇ ವ್ಯವಸಾಯವೇ ಪ್ರಬಂಧದ ಅವನತಿಗೆ ಕಾರಣವಾಗಿದೆಯೆಂದು ಅನೇಕ ಆಂಗ್ಲ ವಿಮರ್ಶಕರು ಗೊಣಗುಟ್ಟುವರು. ಈ ವಾದವು ಇಂದಿಗೆ ನಮ್ಮಲ್ಲಿ ನಿರರ್ಥಕವಾದುದು. ನಮ್ಮ ಪ್ರಬಂಧಗಳೂ ದೈನಿಕಗಳೂ ಇನ್ನೂ ತೊಟ್ಟಿಲಗೂಸುಗಳಾಗಿವೆ. ಅಂದ ಮೇಲೆ ಇವೆರಡಕ್ಕೂ ಜೋಗುಳವನ್ನು ಹಾಡಿ ಸುವ್ವಿಗೆಯ್ಯದೆ ನಾವು ಇನ್ನೇನು ಮಾಡಬಹುದು ?

(೩)

ಪ್ರಬಂಧವೆಂದರೇನು ? ಅದು ಗದ್ಯಕಾವ್ಯದ ಪ್ರಕಾರವೊಂದು; ಚಿಕ್ಕದಾದ, ಚೊಕ್ಕಾದ ಬರವಣಿಗೆ. ಇದನ್ನು ನಾವು ಎರಡು ಭಾಗಗಳಾಗಿ ವಿಂಗಡಿಸಬಹುದು: (೧) ನಿಬಂಧ. (೨) ಹರಟೆ. ನಿಬಂಧವೆಂದರೆ ಮಾಹಿತಿ, ವಿಮರ್ಶೆ ಇಲ್ಲವೆ ವಿಚಾರಪ್ರಚಾರಕ್ಕಾಗಿ ಬರೆದ ಗದ್ಯಲೇಖ. ಇದು ಸಣ್ಣದಿದ್ದರೂ ಸರಿ, ಇಡಿ ಒಂದು ಪುಸ್ತಕದಷ್ಟು ದೊಡ್ಡದಿದ್ದರೂ ಸರಿ! ಇದರಲ್ಲಿ ರಸಲೀಲೆಯಿಲ್ಲ, ಶೈಲಿಯ ಕಲಾವಂತಿಕೆಯೂ ಮಾತಿನ ಚಮತ್ಕಾರವೂ ಮಾತ್ರ ಕಂಡುಬರಬಹುದು. ನಿಬಂಧಕಾರನು 'ನೂತನ ಬ್ರಹ್ಮ'ನಲ್ಲ; ಆತನು ಪ್ರಪಂಚದ ಭಾಷ್ಯಕಾರ, ಮಲ್ಲಿನಾಥ ಇಲ್ಲವೆ ಸಂಗ್ರಾಹಕ. ಎಷ್ಟು ಬರೆದರೂ ನಿಬಂಧದ ವಿಷಯದ ಪರಿಸಮಾಪ್ತಿಯಾಯಿತೆಂದು ಓದುಗರಿಗೆನಿಸುವದಿಲ್ಲ. ಆದರೆ ಹರಟೆಮಲ್ಲನ ರೀತಿ ಬೇರೆ. ಅವನ ವಿಷಯವು ಯಾವುದೇ ಆಗಿರಲಿ, ಅದನ್ನು ಕುರಿತು ತನ್ನಲ್ಲಿ ಜನಿಸಿದ ಭಾವನಾಲಹರಿ, ವಿಚಾರಲಹರಿಗಳನ್ನಷ್ಟು ಅವನು ಬಿಚ್ಚಿಡುತ್ತಾನೆ. ವ್ಯಕ್ತಿತ್ವನಿರೂಪಣೆಯೇ ಅವನ ಮುಖ್ಯಕಾರ್ಯವಾಗಿದೆ. ಆದಕಾರಣ ಚಿಕ್ಕದಾಗಿದ್ದರೂ ಗೀತೆಯಲ್ಲಿಯಂತೆ ಹರಟೆಯಲ್ಲಿ ಪರಿಪೂರ್ಣತೆಯು ಒಡ

ಮೂಡುತ್ತದೆ,–ಆಲದೆಲೆಯ ಮೇಲೆ ರಂಗನು ಮಲಗಿದಂತೆ, ಸಗುಣದಲ್ಲಿ ನಿರ್ಗುಣವು ಸಮೃದ್ಧಿಯಾಗಿ ನಿಂತಂತೆ, ದೇಹದ ಉನ್ನತಾಲಯದಲ್ಲಿ ಆತ್ಮವು ನೆಲೆಸಿದಂತೆ. ನಿಬಂಧಕಾರನು ಶೈಲಿಶಿಲ್ಪಿ; ಹರಟೆಮಲ್ಲನು ಆತ್ಮವಿನೋದಿ. ಶೈಲಿಯು ಎಷ್ಟು ವಿಚಿತ್ರವಾಗಿಯೇ ಇರಲಿ, ತನ್ನ ರಸಾನುಭವವನ್ನು ಅದು ಸಂಪೂರ್ಣವಾಗಿ ನಿರೂಪಿಸಿದರೆ ಸಾಕು; ಆತ್ಮವಿನೋದಿಗೆ ಸಮಾಧಾನವಾಗುತ್ತದೆ. ಹರಟೆಯು ಬುಗ್ಗೆಯಂತೆ ಹೃದಯದಿಂದ ಪುಟಿಯುವ ಬದುಕು; ನಿಬಂಧವು ಒಕ್ಕಲುತನಕ್ಕೆಂದು ಕಟ್ಟಿಸಿ ಹರಿಯಿಸಿದ ಕಾಲುವೆ. ಎರಡರಲ್ಲಿಯೂ ಪೂರ್ಣತೆಯಿರಬಹುದು. ಆದರೆ ನಿಬಂಧದ ಪೂರ್ಣತೆಯು ವಾಕ್ಯವಾಕ್ಯಗಳ ಜೋಡಣೆಯ ಮೇಲೆ, ವಿಚಾರದಿಂದ ವಿಚಾರಕ್ಕೆ ಹಾರುವ ಜಾಣ್ಮೆಯ ಮೇಲೆ ನಿಂತಿರುತ್ತದೆ; ಅದರದು ಕೃತಕ ಪೂರ್ಣತೆ. ಹರಟೆಯ ಪೂರ್ಣತೆಯು ಸ್ವಯಂಭುವಿನ ರೀತಿಯದು,- ಒಂದು ಬಳ್ಳಿ, ಸಂಜೆ ಇಲ್ಲವೆ ಕನಸಿದ್ದಂತೆ. ನಿಬಂಧದ ಹಾಗು ಹರಟೆಯ ವಸ್ತುವು ಒಂದೇ ಆಗಿರಬಹುದು. ಹದಿನೇಳನೆ ಶತಮಾನದ ಸುಕುಮಾರ ಪ್ರಯೋಗಗಳನ್ನು ಕುರಿತು ಬರೆದ 'ಲ್ಯಾಮ್' ಹಾಗು 'ಡೋಬ್ರಿ' ಇವರ–ಪ್ರಬಂಧಗಳನ್ನು ಹೋಲಿಸಬಹುದು. ಇಲ್ಲಿಯ ವಿಷಯವು ಒಂದೇ ಆದರೂ ವಿಧಾನದಲ್ಲಿ ಅಜಗಜದಷ್ಟು ಅಂತರವಿದೆ. ಡೋಬ್ರಿಯು ಆ ಕಾಲದ ಲಕ್ಷಣಗಳನ್ನು ವಿಮರ್ಶಿಸುತ್ತಾನೆ, ಸುಕುಮಾರ ಪ್ರಯೋಗದ ಬಗ್ಗೆ ಅಂದಿನ ಲೇಖಕರಿಗಿದ್ದ ವಿಚಾರಗಳನ್ನು ಚರ್ಚಿಸುತ್ತಾನೆ, ತನ್ನ ಕೆಲವೊಂದು ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಾನೆ. ಅವನ ಅಭಿಪ್ರಾಯದಲ್ಲಿ ಸತ್ಯಾಂಶವಿದ್ದರೆ ಅವನ ಪ್ರಬಂಧವು ಯಶಸ್ವಿಯಾಗಿದೆಯೆಂದು ಹೇಳಬೇಕಾಗುತ್ತದೆ. ಒಂದು ವೇಳೆ ಲ್ಯಾಮ್‌ನ ಅಭಿಪ್ರಾಯವು ತಪ್ಪಾಗಿರಬಹುದು; ಆದರೆ ಅವನು ನಿರ್ಮಿಸಿದ ಶಬ್ದಚಿತ್ರಗಳಲ್ಲಿ, ತೋರಿಸಿದ ಸಹಾನುಭೂತಿಯಲ್ಲಿ, ವ್ಯಕ್ತಪಡಿಸಿದ ಸ್ವಾನುಭೂತಿಯಲ್ಲಿ ರಸವಂತಿಕೆಯು ನಿರಂತರವಾಗಿ ನೆಲೆಗೊಂಡಿದೆ. ಹರಟೆಯ ವಸ್ತುವು ವಾಡಿಕೆಯಾಗಿ ಆತ್ಮಾನುಭವ ಇಲ್ಲವೆ ಆತ್ಮಚರಿತ್ರೆಗೆ ಹೊಂದಿಕೊಂಡಿರುತ್ತದೆ; ವಿಷಯವು ಬೇರೆಯಾಗಿದ್ದರೂ ವಿಧಾನವು ಸಂಪೂರ್ಣವಾಗಿ ವ್ಯಕ್ತಿಗತವಾಗಿರುತ್ತದೆ.

ಹರಟೆಮಲ್ಲನು ತೂರಾಡುವ ಸುಭಾಷಿತಗಳನ್ನೂ ಅಡ್ಡಗತೆಗಳನ್ನೂ ನೋಡಬಹುದು; ನಿಬಂಧಕಾರನು ಹೀಗೆ ಮಾಡಿದರೆ ಶಿವಪೂಜೆಯಲ್ಲಿ ಕರಡಿಯನ್ನು ಬಿಟ್ಟಂತಾಗುವದು.

ನಿಬಂಧಕಾರನಿಗೆ ತನ್ನ ವಿಷಯದ ಬಗ್ಗೆ ಸಂಪೂರ್ಣ ಜ್ಞಾನವಿದ್ದರೆ ಸಾಕು; ಅವನ ಕೈಹಿಡಿದವರಿಲ್ಲ. ಆದರೆ ಹರಟೆಮಲ್ಲನು 'ವಿದ್ಯುತ್ ಶಕ್ತಿ'ಯ ಮೇಲೆ ಹರಟೆಯನ್ನು ಬರೆದು ವಿದ್ಯುತ್ತೆಂದರೇನೆಂಬುದು ಗೊತ್ತಿಲ್ಲದಿದ್ದರೂ ನಡೆಯುತ್ತದೆ. ತನ್ನ ವ್ಯಕ್ತಿತ್ವವನ್ನು ಓದುಗರ ಹೃದಯಕ್ಕೆ ಮುಟ್ಟಿಸುವಂತಹ ಪ್ರತಿಭೆಯು ಅವನಲ್ಲಿದ್ದರೆ ಸಾಕು. ಅವನಲ್ಲಿ ಹಟಮಾರಿತನವಿರಕೂಡದು. ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು; ಆದರೆ ಅದಕ್ಕೆ ಜೋತುಕೊಂಡು ಕೂತಿರಬಾರದು. ಆಗಾಗ ಹರಟೆಮಲ್ಲನು ಪಾಠ ಕಲಿಸಬಹುದು; ವಿನೋದ, ಸರಸ ಸಜ್ಜನಿಕೆ, ವಿಡಂಬನೆ ಮೊದಲಾದ ಗುಣಗಳ ಆಕರ್ಷಣವು ಮಾತ್ರ ಆ ಪಾಠದಲ್ಲಿ ಬೆರೆತಿರಬೇಕು. ಅಲ್ಲದೆ ಒಬ್ಬ ಆಂಗ್ಲ ವಿಮರ್ಶಕನು ಹೇಳುವಂತೆ ಹರಟೆಮಲ್ಲನಲ್ಲಿ ಆರ್ಷ ದೃಷ್ಟಿಯೂ ಬೇಕು, ಆಳವಾದ ತಿಳುವಳಿಕೆ ಬೇಕು.

ಇನ್ನೊಂದು ಮಾತು. ಹರಟೆಯು ವಚನಕಾವ್ಯವೆಂದು ಹಿಂದೆಯೇ ಹೇಳಿದೆ. ಒಂದು ಭಾವನಾಮಯ ಸನ್ನಿವೇಶದಿಂದ ಗೀತಕಾರನೂ ಹರಟೆಮಲ್ಲನೂ ಸ್ಫೂರ್ತಿಹೊಂದುತ್ತಾರೆ; ಆ ಸನ್ನಿವೇಶದ ರಸಮಯತೆಯನ್ನು ಬಣ್ಣಿಸುತ್ತಾರೆ; ಅದರಲ್ಲಿಯೇ ಮುಕ್ತಿಹೊಂದುತ್ತಾರೆ. ಅಸಮಾಧಾನ, ಉತ್ಕಂಠತೆ, ಸಾತ್ವಿಕ ಸಂತಾಪ, ಆನಂದ, ತಾತ್ವಿಕ ಅನುಭೂತಿ,– 'ಮೂಡು' ಯಾವುದೇ ಬಗೆಯದಿರಬಹುದು. ರಸನಿಮಿಷದ ಪೂರ್ಣತೆಯೆ ಕೃತಿಗೆ ಬರುತ್ತದೆ; ಅಲ್ಲದೆ ಅದರ ಮೂಲಕ ಲೇಖಕನ ವ್ಯಕ್ತಿತ್ವವೂ ಕಾಣಿಸಿಕೊಳ್ಳುತ್ತದೆ. ಗೀತೆಗೂ ಹರಟೆಗೂ ಇರುವ ಭೇದವನ್ನು ಈ ಮೊದಲೆ ತಿಳಿಸಿದೆ.

ಇನ್ನು ಹರಟೆಯನ್ನು ಕುರಿತು ಆಂಗ್ಲ ವಿಮರ್ಶಕರು ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಸಂಗ್ರಹಿಸಬಹುದು. (೧) ಗೀತೆಯಂತೆ ಮಿತಿಮೀರಿ ಹೊರಹೊಮ್ಮುವ ಉತ್ಕಟ ರಸೋದ್ರೇಕದಿಂದ ಅದು

ಬಂದುದಲ್ಲ; ವಿಶ್ರಾಂತಿಪೂರ್ಣವಾದ ಮನಃಸ್ಥಿತಿಯಲ್ಲಿ ಲಹರಲಹರಿಯಾಗಿ ಸಾವಕಾಶವಾಗಿ ವ್ಯಕ್ತವಾಗುವದು. (೨) ಹರಟೆಮಲ್ಲನು ಕವಿಯಹುದು; ಆದರೆ ವೀಣೆಯನ್ನು ಬದಿಗಿರಿಸಿ ಚಿಲಿಮೆಯನ್ನು ಹೊತ್ತಿಸಿ ವಿಚಾರಮಗ್ನನಾಗಿ ಶಾಂತವಾಗಿ ಹೊಗೆಬಿಡುತ್ತ ಕುಳಿತ ಕವಿ; ಅಗ್ಗಿಷ್ಟಿಗೆಯೆದುರಿಗೆ ಆರಾಮ ಕುರ್ಚಿಯಲ್ಲಿ ಕುಳಿತ ತತ್ವಜ್ಞಾನಿಯುವನು.—'ಪ್ರೀಸ್ಟ್ಲೀ' (೩) ಕಲಾಪೂರ್ಣವಾದ, ಶಾಶ್ವತವಾಗುಳಿಯುವ ಹರಟೆಯೆಂದರೇ 'ಹರಟೆ'; ವಾಚಕನೆದುರು ಲೇಖಕನು ತನ್ನ ಸ್ನೇಹದ ಗಂಟನ್ನೆಲ್ಲ ಬಿಚ್ಚುವನು. (೪) ಮೂಲತಃ ಹರಟೆಯು ಗಾತ್ರವು ಸಣ್ಣದು. ಆದರೆ ತನ್ನ ಗಾತ್ರಕ್ಕೆ ಅನುರೂಪವಾಗುವಂತೆ ಅದು ಎಲ್ಲ ಉದಾತ್ತ ಭಾವನೆಗಳನ್ನೂ ಸಾಹಿತ್ಯಕಲೆಯ ಶೃಂಗಾರಗಳನ್ನೂ ಸೇರಿಸಿಕೊಳ್ಳುವದು ವಿಚಾರಗಳಿಗಾಗಿ ಕಲ್ಪಿಸಿದ ಅದರ ಸೂಕ್ಷ್ಮರಚನಾಕ್ರಮವು ಮುಗಿಲಷ್ಟು ವಿಗಿಲಾಗಿ ಹಿರಿ ಹಿಗ್ಗನ್ನು ಬೀರುತ್ತದೆ—ಒಲೆರ್ಗ ವಿಲ್ಯಮ್ಸ್. (೫) ಒಳ್ಳೆಯದಾದ ಹರಟೆಯು ಅನಂತಕಾಲದಷ್ಟು ಅಪಾರವಾದ ನಿಮಿಷದಲ್ಲಿ ಹುಟ್ಟಿ ಅದರಲ್ಲಿಯೇ ಮುಗಿಯುತ್ತದೆ. ಜೀವನದಂತೆ ಅದು ಬರಿ ಲೀಲೆ; ಆದರೆ ಜೀವನಕ್ಕಿರುವಂತೆ ಒಂದು ಗೂಢವಾದ ಉದ್ದೇಶವೂ ಅದಕ್ಕಿದೆ. (೬) ಸುಮಾರು ನಾಲ್ವತ್ತು ವರ್ಷ ವಯಸ್ಸಾದ ಗೃಹಸ್ಥನು ಊಟಮಾಡಿ ಶಾಂತವಾಗಿ ತನ್ನಷ್ಟಕ್ಕೆ ತಾನು ಆಡುವ ಮಾತಿನಂತಿರಬೇಕು, ಹರಟೆ. (೭) ಹರಟೆಯು ಕಲಾಪೂರ್ಣವಾದ ಕೃತಿ. ಆದಕಾರಣ ಕಲೆಯ ನಿಯಮಗಳೆಲ್ಲ ಅದಕ್ಕೆ ಅನ್ವಯಿಸುವವು. ಅದರಲ್ಲಿ ನಯ, ನಾವೀನ್ಯ, ಆತ್ಮೀಯತೆ ಹಾಗು ಚಿಗುರೆಲೆಯ ಬೆಡಗಿರಬೇಕಲ್ಲದೆ ಅಷ್ಟಷಟ್ಪದಿಯನ್ನು ರಚಿಸಲು ಬೇಕಾದಷ್ಟು ಜಾಗರೂಕತೆಯು ಇಲ್ಲಿಯೂ ಬೇಕು. ಗೊಡ್ಡುಹರಟೆಗೂ ಹಾಳುಹರಟೆಗೂ ಇಲ್ಲಿ ಸ್ಥಾನವಿಲ್ಲ. ಕಲಾವಂತಿಕೆ ಹಾಗು ಮಾತುಗಾರಿಕೆಗಳ ಮಧುರ ಸಂಗಮವಾಗಬೇಕು. (೮) ಹರಟೆಯಲ್ಲಿ ಮಾಹಿತಿಯನ್ನು ಉಪಯೋಗಿಸಬಹುದು, ಸಂಗತಿಗಳನ್ನು ಕಲೆಹಾಕಬಹುದು. ಆದರೆ ಹರಟೆಯು ಬೆಳಕಿನಲ್ಲಿ ಎತ್ತಿ ಹಿಡಿಯಬೇಕಾದ ಗುಣಗಳೆಂದರೆ,—ಅಭಿರುಚಿ, ಸದಸದ್ವಿವೇಕಬುದ್ಧಿ ಮತ್ತು ಅನನ್ಯವಾದ ವ್ಯಕ್ತಿತ್ವದ ನಾವೀನ್ಯ.

(೪)

ನಿಬಂಧ ಹಾಗು ಹರಟೆಯೆಂಬ ವಿಭಾಗಗಳು ಅನೇಕ ಸಲ ಬೆರೆಯುವದುಂಟು. ಇವುಗಳ ಬೆರಿಕೆಯಿಂದ ಸಣ್ಣಪುಟ್ಟ ಭೇದಗಳು ಉದ್ಭವಿಸುತ್ತವೆ. ಅವನ್ನು ಇಲ್ಲಿ ಕೊಟ್ಟಿದೆ.

**(೧) ಚಿಂತನಪರ ಪ್ರಬಂಧ**:—ಇದರಲ್ಲಿ ಬೇಕನ್ನನ ಸೂತ್ರ ಶೈಲಿಯ ಉಪಯೋಗವಾಗಿರಬಹುದು. 'ಇತಿಹಾಸ'ವು ಇದಕ್ಕೆ ಉದಾಹರಣೆಯಾಗಿದೆ. 'ಶಾಂತಿ'ಯೂ ಚಿಂತನಪರವಾಗಿದೆ.

**(೨) ಚರಿತ್ರ ಪ್ರಬಂಧ**:—ಇದನ್ನು ಸ್ವಭಾವಚಿತ್ರಗಳಲ್ಲಿ ಕಾಣಬಹುದು. ಡಾ. ಜಾನ್ಸನ್, ಹ್ಯಾಜಲಿಟ್, ಎ. ಜಿ. ಗಾರ್ಡಿನರ ಮೊದಲಾದವರು ಈ ಮಾದರಿಯ ಲೇಖಗಳನ್ನು ಬರೆದಿದ್ದಾರೆ. 'ಭರತಖಂಡದ ಜೀವಜ್ಯೋತಿ'ಗಳು, 'ಕನ್ನಡ ಕಿಡಿಗಳು' ಮೊದಲಾದ ಸಂಗ್ರಹಗಳಲ್ಲಿ ಇದರ ಬಳಕೆಯನ್ನು ಕಾಣಬಹುದು.

**(೩) ಐತಿಹಾಸಿಕ ಪ್ರಬಂಧ**:—ಕಾರಲಾಯಿಲ್, ಮೇಕಾಲೆ, ಫ್ರೀಮನ್ ಮೊದಲಾದ ಲೇಖಕರು ಈ ಜಾತಿಯವರು. ಕರ್ನಾಟಕ ಗತವೈಭವದಲ್ಲಿಯ ಕೆಲವು ಭಾಗಗಳನ್ನು ಇಲ್ಲಿ ಉದಾಹರಿಸಬಹುದು.

**(೪) ವೈಜ್ಞಾನಿಕ ಪ್ರಬಂಧ**:—ಹಕ್ಸ್ಲೀ, ಟಿಂಡಾಲ್, ಡಬ್ಲ್ಯು. ಎಚ್. ಹಡ್ಸನ್ ಮೊದಲಾದವರು ಈ ಮಾದರಿಯನ್ನು ಎತ್ತಿ ಹಿಡಿದಿದ್ದಾರೆ. ಶಾಸ್ತ್ರೀಯ ವಿಷಯಗಳನ್ನು ಸಾಹಿತ್ತಿಕ ರೀತಿಯಲ್ಲಿ ನಿರೂಪಿಸುವದೇ ಇವರ ಮುಖ್ಯೋದ್ದೇಶ. 'ಪ್ರಬುದ್ಧ ಕರ್ನಾಟಕ'ದಲ್ಲಿ ಆಗಾಗ ಇಂತಹ ಲೇಖಗಳು ಬರುವದುಂಟು.

**(೫) ವಿಮರ್ಶಾತ್ಮಕ ಪ್ರಬಂಧ ಇಲ್ಲವೆ ವಿವೇಚನಾತ್ಮಕ ಪ್ರಬಂಧ**:—ವಿಮರ್ಶೆಯು ಸಾಹಿತ್ಯವನ್ನು ಕುರಿತಿರಬಹುದು; ಇಲ್ಲವೆ ಬೇರೆ ಯಾವ ವಿಷಯವಿದ್ದರೂ ಇರಬಹುದು. ಸಿಡ್ನೆ, ಡ್ರಾಯಡನ್, ಎಡಿಸನ್, ಡಾ. ಜಾನ್ಸನ್ ಮೊದಲಾದವರು ಇದನ್ನು ಪ್ರಸಿದ್ಧಿಗೆ ತಂದರು. 'ಕಲೆ ಮತ್ತು ಜೀವನ'ವು ಇಲ್ಲಿಯ ಉದಾಹರಣೆಯಾಗಿದೆ.

(೬) **ಸ್ವಭಾವವಿಭಜನ ಪ್ರಬಂಧ**:–ಥಿಯೊಫ್ರ್ಯಾಸ್ಟಸ್ ಎಂಬ ಲೇಖಕನಿಂದ ಇದು ಪ್ರಾರಂಭವಾಯಿತು. ಆಂಗ್ಲ ಭಾಷೆಯಲ್ಲಿ 'ಓವ್ಹೆಬರಿ' 'ಅರ್ಲ' ಮೊದಲಾದವರು ಇದನ್ನು ಪ್ರಚಾರಕ್ಕೆ ತಂದರು. 'ಗೋಪಿ, ವಿದ್ಯಾರ್ಥಿ, ಪ್ರಾಧ್ಯಾಪಕ, ಅಡಿಗೆಯವ, ವರ್ತಕ' ಮುಂತಾದ ವಿಷಯ ಗಳನ್ನು ಚಿತ್ರಿಸುವದೇ ಇದರ ಲಕ್ಷಣವಾಗಿದೆ. ವ್ಯವಸಾಯವಿಶೇಷದಿಂದ ಬಂದೊದಗಿದ ಸ್ವಭಾವವೈಲಕ್ಷಣ್ಯಗಳನ್ನು ಮಾರ್ಮಿಕವಾಗಿಯೂ ವಿನೋದಪೂರ್ಣವಾಗಿಯೂ ಈ ಮಾದರಿಯ ಲೇಖಕನು ಹೊರಗೆಡಹು ತ್ತಾನೆ. ಇದು ಕನ್ನಡದಲ್ಲಿ ಇನ್ನೂ ಬರಬೇಕಾದುದು. ಕ್ಲ್ಯಾರೆಂಡನ್ ಮೊದಲಾದ ಲೇಖಕರು ಇದನ್ನು ಐತಿಹಾಸಿಕ ವಸ್ತುಗಳಿಗಾಗಿ ಉಪ ಯೋಗಿಸಿದರು. ಚರಿತ್ರಪ್ರಬಂಧವು ಇದರಿಂದಲೇ ಉದ್ಭವಿಸಿತು. 'ಕೆನ್ಸಿಂ ಗ್ಟನ್ ಪಾರ್ಕ'ನಲ್ಲಿ ಇದನ್ನು ಕೆಲಮಟ್ಟಿಗೆ ಕಾಣಬಹುದು; 'ಮುಂದಾಳು ಗಳು–ಮುಂದಾಳುಗಳು' ಹಾಗು 'ಮಂಕರು–ಚುಕ್ಕರು' ಎಂಬಲ್ಲಿ ಇದು ಇನ್ನೂ ಒಡೆದು ಕಾಣುತ್ತದೆ.

(೭) **ಲಘುಕಥಾಪ್ರಬಂಧ**:— ನೀತಿಯನ್ನಾಗಲಿ ಮತ್ತಾವ ಉದ್ದೇಶವನ್ನಾಗಲಿ ವಿಶದಪಡಿಸಲೆಸಗಿದಾಗ ಇದು ಉದ್ಭವಿಸುತ್ತದೆ. ಇದಕ್ಕೆ ಸಣ್ಣಕತೆಯ ಕಟ್ಟುಗಳಿಲ್ಲ; ಅಡ್ಡಗತೆಗಳು ಹೇರಳವಾಗಿ ಬರ ಬಹುದು. ಸಮಯವಿಲ್ಲದೆ ಕಥಾನಕವು ಸಾಗಬಹುದು. 'ಹಿತೋಪ ದೇಶ' ಮೊದಲಾದ ಸಂಗ್ರಹಗಳಲ್ಲಿ ಇದು ರೂಪಗೊಂಡಿದೆ. ಎಡಿಸನ್, ಗೋಲ್ಡ್‌ಸ್ಮಿಥ್, ಜಾನ್ಸನ್, ಮುಂತಾದ ಲೇಖಕರು ಇದನ್ನು ಪ್ರಸಿದ್ಧಿಗೆ ತಂದರು. '**ಮಿರ್ಝಾನ ಕಣಸು**' ಎಂಬ ಎಡಿಸನ್ನನ ಲೇಖವು ಇದಕ್ಕೆ ಸುಂದರವಾದ ಉದಾಹರಣೆಯಾಗಿದೆ. 'ಇನ್ನೊಂದು ಪುರಾಣ' ಹಾಗು 'ವಿಮೆ ಯಮನನ್ನೇ ಹೆದರಿಸಿತು' ಎಂಬವು ಇಲ್ಲಿಯ ಉದಾಹರಣೆಗಳು.

(೮) **ವರ್ಣನಪರ ಪ್ರಬಂಧ**:—ಒಂದು ವಿಷಯದ ಎಲ್ಲ ಬಗೆ ಗಳನ್ನು ಪೂರ್ಣವಾಗಿ ನಿರೂಪಿಸುವದೇ ಇದರ ಮುಖ್ಯೋದ್ದೇಶವಾಗಿದೆ. 'ಮುಗಿಲುಗಳು', 'ಮಾವು', 'ಬಜಾರ' ಮುಂತಾದವುಗಳನ್ನು ಓದ ಬಹುದು.

**(೯) ಪತ್ರಪ್ರಬಂಧ ಇಲ್ಲವೆ ಹರಟೆಯೋಲೆ**:—ಆಪ್ತಮಿತ್ರರಿಗೆ ಬರೆದ ಪತ್ರಗಳಲ್ಲಿ ಸಾಹಿತ್ಯಗುಣವು ನೆಲೆಗೊಂಡಿದ್ದರೆ ಅನೇಕ ಸಲ ಅವು ಈ ಭಾಗದಲ್ಲಿ ಸೇರುತ್ತವೆ. 'ಲ್ಯಾಮ್' ಎಂಬವನ 'Distant Correspondents' ಎಂಬ ಹರಟೆಯನ್ನು ನೋಡಬಹುದು. ಪತ್ರಗಳಷ್ಟು ವೈಯಕ್ತಿಕವಾಗಿರದಿದ್ದರೂ ಇದರಲ್ಲಿ ಹರಟೆಗಳಲ್ಲಿ ಕಂಡುಬರುವ ವ್ಯಕ್ತಿತ್ವವಿದೆ.

**(೧೦) ಹರಟೆ**:– 'ಭೂವೈಕುಂಠ' 'ನಾದುರುಸ್ತು' 'ಹೋಟೆಲುಗಳು' ಮುಂತಾದುವು ಹರಟೆಯ ಉದಾಹರಣೆಗಳು.

(೧೧) '**ಸಾವಿನ ಕೂಡ ಸರಸ**',– '**ಪುರುಷ ಸರಸ್ವತಿ ಒಬ್ಬನೆ? ಇಬ್ಬರೆ?**' ಹಾಗು '**ಬರೆಹಗಾರನ ಬಜೆಟ್ಟು**' ಎಂಬ ಲೇಖಗಳನ್ನು ನೋಡಿದರೆ ಹರಟೆಗೆ ಸಮೀಪಿಸಿರುವ ಇನ್ನೊಂದು ವಿಧವು ಹೊಳೆಯುತ್ತದೆ. ವಿನೋದ, ಅಣಕು, ವಿಡಂಬನ ಇಲ್ಲವೆ ಮತ್ತಾವುದೊಂದು ಭಾವವು ಪ್ರಾಧಾನ್ಯವನ್ನು ಹೊಂದಿ, ಇಲ್ಲಿಯು ರೀತಿಯಲ್ಲಿ ಪ್ರಬಂಧದ ಬೇರೆಬೇರೆ ರೂಪಗಳು ಮಿಶ್ರವಾಗಿರಬಹುದು. 'ಪುರುಷ ಸರಸ್ವತಿ'ಯಲ್ಲಿ ಅಣಕು ಅಡಕವಾಗಿದ್ದು ಓದಲಿಕ್ಕೆ ವಿಮರ್ಶಾತ್ಮಕ ಪ್ರಬಂಧದಂತಿದೆ. 'ಸಾವಿನ ಕೂಡ ಸರಸ' ದಲ್ಲಿ ಲಘುಕಥಾಪ್ರಬಂಧ ಹಾಗು ಸ್ವಭಾವವಿಭಜನ ಪ್ರಬಂಧಗಳ ರೀತಿಗಳು ಕೂಡಿಕೊಂಡಿರುತ್ತವೆ.

ಕೆಲವು ಪ್ರಕಾರಗಳನ್ನು ಮಾತ್ರ ಇಲ್ಲಿ ನಿದರ್ಶಿಸಿದ್ದೇನೆ. ಇವೆ ವಿವಿಧ ರೀತಿಗಳಲ್ಲಿ ಕೂಡಿಕೊಳ್ಳಬಹುದು.

**(೫)**

ಸಂಸ್ಕೃತ–ಕನ್ನಡಗಳಲ್ಲಿ ಹರಟೆಗಿರುವ ಪರಂಪರೆಯನ್ನು ಬೇಂದ್ರೆಯವರು 'ಹರಟೆಗಳು' ಎಂಬ ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಚರ್ಚಿಸಿದ್ದಾರೆ. 'ಹರಟೆಗಳು' ಹೊರಟ ಮೇಲೆ ಅನೇಕ ಪ್ರಬಂಧಸಂಗ್ರಹಗಳು ಪ್ರಕಟವಾಗಿವೆ. ಅದಕ್ಕಿಂತ ತುಸು ಮೊದಲು 'ಫುಲ್ಲಯ್ಯನ ಪ್ರಬಂಧಗಳು' ಎಂಬ ಚಿಕ್ಕ ಹೊತ್ತಿಗೆಯು ಪ್ರಸಿದ್ಧವಾದಂತೆ ಕಾಣುತ್ತದೆ.

'ಹೊಸಹುಟ್ಟು', 'ಹಗಲುಗನಸುಗಳು' 'ಋತುಸಂಹಾರ', 'ವಿನೋದ ಚಿತ್ರಗಳು', 'ರಾಮಾಚಾರಿಯ ನೆನಪು', 'ಪಂಚಾಮೃತಂ' 'ಕೋದಂಡನ ಉಪನ್ಯಾಸಗಳು' ಮೊದಲಾದ ಗ್ರಂಥಗಳನ್ನು ಓದಿದಾಗ ಇಂದಿನ ಪ್ರಬಂಧದ ವ್ಯಾಪಕತೆಯು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಸಂಗ್ರಹದಲ್ಲಿಯ ಪ್ರಬಂಧಗಳನ್ನು ಹೆಣೆದ ಕ್ರಮವು ಕೆಳಗಿನಂತಿದೆ: ಮೊದಲಿನ ಐದು (ಶಾಂತಿ, ಇತಿಹಾಸ, ಕೋಗಿಲ, ತಾರೆಗಳು, ಭೂವೈಕುಂಠ) ಈ ಪ್ರಬಂಧಗಳಲ್ಲಿ ಪರಂಪರೆಯ ಪ್ರೀತಿಯಿದೆ. ನಮ್ಮಲ್ಲಿಯ ಕ್ರಾಂತಿಯುಗದ ಮೊದಲನೆಯ ಅವಸ್ಥೆಯು ಕಳೆದುಹೋಗಿ ಕ್ರಾಂತಿಗೂ ಪರಂಪರೆಯ ಹಿನ್ನೆಳಲನ್ನು ಇಂದು ನಾವು ಕಲ್ಪಿಸುತ್ತಿರುವೆವೆಂಬುದಕ್ಕೆ ಈ ಪ್ರಬಂಧಗಳೇ ಸಾಕ್ಷಿಯಾಗಿವೆ.

ಮುಂದಿನ ಮೂರರಲ್ಲಿ (ನೌಕಾಚಂದ್ರ, ನಾದುರುಸ್ತ, ಹರಟೆ) ಅಂತರ್ಮುಖತೆಯು ಒಡೆದು ಕಾಣುತ್ತದೆ. ತನ್ನ ಕನಸನ್ನೋ ಮನಸನ್ನೋ ಲೇಖಕನು ವಿಭಜಿಸಿ ತಿಳಿಯಲು ಪ್ರಯತ್ನಿಸುತ್ತಾನೆ. ಈ ಎಂಟು ಪ್ರಬಂಧಗಳೂ ಒಂದೊಂದು 'ಮೂಡಿ'ನ ಪ್ರತೀಕಗಳಾಗಿವೆ. ಧ್ಯಾನ, ಕನಸು, ಕನವರಿಕೆ, ಪ್ರತಿಭೆ, ದರ್ಶನ,–ಇವೇ ಮುಂತಾದ ಭಾವಗಳನ್ನು ಇಲ್ಲಿಯ ಲೇಖಕರು ಉಪಯೋಗಿಸಿದ್ದಾರೆ.

'ಜೋಗದರ್ಶನ' ವನ್ನು ಹಿಡಿದು 'ಕಾಯಿಲೆಗಳನ್ನೊಳಗೊಂಡ ಪ್ರಬಂಧಗಳೆಲ್ಲ (ಜೊಗದರ್ಶನ, ಕೆನ್‌ಸಿಂಗ್‌ಟನ್ ಪಾರ್ಕ, ಮುಗಿಲು, ಮಾವು, ಇಜಾರ, ಕಾಯಿಲೆಗಳು) ವರ್ಣನಪರವಾಗಿವೆ. 'ಜೋಗದರ್ಶನ'ವು ಕಥನಪರವಾಗಿದ್ದರೂ ಅದಕ್ಕೆ ಈ ಮಾತು ಅನ್ವಯಿಸುತ್ತದೆ. ಅಲ್ಲದೆ 'ಜೋಗದರ್ಶನ', 'ಪಾರ್ಕ', 'ಮುಗಿಲುಗಳು' ಮತ್ತು 'ಮಾವು' ಇವು ಪ್ರಕೃತಿಯ ನೋಟಗಳನ್ನು ಕುರಿತು ಬರೆದ ಪ್ರಬಂಧಗಳು.

'ಇನ್ನೊಂದು ಪುರಾಣ', 'ಆತ್ಮಹತ್ಯಾಯೋಗ' ಹಾಗು 'ಸಾವಿನ ಕೂಡ ಸರಸ' ಎಂಬ ಲೇಖಗಳು ವಿನೋದ ವಿಡಂಬನೆಯನ್ನೇ ಮುಖ್ಯವಾಗಿ ಇಟ್ಟುಕೊಂಡಿವೆ. ಕಡೆಯದು ನಿರಂತರವಾದ ಸ್ವಭಾವಪ್ರಕಾರವೊಂದನ್ನು ಚಿತ್ರಿಸುತ್ತದೆ.

ಇದರ ಮುಂದಿನ ಮೂರು (ವಿಮೆ ಯಮನನ್ನೇ ಹೆದರಿಸಿತು, ಮುಂದಾಳುಗಳು, ಮಂಕರು ಬೆಪ್ಪರು) ಇಂದಿನ ಸಾಮಾಜಿಕ ಜೀವನ ವನ್ನು ವಿಡಂಬನೆಯ ದೃಷ್ಟಿಯಲ್ಲಿ ತೋರಿಸುತ್ತವೆ. 'ವಿಮೆ' ಎಂಬಲ್ಲಿ ಮಾನವಸ್ವಭಾವವನ್ನು ಕಂಡುಹಿಡಿಯುವ ಜಾಣ್ಮೆಯೂ ಇದೆ. 'ಮಾನ ಮತ್ತು ಮರ್ಯಾದೆ' ಹಾಗು 'ಹೋಟೆಲುಗಳು' ಇಲ್ಲಿ ಸೇರಬೇಕಿತ್ತು. ತಡವಾಗಿ ಕೈಸೇರಿದ್ದರಿಂದ ಕೊನೆಗೆ ಪ್ರಕಟವಾಗಿವೆ. 'ಹೋಟೆಲುಗಳು' ವರ್ಣನಪರ ಪ್ರಬಂಧದಂತೆ ಕಂಡರೂ ಅದು ಹೆಚ್ಚಾಗಿ ಹರಟೆಯ ಜಾತಿಗೆ ಸೇರಿದುದು. 'ಹಗಲುಗನಸುಗಳ' ಲೇಖಕರ ಕಲಾವಂತಿಕೆಯ ಸವಿಯ ನ್ನರಿತವರು ಈ ಮಾತನ್ನು ಸಹಜವಾಗಿ ಒಪ್ಪುವರು.

ಉಳಿದ ನಾಲ್ಕು (ಬರೆಹಗಾರರ ಬಜೆಟ್ಟು, ಪುರುಷಸರಸ್ವತಿ ಒಬ್ಬನೆ? ಇಬ್ಬರೆ?, ನಮ್ಮ ನಾಟಕ, ಕಲೆ ಮತ್ತು ಜೀವನ) ಸಾಹಿತ್ಯ ವನ್ನೇ ವಿಷಯವಾಗಿ ಆಯ್ದುಕೊಂಡ ಪ್ರಬಂಧಗಳು. ಮುನ್ನುಡಿಯ ನಾಲ್ಕನೆಯ ಎಸಳಿನಲ್ಲಿ ಕಾಣಿಸಿದ ಬೇರೆ ಬೇರೆ ವಿಧಗಳು ಇಲ್ಲಿ ಪ್ರಕಟ ವಾಗಿವೆ.

ಮುನ್ನುಡಿಯಲ್ಲಿಯ ಎರಡನೆಯ ಎಸಳಿನಿಂದ ನನಗೆ ಸಮಾಧಾನ ವಾಗಿಲ್ಲ. ಅದನ್ನು ಇನ್ನಿಷ್ಟು ವಿಸ್ತಾರವಾಗಿ ಬರೆಯಲು ಸಾಧ್ಯವಿತ್ತು. ನನ್ನ ಸಮೀಪದ ಗೆಳೆಯರೊಬ್ಬರು ಆಸ್ಪತ್ರೆಯಲ್ಲಿ ಬಿದ್ದು ನರಳುವಾಗಲೇ ಸಿಕ್ಕ ಹೊತ್ತಿನಲ್ಲಿ, ಸಂಪಾದಕರ ಅವಸರಕ್ಕಾಗಿ ಮೊದಲಿಗೇ ಒಪ್ಪಿದ ಈ ಮುನ್ನುಡಿಯನ್ನು ಬರೆದಿರುವದರಿಂದ ಇದರಲ್ಲಿದ್ದ ಕುಂದುಕೊರತೆಗಳನ್ನು ಓದುಗರು ಕ್ಷಮಿಸಬಹುದೆಂದು ನಂಬಿದ್ದೇನೆ.

ಧಾರವಾಡ
೧೪-೫-೧೯೩೩

**ವಿ. ಕೃ. ಗೋಕಾಕ**

# ನಮ್ಮ ಮಾತು

'ಸುಳವು-ಹೊಳವು' ಈ ಪ್ರಬಂಧಗಳ ಸಂಗ್ರಹವು ನಮ್ಮ ಮಾಲೆಯ ಮೂವತ್ತೈದನೆಯ ಕುಸುಮ. ಇದು ನಮ್ಮ ಎಣಿಕೆ ಮೀರಿ, ನಾವು ಸಾಮಾನ್ಯವಾಗಿ ಪ್ರತಿಸಲವೂ ಕೊಡುತ್ತಿರುವ ೧೫೦ ಪುಟಕ್ಕೆ ಮೀರಿ ೨೦೦ ಪುಟಕ್ಕೆ ಹೋದುದರಿಂದಲೂ ಪ್ರಬಂಧಗಳ ಸಂಗ್ರಹ ಕಾರ್ಯದಲ್ಲಿ ಅನಿವಾರ್ಯವಾಗಿ ಬಂದೊದಗಿದ ಕೆಲವೊಂದು ಅಡಚಣಿಗಳಿಂದಲೂ, ಎಪ್ರಿಲ್ ತಿಂಗಳಲ್ಲಿ ಹೊರಡಬೇಕಾಗಿದ್ದ ಈ ಸಂಗ್ರಹವು ಮೇ ತಿಂಗಳಲ್ಲಿ ಹೊರಬಿದ್ದಿದೆ. ಈ ಒಂದು ತಿಂಗಳ ವಿಲಂಬವನ್ನು ನಮ್ಮ ಗ್ರಾಹಕರು ಸಹಾನುಭೂತಿಯಿಂದ ಮನ್ನಿಸಿ ನಮ್ಮನ್ನು ಕ್ಷಮಿಸುವಿರೆಂದು ನಾವು ನಂಬಿದ್ದೇವೆ. ಅಲ್ಲದೆ ಮುಂದಿನ ಕುಸುಮಗಳಾದ 'ಕಾರಣಪುರುಷ' ಮತ್ತು 'ಹತ್ತು ವರ್ಷ' ಎಂಬವನ್ನು ಹೊತ್ತಿಗೆ ಸರಿಯಾಗಿ ಹೊರಡಿಸುವ ಯೋಜನೆಯನ್ನು ಕೈಕೊಂಡಿದ್ದೇವೆ.

ಈ ಸಂಗ್ರಹಕ್ಕಾಗಿ ಸ್ವಲ್ಪ ಹೊತ್ತಿನಲ್ಲಿಯೆ ವಿಸ್ತಾರವಾದ ಒಂದು ಮುನ್ನುಡಿಯನ್ನು ಬರೆದುಕೊಟ್ಟುದಕ್ಕಾಗಿ ಶ್ರೀ ವಿ. ಕೃ. ಗೋಕಾಕ ಇವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಬರೆಹಗಾರರು ತಮ್ಮ ಲೇಖನಗಳನ್ನು ಕೊಟ್ಟು ಒಳ್ಳೆ ಸಹಾನುಭೂತಿಯಿಂದ ನಮಗೆ ಸಹಾಯ ಮಾಡಿದ್ದಕ್ಕಾಗಿ ನಾವು ಅವರಿಗೆ ತುಂಬಾ ಉಪಕೃತರಾಗಿದ್ದೇವೆ.

—ಸಂಪಾದಕ

ಮನೋಹರ ಗ್ರಂಥಮಾಲೆಯ ೩೬ನೆಯ ಕುಸುಮ

## ಮುಂದಿನ ಕುಸುಮ

# ಕಾರಣಪುರುಷ

ಕರ್ನಾಟಕದ ಆಶೆ-ಆಕಾಂಕ್ಷೆಗಳನ್ನು ಪರಪ್ರಾಂತೀಯರು ತುಳಿದು ಮೆಟ್ಟುತ್ತಿರುವ ಈ ಕಾಲದಲ್ಲಿ ಕರ್ನಾಟಕಕ್ಕೆ ಜೀವದುಂಬಿಸಲು ಒಬ್ಬ ಕಾರಣಪುರುಷನು ಬೇಕಾಗಿದ್ದಾನೆಂಬುದನ್ನು ಹೃದಯಂಗಮವಾಗಿ ಚಿತ್ರಿಸಿದ ಸಾಮಾಜಿಕ ಕಾದಂಬರಿಯಿದು.

ಬರೆದವರು :—

**ರಂ. ಶ್ರೀ. ಮುಗಳಿ**

ಎಂ. ಎ. ಬಿ. ಟಿ.

ಮನೋಹರ ಗ್ರಂಥಮಾಲೆಯ ೩೭ನೆಯ ಕುಸುಮ

**೭ನೆಯ ವರ್ಷದ ಮೊದಲನೆಯ ಕುಸುಮ**

# ಹತ್ತು ವರುಷ

ತನ್ನನ್ನು ಮತ್ತು ತನ್ನ ಆಂತರಿಕ ಜೀವನದಲ್ಲಿಯ ಏರಿಳಿತಗಳನ್ನು ತಾನೇ ಚಿತ್ರಿಸುವುದೆಂದರೆ ಅದೆಷ್ಟು ಸೂಕ್ಷ್ಮದ, ಧೈರ್ಯದ, ತೂಕದ ಕೆಲಸ! ಆ ತೂಕ ವನ್ನು ಹಿಡಿದು ಆ ಧೈರ್ಯವನ್ನೂ ಆ ಸಾಹಸವನ್ನೂ

**ಶ್ರೀ. ಜಿ. ಪಿ. ರಾಜರತ್ನಂ**

ಇವರು ತಮ್ಮ ಈ 'ಹತ್ತು ವರ್ಷ'ದಲ್ಲಿ ಮುಚ್ಚುಮರೆ ಯಿಲ್ಲದೆ ತೋರಿಸಿದ್ದಾರೆ. ಕನ್ನಡ ಸಾಹಿತ್ಯಕ್ಕೀ ಇದೊಂದು **ರತ್ನನ** ಹೊಸ ರತ್ನ!



# ಶಾಂತಿ

'ಶ್ರೀನಿವಾಸ'

ಈಗ ಶ್ರಾವಣಮಾಸ. ಪೂರ್ಣಿಮೆ ಹತ್ತಿರ ಬರುತ್ತಿದೆ. ಸರ್ವದಾ ನಮ್ಮನ್ನು ತನ್ನ ಅಧಿಕಾರದಲ್ಲಿ ಇಟ್ಟುಕೊಂಡಿರುವ ಈ ಪ್ರಪಂಚದ ಕೆಲಸ ಇಂದು ನನಗೆ ಸ್ವಲ್ಪ ವಿರಾಮವನ್ನು ಕೊಟ್ಟಿದೆ. ಕಾರ್ಯ ಪ್ರಪಂಚದ ಕಳವಳಗಳಿಂದ ಸೋತಿರುವ ಈ ಮನಸ್ಸಿಗೆ ಸ್ವಲ್ಪ ಶಾಂತಿಯನ್ನುಂಟುಮಾಡುವ ಬಗೆ ಹೇಗೆ?

ಶಾಂತಿಯನ್ನುಂಟುಮಾಡುವ ಬಗೆ! ಶಾಂತಿಯೆಲ್ಲಿ ನಾವೆಲ್ಲಿ? ಶಾಂತಿ ನಮ್ಮನ್ನುಳಿದು ಬಹುಕಾಲವಾಯಿತು. ಅದು ಎಂದಾದರೂ ನಮ್ಮಲ್ಲಿ ಇತ್ತೋ ಇಲ್ಲವೋ ಎಂಬ ಸಂದೇಹವುಂಟಾಗುವಷ್ಟು ಕಾಲ, ಅದು ನಮ್ಮಿಂದ ಅಗಲಿ ದೂರದಲ್ಲಿದ್ದಿದೆ. ಒಂದು ಕಾಲದಲ್ಲಿ ಅದು ಯಾವಾಗಲೂ ನಮ್ಮಲ್ಲಿಯೇ ಇರುತ್ತಿತ್ತು. ಆ ಮೇಲೆ ಕೊಂಚಕಾಲ ನಾವು ಅದನ್ನು ಬೇಕಾದಾಗ ಹೋಗಿ ಹುಡುಕುತಲಿದ್ದೆವು; ಹುಡುಕಲು ಅದು ಸಿಕ್ಕುತ್ತಿತ್ತು. ಜೀವನಸಂಗ್ರಾಮದ ಅನೇಕ ಬಾಣಗಳಿಂದ ಆಹತವಾದ ನಮ್ಮ ತನು ಮನಗಳಿಗೆ ನಾವು ಆ ಸಂಜೀವಿನಿಯನ್ನು ಸೋಕಿಸುತ್ತಿದ್ದೆವು. ದೇಹವೂ ಮನವೂ ಆ ಸಂಜೀವಿನಿಯ ಸೋಕಿನಿಂದ ಸುಖವನ್ನು ಹೊಂದಿ ತಮ್ಮ ಸ್ವಭಾವದ ಆನಂದವನ್ನು ಸ್ವಲ್ಪ ಹೊತ್ತಾದರೂ ಹೊಂದುತಿದ್ದವು. ಈಗ ನಾವು ಆ ಸಂಜೀವಿನಿಯನ್ನು ಹುಡುಕುವುದನ್ನೆ ಬಿಟ್ಟಿದೇವೆ; ಅದರ ದಾರಿಯನ್ನು ಮರೆತಿದೇವೆ. ಅದು ನಮಗೆ ಸಿಕ್ಕುವುದಿಲ್ಲ. ನಮ್ಮ ಹಿರಿಯರು ಅದನ್ನು ಎಲ್ಲೆಲ್ಲೂ ಹುಡುಕಿ ತೆಗೆಯುತ್ತಿದ್ದರು. ನಾವು ಅವರ ಕೌಶಲವನ್ನು ಉಳಿಸಿಕೊಳ್ಳಲಿಲ್ಲ. ಸಂಜೀವಿನಿಯೇನೋ ಬೇಕು; ಆದರೆ ಅದರ ನೆಲೆಯನ್ನು ಮರೆತಿದೇವೆ.

'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ಅವರು ಹೇಳುತ್ತಿದ್ದಂತೆ ನಾವೂ ಹೇಳುತ್ತೇವೆ. ಅವರು ಹೇಳಿದಾಗ ಅವರಿಗೂ ಅವರ ಸುತ್ತಲ ಪ್ರಪಂಚಕ್ಕೂ ಶಾಂತಿಯು ಬರುತಲಿತ್ತು. ಹಸಿದು ಹಸಿದು ತಾಯ ಪಾರಿವಾಳದ ಬರವನ್ನು ಎದುರು ನೋಡುತ್ತ ಕುಗ್ಗಿ ಕುಳಿತಿರುವ ಎಳೆಯ ಪಾರಿವಾಳದ ವ್ಯಾಕುಲಿತವಾದ ಗೂಡಿಗೆ ಆ ತಾಯ ಆತುರ ದಿಂದಲೂ ಮೃದುಸ್ಪರ್ಶದಿಂದಲೂ ಬರುವಂತೆ ಶಾಂತಿ ಬಂದು ಆ ಓಂ ಶಾಂತಿಃ ಶಾಂತಿಃ ಶಾಂತಿಃ ಎಂದ ಸಮುದಾಯವನ್ನು ತನ್ನ ಪಕ್ಷಗಳಿಂದ ಆವರಿಸುತಲಿತ್ತು. ಈಗ ನಾವು ಅದೇ ಮಂತ್ರವನ್ನು ಹೇಳುತ್ತೇವೆ. ನಮ್ಮ ಹಿರಿಯರು ಯಾವ ಹ್ರಸ್ವ ಯಾವ ದೀರ್ಘ ಸ್ವರಗಳಿಂದ ಅದನ್ನು ಹೇಗೆ ಉಚ್ಚರಿಸಿದರೋ ಹಾಗೆಯೇ ಉಚ್ಚರಿಸುತ್ತೇವೆ. ಆದರೆ ನಮ್ಮ ಸಮುದಾಯಕ್ಕೆ ನಮ್ಮ ಮಾತೆ ಶಾಂತಿ ಬರುವುದಿಲ್ಲ. ಅದನ್ನು ಯಾವ ಗಿಡುಗನು ಅಪಹರಿಸಿತು?

ನಾನು ಇಂದು ಶಾಂತಿಯನ್ನು ಹುಡುಕಿಕೊಂಡು ಹೊರಟಿದೇನೆ. ಶಾಂತನಾಗಿರಲು ಪ್ರಯತ್ನ ಪಡುತ್ತಿದೇನೆ. ಶಾಂತಿಯನ್ನು ಪಡೆದೆನೆಂದು ಭಾವಿಸಲು ಯತ್ನಿಸುತ್ತಿದೇನೆ. ನಿದ್ದೆ ಹೋಗುತ್ತಿದೇನೆಂದು ಎಣಿಸುತ್ತಿರುವವನು ನಿಜವಾಗಿಯೂ ನಿದ್ದೆ ಮಾಡುತ್ತಿಲ್ಲ. ಸುಮ್ಮನಿರಬೇಕೆಂದು ಕೈಕಾಲು ತಲೆಯನ್ನು ಅಲುಗಿಸದೆ ಕುಳಿತಿರುವವನು ಸುಮ್ಮನಿದ್ದಂತಾಗಲಿಲ್ಲ. ಶಾಂತಿಯನ್ನು ಹುಡುಕುತ್ತ ಅದು ಸಿಕ್ಕಲಿಲ್ಲವಲ್ಲ ಎಂದು ಕಳವಳಗೊಂಡಿರುವ ನನಗೆ ಶಾಂತಿಯು ಈಗ ಸಾಧ್ಯವಲ್ಲ.

ಶಾಂತಿಯ ಸುಖವನ್ನು ಅನುಭವಿಸುವ ಪುಣ್ಯವೇ ನಮಗಿಲ್ಲವೇನೋ! ಆ ಪುಣ್ಯವಿರುವುದಾದರೆ ಶಾಂತಿಗೆ ಬೇಕಾದ ಸಾಮಗ್ರಿಗಳು ಮೊದಲಿನಂತೆ ಇದ್ದರೂ ನಮಗೆ ಶಾಂತಿಯು ಸಾಧ್ಯವಾಗದೆ ಇರುವುದೇಕೆ? ಇಗೋ. ಈ ದಿನವು ಬಹು ಸುಂದರವಾಗಿದೆ. ಸೌಂದರ್ಯಕ್ಕೆ ಆವಾಸವಾದ ನಮ್ಮ ಈ ಆರ್ಯಾವರ್ತದಲ್ಲಿ, ಈ ಆರ್ಯಋಷಿ ದೇಶದಲ್ಲಿ ಕೂಡ ಇಂಥ ಸುಂದರವಾದ ದಿನಗಳು ವರುಷದಲ್ಲಿ ಅನೇಕವಿಲ್ಲ. ಒಂದು ತಿಂಗಳಿಂದ ಮಳೆ ಬಿದ್ದು ಕೆರೆ ಹೊಳೆಗಳು ನೀರಿನಿಂದ ತುಂಬಿತುಳುಕುತ್ತಿವೆ.

ದಿನದಿನವೂ ಮೇಘಗಳಿಂದ ಮರೆಯಾಗುತ್ತಿದ್ದ ಸೂರ್ಯನು ಇಂದು ಹೊರಗೆ ಬಂದು ಪ್ರಪಂಚವನ್ನು ತನ್ನ ಎಳೆಬಿಸಿಲಿನಿಂದ ತುಂಬಿ ಬೆಳಕಿನಿಂದ ಮುಂದಮುಂದವಾಗಿ ತುಳುಕುವಂತೆ ಮಾಡಿದ್ದಾನೆ. ಎಲೆ, ಗಿಡ, ಬಳ್ಳಿ ಎಲ್ಲವೂ ಈ ಎಳಬೆಳಕಿನಲ್ಲಿ ಮಿಂದು, ಮಿತವಾಗಿ ಅರಿಸಿನವನ್ನು ಹಚ್ಚಿಕೊಂಡು ಮಿಂದು ಬಂದಿರುವ ಯುವತಿಯಂತೆ ಕಾಣುತ್ತಿವೆ. ಗಾಳಿಯು ಸ್ವಲ್ಪ ಹೊತ್ತು ಮಂದವಾಗಿ, ಸ್ವಲ್ಪ ಹೊತ್ತು ಬಿರುಸಾಗಿ ಬೀಸುತ್ತ, ಮನುಷ್ಯನ ಆತ್ಮದಂತೆ ಎಲ್ಲಿಂದಲೋ ಬಂದು ಎಲ್ಲಿಗೋ ಹೋಗುತ್ತದೆ. ಹಾಗೆ ಹೋಗುತ್ತ ಹೋಗುತ್ತ ತನ್ನ ಆಗಮನವನ್ನು ನಿರೀಕ್ಷಿಸುತ್ತ ಬರುವನೋ ಇಲ್ಲವೋ ಎಂದು ಹೆಬ್ಬೆಟ್ಟಿನ ಮೇಲೆ ನಿಂತು ನೋಡುವಂತಿರುವ ವೃಕ್ಷರಾಜಿಯ ತಲೆಯ ಮೇಲೆ ಇರುವ ಎಲೆಗಳ ನಡುವೆ ತೂರಿ ಅವುಗಳನ್ನು ಹಾಡುವಂತೆ ಮಾಡುತ್ತಿದೆ. ಕುಶಲಿಯಾದ ವೈಣಿಕನ ಕೈಬೆರಳಿಂದ ಸ್ಪೃಷ್ಟವಾದ ವೀಣೆಯ ತಂತಿಗಳಂತೆ ವೃಕ್ಷರಾಜಿ, ಒಮ್ಮೆ ಮೃದುವಾದ, ತೆಳುವಾದ ಒಮ್ಮೆ ಕಿವಿಯನ್ನು ತುಂಬುವಂತಿರುವ ಗುರುತರವಾದ ಇಂಪಾದ ಸ್ವರವನ್ನೂ ಗಂಭೀರ ನಿನದವನ್ನೂ ಮಾಡುತ್ತಿದೆ. ಈ ಗಂಭೀರನಾದವು ಸಾಗರವನ್ನು ಸೇರಲೆಂದು ದೇವಲೋಕದಿಂದಿಳಿದು ಬರುತ್ತಿರುವ ದೇವನಿರ್ಝರಿಣಿಯ ಪ್ರವಾಹದ ಘೋಷವೋ ಎನ್ನುವಂತಿದೆ. ಎಲ್ಲೂ ಪಕ್ಷಿಗಳ ಧ್ವನಿ. ಕೋಗಿಲೆಯು ದೂರದಲ್ಲಿ ಎಲೆಗಳ ನಡುವೆ ಕುಳಿತು, ವರ್ಣಿಸುವ ಕವಿಗಳಿಗೆ ಕರೆಯಕಳುಹಿಸುವಂತೆ ಕುಹೂ ಎಂದು ಕೂಗುತ್ತಿದೆ. ಸುತ್ತಮುತ್ತಲೂ ಪಕ್ಷಿಗಳ ಸಂಭ್ರಮ. ಇಲ್ಲಿ ಒಂದು ಪಕ್ಷಿ ಯಾವ ಕಾರಣದಿಂದಲೋ ಬಹು ಸಡಗರದಿಂದ ವಿಧವಿಧವಾಗಿ ಕೂಗುತ್ತಿದೆ. ಕೋಗಿಲೆಯ ಧ್ವನಿಯನ್ನು ಪಂಚಮಸ್ವರವೆನ್ನುವರು. ಇದನ್ನೇನೆನ್ನುವರೋ? ನನಗೆ ಅದರ ಹೆಸರು ತಿಳಿಯದು. ಹೆಸರು ತಿಳಿಯದಿದ್ದರೇನು, ಕೇಳುವುದಕ್ಕೆ ಬಹಳ ಇಂಪಾಗಿರುವ ಧ್ವನಿ. ಅದೇ ಮುಖ್ಯ. ಇಲ್ಲಿ ಇನ್ನೆರಡು ಪಕ್ಷಿ ಕೊಂಬೆಯ ಮೇಲೆ ಕುಳಿತು ಏನೇನೋ ಹೇಳಿಕೊಳ್ಳುತ್ತಿವೆ; ಬಹಳ ಆನಂದದಿಂದ ತುಂಬಿವೆ. ನೂರಾರು ದಿಕ್ಕಿನಿಂದ ನೂರಾರು ವಿಧವಾಗಿ ಬರುವ ಈ ಕೋಕಿಲಧ್ವನಿಯಲ್ಲಿ

ಕಾಗೆಯ ಧ್ವನಿಯೂ ಸೇರಿದೆ. ಈಗ ಕೋಗಿಲೆಯ ಧ್ವನಿ ಮಾತ್ರ ಇಂಪು, ಕಾಗೆಯ ಧ್ವನಿ ಇಂಪಲ್ಲ ಎಂದು ಹೇಳುವಂತಿಲ್ಲ. ಬರಿಯ ಇದನ್ನು ಅದನ್ನು ಬೇರೆಬೇರೆಯಾಗಿ ಕೇಳಿದರೆ ಆ ಭಾವ ಬರಬಹುದು. ಇಲ್ಲಿ ಈಗ ಈ ತೆರತೆರನಾದ ಸ್ವರಸಮುಚ್ಚಯದಲ್ಲಿ ಮಿಳಿತವಾಗಿ ಕಾಗೆಯ ಧ್ವನಿಯೂ ಒಂದು ರೀತಿಯಲ್ಲಿ ಇಂಪಾಗಿಯೇ ಇದೆ. ದೇವದೇವನ ವಿಶ್ವಸಂಸಾರದ ಗೀತದಲ್ಲಿ ಮನುಷ್ಯನಿಂದ ನಿಂದಿತವಾದದ್ದಾದರೂ ಕಾಗೆಯ ಧ್ವನಿಯೂ ಇಂಪಾದುದೇ ಸರಿ.

ಇಂಥ ದಿನ. ಈ ಸ್ಥಳ. ಈ ಪರ್ವತವು ಮೂರು ಕಡೆಯೂ ಸುತ್ತಿಕೊಂಡು ನಿಂತಿದೆ. ಇಲ್ಲಿ ತಪ್ಪಲಲ್ಲಿ ಒಂದು ಪುರಾತನವಾದ ದೇವಾಲಯ. ಪಕ್ಕದಲ್ಲೆ ಕೊಳ; ನಿರ್ಮಲವಾದ ನೀರು. ಕೊಳದ ತಡಿಯ ಬಸವನ ಬಾಯಿಂದ ಪರ್ವತದ ಒಳಗಣ ಸ್ವಚ್ಛವಾದ ತಂಪಾದ ನೀರು ಒಂದೇ ಧಾರೆಯಾಗಿ ನಿರರ್ಗಳವಾಗಿ ಸುರಿಯುತ್ತಿದೆ. ಕೊಳಕ್ಕೆ ಹೆಚ್ಚಾದ ನೀರು ಒಂದು ಸಣ್ಣ ಕಾಲುವೆಯಿಂದ ನೊರಜುಕಲ್ಲುಗಳ ನಡುವೆ ಹರಿದು, ಸ್ನಾನ ಪೂಜೆಗಳು ಮುಗಿದ ಮೇಲೆ ದೇವಾಲಯದಿಂದ ಇಳಿದು ಹೋಗುತ್ತಿರುವ ಸ್ತ್ರೀಯರ ಕಾಲಂದುಗೆಯ ಶಬ್ದವೋ ಎಂಬಂತೆ ತೋರುವ ಮೃದುರವದೊಡನೆ ಕೆಳಕ್ಕೆ ಹರಿದು ಹೋಗುತ್ತಿದೆ. ಪೃಥಿವಿಯು ಎಲ್ಲೆಲ್ಲೂ ಹಸುರು ಬಣ್ಣದಿಂದ ಶೋಭಿಸುತ್ತಿದೆ. ಪರ್ವತದ ತಲೆಯಿಂದ ತಪ್ಪಲ ವರೆಗೂ ಮರಗಳ ಹಸುರು; ನಡುವೆ ಗೈರಿಕಾದಿ ಧಾತುಗಳ ವರ್ಣ. ಹಸುರು ಈ ಸಣ್ಣ ಕಾಲುವೆಯ ಅಂಚಿನ ವರೆಗೂ ವ್ಯಾಪಿಸಿದೆ. ಈ ಸ್ಥಳದ ಈ ಅತಿಶಯವಾದ ಸೌಂದರ್ಯವನ್ನು ನೋಡುವದಕ್ಕೋ ಈ ಕಾಲುವೆಯ ಈ ಮಧುರರವವನ್ನು ಕೇಳುವದಕ್ಕೋ ಇಲ್ಲವೆ ಈ ಪವಿತ್ರ ದೇಶದಲ್ಲಿ ನೆಲೆಸಿರುವ ಮಹಾದೇವನ ಸೇವೆಯನ್ನು ಮಾಡುವದಕ್ಕೋ ದೇವಲೋಕದಿಂದ ಸಾಲಾಗಿ ಇಳಿದು ಬರುತ್ತಿರುವ ದೇವತೆಗಳ ಗಣವೋ ಎಂಬಂತೆ ಉನ್ನತವಾದ ವೃಕ್ಷಗಳು ಪರ್ವತದ ತುದಿಯಿಂದ ತಪ್ಪಲವರೆಗೆ ಸಾಲುಸಾಲಾಗಿ ನಿಂತು ಕಂಗೊಳಿಸುತ್ತಿವೆ.

ಈ ಪವಿತ್ರಸ್ಥಾನವನ್ನು ಕುರಿತು ಒಂದು ಇತಿಹಾಸವುಂಟು.

ಪೂರ್ವದಲ್ಲಿ ತಪಸ್ವಿಗಳೊಬ್ಬರು ಮಹಾದೇವನ ಪಾದಾರವಿಂದದ ಧ್ಯಾನಕ್ಕೆ ಇದು ಯೋಗ್ಯವಾದ ಸ್ಥಳವೆಂದು ಭಾವಿಸಿ ಇಲ್ಲಿ ತಪಶ್ಚರ್ಯೆಗೆ ನಿಂತರು. ನಿತ್ಯಕರ್ಮಕ್ಕೆ ಮೊದಲು ಗಂಗಾಸ್ನಾನವು ಆವಶ್ಯಕವೆಂದು ದಿನವೂ ಯತ್ನಪೂರ್ವಕ ಕಾಶಿಯನ್ನು ಸೇರಿ ಭಾಗೀರಥಿಯಲ್ಲಿ ಮಿಂದು ಇಲ್ಲಿಗೆ ತಪಸ್ಸಿಗೆ ಹಿಂತಿರುಗಿ ಬರುತ್ತಿದ್ದರು. ದಿನವೂ ಬಿಡದೆ ತನ್ನೆಡೆಗೆ ಬರುತ್ತಿದ್ದ ಇವರ ನಿಶ್ಚಲವಾದ ಭಕ್ತಿಗೆ ಭಾಗೀರಥಿಯು ಮೆಚ್ಚಿ ಪ್ರತ್ಯಕ್ಷಳಾಗಿ 'ನಾನೇ ನೀನಿರುವೆಡೆಗೆ ಬರುತ್ತೇನೆ, ನೀನು ಇನ್ನು ಮೇಲೆ ಇಲ್ಲಿ ಬರುವ ಕೆಲಸವಿಲ್ಲ' ಎಂದು ಅಭಯವನ್ನಿತ್ತಳು. ತಪಸ್ವಿಯು ತನ್ನ ನಿಶ್ಚಯಕ್ಕೋಸ್ಕರ ಅವಳಿಗೆ ತನ್ನ ಕೈದಂಡವನ್ನು ಕೊಟ್ಟು, 'ಇದನ್ನು ತಂದರೆ ನೀನೇ ಬಂದದ್ದು ನನ್ನ ಮನಸ್ಸಿಗೆ ದೃಢವಾಗುವುದು' ಎಂದರು. ಮಾರನೆಯ ದಿನ ಸ್ನಾನದ ವೇಳೆಗೆ ಗಂಗಾಮಾತೆಯು ಭೂಗರ್ಭದಲ್ಲೇ ಪ್ರವಹಿಸಿ ಋಷಿಯ ದಂಡದೊಡನೆ ಆ ಸ್ಥಳಕ್ಕೆ ದಯಮಾಡಿಸಿ ತಾವಿತ್ತ ಅಭಯವನ್ನು ನೆರವೇರಿಸಿದರು. ಅಂದಿನಿಂದ ಗಂಗಾಮಾತೆಯಿಂದಲೂ ಅವಳನ್ನು ಮೆಚ್ಚಿಸಿದ ಆ ತಪಸ್ವಿಯಿಂದಲೂ ಈ ಸ್ಥಳವು ಪವಿತ್ರ. ಇಲ್ಲಿ ಮಹಾದೇವನು ತನ್ನ ಕೃಪೆಯಿಂದ ಭಕ್ತರಿಗೆ ಸರ್ವದಾ ಪ್ರತ್ಯಕ್ಷ.

ಶಾಂತಿಯು ಬರುವುದಾದರೆ ಇಲ್ಲಿ ಈಗ ಬರಬೇಕು. ಇಂಥ ದಿನ; ಇಂಥ ಸ್ಥಲ. ನೀಲಿಮಾಮಯವಾದ ಈ ನೆಲದ ನಡುವೆ, ನೀಲಿಮಾಮಯವಾದ ಈ ಬಾನ ಕೆಳಗೆ ಭಾಗೀರಥಿಯ ಪವಿತ್ರ ಸಲಿಲದ ಸಾಮೀಪ್ಯದಲ್ಲಿ ಮಹಾದೇವನ ಸನ್ನಿಧಿಯಲ್ಲಿ ಆನಂದಮಯವಾದ ಈ ವಿಶ್ವಸಂಸಾರದ ಆನಂದವನ್ನು ಕಲಕಲ ಧ್ವನಿಯಿಂದ ತೋರುತ್ತಿರುವ ಈ ಪಕ್ಷಿಸಮೂಹದ ಸುಖಸಾಗರದ ಅಂತರಾಳದಲ್ಲಿ ನಿಂತರೆ ಶಾಂತಿಯನ್ನು ಪಡೆಯುವುದು ಸಾಧ್ಯವಾಗಬೇಕು. ಆದರೆ ಶಾಂತಿಯೆಲ್ಲಿ? ತಪಸ್ವಿಯು ಶಾಂತಿಯನ್ನು ಸಂಪಾದಿಸುವುದಕ್ಕೆ ಅತ್ಯುತ್ತಮವೆಂದು ಎಣಿಸಿದ ಈ ಪವಿತ್ರಸ್ಥಾನದಲ್ಲೂ ನನಗೆ ಶಾಂತಿಯಿಲ್ಲ. ಒಂದು ಕ್ಷಣ ಮಾತ್ರ ಆನಂದವನ್ನು ಅನುಭವಿಸಿದೆನು. ಆನಂದದಿಂದ ಕೂಡಿದ ಈ ಪ್ರಾಣಿಸಮೂಹದಲ್ಲಿ ನಾನೂ ಸೇರಿದೇನೆ ಎಂದು ಒಂದು ಕ್ಷಣ ಭಾವಿಸಿದೆನು. ಆ ಮೇಲೆ ಅವು ಆನಂದದಿಂದ

ಹಾಡುತ್ತವೆ, ನಾನು ಹಾಡಲಾರೆನು ಎಂದು ತೋರಿ ಬಂದಿತು. ನನಗೆ ಆನಂದವೆಲ್ಲಿ, ನನಗೆ ಶಾಂತಿಯುಲ್ಲಿ?

ನನ್ನಿಂದ ಪಡೆಯಲಾಗದೆ ಹೋದರೂ ಋಷಿಯನ್ನು 'ನೀನು ಅದನ್ನು ಹೇಗೆ ಪಡೆದೆ?' ಎಂದು ಕೇಳೋಣವೆಂದರೆ ಋಷಿಯು ಕಣ್ಮರೆಯಾಗಿದಾನೆ. ನನಗೂ ಸ್ವಲ್ಪ ವಯಸ್ಸಾಗಿದೆ. ಬಹು ವರುಷದಿಂದ ಈ ಪ್ರಪಂಚವನ್ನು ಕಣ್ಣಿಂದ ನೋಡಿದೇನೆ. ಎಂದೂ ಸುಂದರವಾದ ಪ್ರಪಂಚ ಇಂದೂ ಸುಂದರವಾಗಿದೆ. ಅಂದಿನಿಂದ ಇಂದಿನವರೆಗೂ ನಾನು ಪ್ರಪಂಚದಲ್ಲಿ ಸುಖವನ್ನು ಹುಡುಕಿದೇನೆ. ಸುಖವನ್ನು ಕೊಡುವುದೇನೋ ಎಂದು ಶಾಂತಿಯನ್ನು ಹುಡುಕಿದೇನೆ. ಎರಡೂ ನನಗೆ ಕೈಗೆ ಸಿಕ್ಕಲಿಲ್ಲ. ಹೇಗೆ ಸಿಕ್ಕುವುದೆಂದು ಹೇಳುವವರೂ ಇಲ್ಲವಾಗಿದಾರೆ. ಆಗ ತನ್ನ ಸುಖಕ್ಕಾಗಿ ಭಾಗೀರಥಿಯನ್ನು ಕರೆಸಿಕೊಂಡ ತಪಸ್ವಿಯು ಈಗ ನನಗಾಗಿ ಒಂದು ನಿಮಿಷ ಮೈದೋರಿ ಆ ಶಾಂತಿಗೆ ಸಾಧನವಾದ ಬೀಜಮಂತ್ರವನ್ನು ಹೇಳಿಕೊಡಬಾರದೆ! ತಪಸ್ವಿ, ನೀನೆಲ್ಲಿ?

ಎಲ್ಲಿಯೋ! ಬಲ್ಲವರಾರು? ಋಷಿಯೇನು? ಎಲ್ಲರೂ ಅಷ್ಟೆ. ಎಂದೋ ಇದ್ದರಂತೆ, ಇಂದು ಇಲ್ಲ. ಇಂದು ಇಲ್ಲದ್ದರಿಂದ ಅವರು ಇದ್ದರೋ ಇಲ್ಲವೋ ಎಂದು ಸಂಶಯ ಪಡುತ್ತ ನಮಗೆ ಇಲ್ಲದುದರಿಂದ ಎಂದೂ ಇಲ್ಲವೆಂದೇ ಎಣಿಸಿ ಅವರು ಇರಲಿಲ್ಲವೆಂಬ ನಂಬಿಕೆಯಲ್ಲಿ ನಾವು ತೃಪ್ತರಾಗುತ್ತಿದೇವೆ. ವಸಿಷ್ಠ, ವಾಮದೇವ, ಮಾರ್ಕಂಡೇಯ, ಕೌಂಡಿನ್ಯ, ಬನ್ನಿ. ನೀವೆಲ್ಲರೂ ಈಗ ಒಂದು ಸಲ ಬನ್ನಿ. ಒಂದೇ ಒಂದು ಸಲ ಒಂದು 'ನಾವು ನಿಜ, ಸುಳ್ಳಲ್ಲ, ನೀನೂ ಇದೀಯೆ, ಸುಳ್ಳಲ್ಲ; ಇದನ್ನು ತಿಳಿದು ಶಾಂತನಾಗು' ಎಂದು ಅಪ್ಪಣೆ ಕೊಡಿ. ನಾನು ಕೈಗಳನ್ನು ಕಟ್ಟಿಕೊಂಡು ಕೇಳಿ ನಂಬಿ ಶಾಂತನಾಗುತ್ತೇನೆ.

ಅವರೂ ಬರಲಿಲ್ಲಿ. ಶಾಂತಿಯೂ ಬರಲಿಲ್ಲ. ತೆಂಗಾಳಿಯು ಮೃದು ಮೃದುವಾಗಿ ಎಲೆಗಳ ನಡುವೆ ಹರಿಯುತ್ತಿದೆ.

೧೯೧೬



## ಇತಿಹಾಸ ~ ~ ~ 'ಮಧುರಚೆನ್ನ'

ಅನಂತ ಕರ್ಮವೇ ವಿಶ್ವದ ಜೀವ. ಜೀವವಿರುವವರೆಗೆ ಜೀವನದ ಇರುವು. ಜೀವನದ ಕ್ರಮಬದ್ಧವಾದ ನೆನಪಿನ ಸರಪಳಿಯೆ ಚರಿತ್ರೆ, ಇತಿಹಾಸ.

ಕರ್ಮದ ಗಾಳಿಯಲ್ಲಿ ಅಲೆದಾಡುತ್ತಿರುವ ಇತಿಹಾಸದ ಪತಾಕೆಯು ಬಗೆಬಗೆಯ ಬಣ್ಣದೋರಿ ಜೀವನದ ಗತಿಯನ್ನು ಹಿಗ್ಗಿಸಲೂ ಬಹುದು; ತಗ್ಗಿಸಲೂಬಹುದು. ಕರ್ಮ-ಪ್ರವೃತ್ತ ಜೀವನನೌಕೆಯು ಇತಿಹಾಸದ 'ದಿಗ್ದರ್ಶನ' (ಉತ್ತರಮುಖಿ) ವಿಲ್ಲದಿದ್ದರೆ ತಮೋಮುಖಿಯಾಗುವುದು ಅನಿವಾರ್ಯ.

ಕರ್ಮಿಯು ಯಾವಾಗಲೂ ಮೇಲ್ಪಂಕ್ತಿಯ ಕಡೆಗೆ ಕಣ್ಣಿಟ್ಟು ಸಾಗುವನು. ಮೇಲ್ಪಂಕ್ತಿ (ಆದರ್ಶ) ಯಿಲ್ಲದ ಕರ್ಮವು ಗುರಿಯಿಲ್ಲದ ಗುಂಡಿನಂತೆ.

ವಿವೇಕಾನಂದರ ವೀರವಾಣಿಯಿದು—'ಆದರ್ಶವೇ ಕರ್ಮಜೀವನದ ಪಂಚಪ್ರಾಣ......ಈಗ ನಾವು ಏನಾದರೂ ಆಗಿದ್ದರೆ ಅದು ಆದರ್ಶದಿಂದಲೆ. ಇನ್ನೂ ಏನಾದರೂ ಆಗುವೆವಾದರೆ ಅದೂ ಆದರ್ಶದಿಂದಲೆ. ನಮ್ಮ ಬಾಳುವೆಯ ಕಡಿವಾಣವೆ ಅದರ ಕೈಯ್ಯಲ್ಲಿದೆ.'

ಇತಿಹಾಸವೆಂದರೆ ರೂಪುಗೊಂಡ ಆದರ್ಶ; ಇತಿಹಾಸವೆಂದರೆ ವೇದಶಾಸ್ತ್ರಗಳ ಪ್ರತ್ಯಕ್ಷ ವ್ಯಾಖ್ಯಾನ.

ನಮ್ಮ ಹಿಂದಿನವರಿಗೆ ಪುರಾಣವೆ ಇತಿಹಾಸವಾಗಿದ್ದಿತು. ಆದರೆ ಇಂದಿನವರಿಗೆ ಇತಿಹಾಸವೆ ಪುರಾಣವಾಗಿಬಿಟ್ಟಿದೆ. ಪುರಾಣಪುರುಷರು

ಭಾವಲೋಕದ ಜೀವರೇ. ಅಂತೆಯೆ ಇತಿಹಾಸವು ಪೌರುಷವನ್ನು ಬೋಧಿಸಿದರೆ ಪುರಾಣವು ಅಪೌರುಷೇಯದ ಕಡೆಗೆಳೆಯುತ್ತದೆ.

ಭವದಲ್ಲಿ ಮುಳುಗಿದ ಇಂದಿನ ಭವಿಯುಗವು ಭಾವಕ್ಕೆ ಎರವಾಗಿದೆ. ಅಂದಿನವರು ಮೌನವ್ಯಾಖ್ಯಾನದಿಂದ ಛಿನ್ನಸಂಶಯರಾಗುತ್ತಿದ್ದರು. ಇಂದಿನವರಿಗೆ ಮೇಜೂ, ಮನೆಯೂ ಕೂಡಿಯೇ ಗುಡುಗಿಡುವ 'ಲೆಕ್ಚರು' ಬೇಕು. ಇಂದಿನದು ಶಬ್ದಯುಗ, ಅಂದಿನದು ಭಾವಯುಗ. ಶಬ್ದ ಬಂದು ಭಾವವನ್ನು ಕೊಂದಿತೆಂದು ಬಾಯ್ಬಲ್ಲಿನಲ್ಲಿದೆ.

ಶಬ್ದದಾಚೆಗೆ ಭಾವರಾಜ್ಯ ವಿಹುದಯ್ಯಾ।
ಶಾಬ್ದಿಕರು ಬೇಗ ಭಾವಿಕರಾಗಲಯ್ಯಾ॥

ಎಂದು ಈಗೀಗ ಬಾಯ್ಬಂದ ನವಯುಗದ ಕೋಗಿಲೆಗಳು ಯುಗ ಧರ್ಮದ 'ಪ್ರ–ಣವ' ಮಂತ್ರವನ್ನು ಬಾಯ್ಬಿಚ್ಚಿ ಹಾಡುತ್ತಲಿವೆ. ಇಂದಿನ, 'ಅನು–ಭವ'ಗಾಮಿಯಾದ ಜಗವು ಅಂದಿನ 'ಅನು–ಭಾವ' ಮಂಟಪ ಸೇರಲಿಕ್ಕೆ, ಇತಿಹಾಸದ ಕಡೆಗೆ ಹೊರಳಿ ನೋಡಬೇಕಾದುದು ತೀರ ಅಗತ್ಯ.

ಹೇಡಿತನವು ಕೇಡಿನ ಬೀಡು. ಎಗ್ಗಿಲ್ಲದವನಿಗೆ ಮುಗ್ಗುಲುಗೇಡಿ ತನವೇ ಗೊತ್ತು. ಅನಂತವಾದ 'ಅತಲ'ದಿಂದೆತ್ತಿ 'ಸುತಲ'ಕ್ಕೆ ತರಬಲ್ಲ ದಿವ್ಯಶಕ್ತಿಯು ಹೆಮ್ಮೆಯು. ಈ ಹೆಮ್ಮೆಯಿಂದ ಹಮ್ಮು ಮಿಸುಕುವದು, ಹುರುಪಿನ ಕೆಚ್ಚಲು ತೊರೆದು ನಿಲ್ಲುವದು. ಹುರುಪು ಆವೇಶದ ಕಟ್ಟನ್ನು ಕತ್ತರಿಸಿಕೊಂಡಾಗಳೆ ಹುರಿಗಟ್ಟಿ ಹುರುಳಾಗುವದು. ಹೆಪ್ಪುಗಟ್ಟಿದ ಹೇಡಿತನದ ಹೊಟ್ಟೆಹರಿದೆದ್ದ ಹಮ್ಮು, ಹುರುಳುಹುರುಪಿನ ಬಿಸಿಯಲ್ಲಿ ಬೆಂದು ಹಣ್ಣಾಗುವದು. 'ಹಸುಕು ಹಮ್ಮು ಹಣ್ಣಾದ ದಿನವೇ ದೇವ ಜೀವನದ ಆರಂಭ'ವೆಂದು ಗುರು ಅರವಿಂದರ ಗುರುಮಂತ್ರವುಂಟು.

ಇತಿಹಾಸವು ನೆನಪಿನ ಸರಪಳಿ. ಇದೂ ಒಂದು ಸ್ಮೃತಿ. ಮನು ಸ್ಮೃತಿಯು ಅಂದಿನ ಧರ್ಮಗ್ರಂಥ. ಈ 'ಮನು–ಜ ಸ್ಮೃತಿ'ಯು ಇಂದಿನ ಧರ್ಮಗ್ರಂಥ. ಏಕೆಂದರೆ ಅಂದಿನದು ಮನುಯುಗ, ಇಂದಿನದು

ಮನುಜಯುಗ. 'ಯುಗವು ಬದಲಾಗಲೇ ಬೇಕು' (ಭಗಿನೀ ನಿವೇದಿತಾ) ಗುರು ಅರವಿಂದರಿದನ್ನೇ ಯುಗಧರ್ಮವೆಂದು ಹೇಳುವರು.

ನೆನಪಿಲ್ಲದೆ ನಾವು ಬಾಳಲೇ ಆರೆವು. ಹೆಜ್ಜೆಹೆಜ್ಜೆಗೂ ನೆನಪಿನ ಅಗತ್ಯ. ನೆನಪು ಧಾರೆಗಟ್ಟಿ ನೆನವಾಯಿತು, ಕರ್ಮ ಧಾರೆಗಟ್ಟಿ ಧರ್ಮವಾಯಿತು. ಕರ್ಮಕ್ಕೆ ನೆನಪೇ ಜೀವ, ಧರ್ಮಕ್ಕೆ ನೆನವೇ ಜೀವ. ಆದುದರಿಂದ ನೆನವಿನ ನೆಲೆಯಾದ ನೆನಪೇ ಧರ್ಮಕರ್ಮಗಳ ಸೆಲೆ.

ಒಬ್ಬನ ಬಾಳ್ವೆ ಇನ್ನೊಬ್ಬನಿಗೆ ಕೈಗನ್ನಡಿ,—ಚೆಲ್ಲಿದ ರುಮಾಲದವನನ್ನು ನೋಡಿ ತನ್ನ ತಲೆಗೆ ಕೈ ಒಯ್ಯುವುದು ಮನುಷ್ಯನ ಸ್ವಭಾವ—; ಹಿಂದಿನ ಬಾಳ್ವೆ ಮುಂದಿನ ಮುಂಗುಡಿ. ಅದು ಮೇಲಾಗಿರಲೂಬಹುದು, ಕೀಳಾಗಿರಲೂಬಹುದು. ಮೇಲು, ಬಾಳ್ವೆಯ ಎಳೆತದಲ್ಲಿ ಸಾರೂಪ್ಯ. ಕೀಳು ಬಾಳ್ವೆಯ ಕಿಚ್ಚಿನಲ್ಲಿ ಸಾಮರಸ್ಯ. ಒಂದು ಪಡಿಯಚ್ಚಾದರೆ ಇನ್ನೊಂದು ಅಗ್ಗಿಷ್ಟಿಗೆ. ಎರಡರ ಮೇಳದಿಂದಲೇ ಮೂರ್ತಿನಿರ್ಮಾಣ. ಬಾಳ್ವೆಯನ್ನು ಕೆತ್ತಿ ಕೊರೆದು ಪಡಿಯಚ್ಚುಗೊಳಿಸಿದರು ಪುರಾಣಮುನಿಗಳು, ಇತಿಹಾಸಕಾರರು! ಅದರಲ್ಲಿ ಎರಕಹೊಯ್ದು ತಮ್ಮನ್ನೆ ಮೂರ್ತಿಗೊಳಿಸಿ ತೋರಿದರು ಶರಣರು, ಮಹಾತ್ಮರು!

ಹಿಂದಿನವರು ಮುಂದಿನವರನ್ನು ತಮ್ಮ ಹಿಂದೆ ಹಿಂದೆ ಹರಿಯಹಚ್ಚಿದರು. ಆದರೆ ತಾವು ಮಾತ್ರ ಯಾರ ಹಿಂದೆಯೂ ಹರಿಯಲಿಲ್ಲ. ಅವರು ನಡೆದದ್ದೇ ಹಾದಿಯಾಯಿತು, ನುಡಿದದ್ದೇ ವೇದವಾಯಿತು! ಅವರಲ್ಲೇನಿತ್ತು? ನಮ್ಮಲ್ಲೇನಿಲ್ಲ? ಈ ಒಗಟನ್ನೊಡೆಯುವ ಕೀಲಿಯೇ ಇತಿಹಾಸ!



## ಕೋಗಿಲ — ವಿ. ಕೃ. ಗೋಕಾಕ

ಎಲ್ಲ ವಿಷಯಗಳಲ್ಲಿಯಂತೆ ಸೌಂದರ್ಯಾನುಭವದಲ್ಲಿ ಸಹ ಪೂರ್ವಿಕರು ಪಡೆದಿರುವ ಅನುಭವವೇ ನಮಗೆ ಪರಂಪರೆಯ ರೂಪದಲ್ಲಿ ಬರುತ್ತದೆ. ಇದನ್ನು ಕೇವಲ ಶಾಬ್ದಿಕವಾಗಿ ಸ್ವೀಕರಿಸಿದ್ದಾದರೆ ಹೊಸತನ್ನು ಕೊಲ್ಲುವ ಶಕ್ತಿಯು ಇಂಥ ಸಂಪ್ರದಾಯದಲ್ಲಿ ಬರುತ್ತದೆ. ಆದರೆ ಆ ಸಂಪ್ರದಾಯದ ಹಿಂದಿದ್ದ ಅನುಭವವನ್ನು ಕಂಡು ಅದನ್ನೇ ನಾವು ಅನುಭವಿಸಿದ್ದಾದರೆ ಅಪಕಾರಿಯಾಗುವದರ ಬದಲು ಅದು ಉಪಕಾರಿಯಾಗುತ್ತದೆ. ನವೀನವಾದುದನ್ನು ಅದು ಕವುರಿಸುವದಿಲ್ಲ; ಆದರೆ ಹಳತು–ಹೊಸತಾದುದರಲ್ಲಿ ಕೂಡಿಯೇ ಕಂಡು ಬರುವ ಚಿರ ನವೀನ ಸೌಂದರ್ಯವನ್ನು ಅದು ವ್ಯಕ್ತಪಡಿಸುತ್ತದೆ. ಸಂಪ್ರದಾಯದಲ್ಲಿದ್ದ ಸೌಂದರ್ಯಸಂಪತ್ತನ್ನು ಕಂಡುಹಿಡಿಯುವವರಿಗೆ ಶೋಧಕನ ಹಂಬಲ ಬೇಕು. ಯುಗಪುರುಷರಾಗುವವರಿಗೆ ಸಂಪ್ರದಾಯ–ಪ್ರಯೋಗಗಳ ಸಮ್ಮಿಲನದ ಹದ ತಿಳಿದಿರಬೇಕು.

ಸಂಪ್ರದಾಯದ ಹಿಂದಿದ್ದ ಅನುಭವವನ್ನು ಕಲೋಪಾಸಕನು ಕಂಡುಹಿಡಿದಾಗ, ಅವನಿಗೆ ಅಮೇರಿಕೆಯನ್ನು ಹೊಸತಾಗಿ ಕಂಡ ಕೋಲಂಬಸನಿಗಿಂತ ಹೆಚ್ಚು ಆನಂದವು ಹೇಗಾಗುತ್ತದೆಂಬುದನ್ನು ನಾನು ಇಲ್ಲಿ ಉದಹರಿಸುತ್ತೇನೆ. ಆಗ ನಾನು ಜ್ಯುನಿಯರ್ ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದು ಕರ್ನಾಟಕ ಕಾಲೇಜಿನ ವಸತಿಗೃಹದಲ್ಲಿ ವಾಸಿಸುತ್ತಿದ್ದೆ. ಕಾಲೇಜಿನಿಂದ ಹೊರಟು ಅಡವಿಯನ್ನು ಸೇರಲು ಸಮೀಪದಲ್ಲ ಅನೇಕ ರಾಜಮಾರ್ಗಗಳಿವೆಯಷ್ಟೆ. ಸಪ್ತಾಪುರದ ಹಾದಿಯನ್ನು ಹಿಡಿದು ದಿನಾಲು ಮುಂಜಾನೆ ತಿರುಗಾಡಲು ಹೋಗುವ ಪರಿಪಾಠವನ್ನು

ನಾನಿಟ್ಟುಕೊಂಡಿದ್ದೆ. ಅದೇ ವಾಙ್ಮಯ ಪ್ರಪಂಚವನ್ನು ನಾನು ವಿಮರ್ಶಾತ್ಮಕವಾಗಿ ನಿರೀಕ್ಷಿಸತೊಡಗಿದ್ದೆ. ಹಳಗನ್ನಡದ ಅಭ್ಯಾಸವೂ ಅದೇ ಸುರುವಾಗಿತ್ತು. ಆಂಗ್ಲ ವಿಮರ್ಶೆಯ ರೀತಿಯೂ ಅದೇ ನನ್ನ ಮನಸ್ಸನ್ನು ಹಿಡಿದಿತ್ತು. ಅಲ್ಲದೆ 'ಗುಂಪಿನ' ಗೆಳೆಯರನ್ನು ಹೊಸತಾಗಿ ಕೂಡಿದ ನನಗೆ ಸಾಹಿತ್ಯಕ್ರಾಂತಿಯ ಮಬ್ಬು ಚೆನ್ನಾಗಿ ಹಿಡಿದಿತ್ತು. ಹೀಗಾಗಿ ಪ್ರತಿನಿತ್ಯ ತಿರುಗಾಡಲು ಹೋಗುವಾಗ ನನ್ನ ವಿಚಾರಗಳು ಕ್ರಾಂತಿಮಯವಾಗಿರುತಿದ್ದವು. ಹಳಗನ್ನಡದ ಅಲಂಕಾರಗಳನ್ನೆಲ್ಲ ಗೀಳು ಮಾಡುವ ವೃತ್ತಿಯೂ ನನ್ನದಿತ್ತು. ಮಹಾಕಾವ್ಯಗಳಲ್ಲಿ ಕಂಡುಬರುವ ಅವಾಸ್ತವಿಕ ವರ್ಣನೆಗಳನ್ನೋದಿ,—ಈ ಕವಿಗಳು ಅನುಭವ ಪಡೆದು ಬರೆಯಲಿಲ್ಲ, ತಾವು ಬರೆದುದನ್ನೇ ತಾವು ಅನುಭವಪಟ್ಟೆವೆಂದು ಹಿಂದಿನಿಂದ ತಮ್ಮನ್ನೇ ತಾವು ಮೋಸಗೊಳಿಸಿಕೊಂಡರೆಂದು ಅವರನ್ನು ಹೀಯಾಳಿಸುತ್ತಿದ್ದೆನು.

ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ನಿತ್ಯದಂತೆ ಒಂದು ಮುಂಜಾವಿನಲ್ಲಿ ತಿರುಗಾಡುತ್ತಿರುವಾಗ, ಒಂದು ಹಕ್ಕಿಯ ಇಂಪಾದ ಧ್ವನಿಯು ನನ್ನ ಕಿವಿ ಸೇರಿತು. ಆ ಧ್ವನಿಗೆ ನಾನು ಮನಸೋತೆ. ಹಕ್ಕಿಗಳು ಗಾನಮಾಡುವವೆಂದು ಆಂಗ್ಲ ಕವಿತೆಗಳಲ್ಲೋದಿ ಚಿಕ್ಕಂದಿನಲ್ಲಿ ನಾನು ಆ ಗಾನವನ್ನು ಕೇಳಬೇಕೆಂದು ವಿಶ್ವಪ್ರಯತ್ನ ಮಾಡಿದ್ದೆ. ಹಕ್ಕಿಗಳು ಚಿಲಿಪಿಲಿ ಮಾಡುತ್ತಿದ್ದವೇ ಹೊರತು ಗಾನಮಾಡುತ್ತಿರಲಿಲ್ಲ. ಕಡೆಗೊಂದು ಸಂಜೆ ನಾನು ನಿರ್ಧರಿಸಿದೆ: ನನಗೆ ಕೇಳಲಿ ಬಿಡಲಿ, ಹಕ್ಕಿಯ ಹಾಡನ್ನು ಕುರಿತು ಇವತ್ತು ನಾನು ಇಂಗ್ಲೀಷಿನಲ್ಲಿ ಒಂದು ಕವಿತೆಯನ್ನು ಬರೆಯಲೇಬೇಕು; ಬರೆಯುವದಕ್ಕಿಂತ ಮೊದಲು ಹೊರಗೆ ತಿರುಗಾಡಲು ಹೋಗಿ ಹಕ್ಕಿಯ ಗಾನವನ್ನು ಕೇಳಲು ಪ್ರಯತ್ನಿಸಬೇಕು! ಅದರಂತೆ ನಾನು ತಿರುಗಾಡಲು ಹೋದೆ. ಹೋಗುವಾಗ ಹಕ್ಕಿಯ ಹಾಡನ್ನು ಕೇಳುವದಕ್ಕಿಂತ ಮೊದಲು

'Oh ! Independent ! free from cares of earth !'

'ಭೂಮಿಯ ಋಗರ ಬವಣೆಯಿಲ್ಲದ ನಿರಂಕುಶನೆ!'

ಎಂಬ ಸಾಲನ್ನು ಅಂದು ಬರೆಯುವ ಕವಿತೆಯಲ್ಲಿ ಹಾಕಬೇಕೆಂದು ಮನಸ್ಸಿನಲ್ಲಿ ಬಂದು ಹೋಯಿತು. ಅಂತೂ ಹಕ್ಕಿಯನ್ನು ಕೇಳುವ ಮೊದಲೆ ಅಂದು ಬರೆಯಲಿರುವ ಕವಿತೆಯ ರೂಪರೇಷೆಗಳ ನಿಶ್ಚಯವಾಯಿತು. ಹಾದಿಯಲ್ಲಿಯ ಒಂದು ಮರದ ಮೇಲೆ ಕುಳಿತು ಹಕ್ಕಿಯೊಂದು ಕೂಗುತ್ತಿತ್ತು. ಗೋಲ್ಡ್‌ಸ್ಮಿಥ್ ಕವಿಯ 'ಹಾಳಾದ ಹಳ್ಳಿ'ಯೆಂಬ ಕವಿತೆಯ ಬಗ್ಗೆ ಓದುವಾಗ ಒಂದು ಮರದ ಬಡ್ಡಿಗೆ ಆತು ನಿಂತು ಹಳ್ಳಿಯ ಸೊಬಗನ್ನು ಹುಡುಗನಿರುವಾಗ ಆ ಕವಿಯು ಸವಿಯುವ ಚಿತ್ರವನ್ನು ನೋಡಿದ್ದೆ. ಅದರಂತೆ ನಾನೂ ಮರಕ್ಕೆ ಆತು ನಿಂತು ಹಕ್ಕಿಯ ಗಾನವನ್ನು ಕೇಳಿದೆ. ಆನಂದವಾಗದಿದ್ದರೂ ಆನಂದವಾಗಿ ಭಾವನಾಪರವಶನಾಗಿರುವೆನೆಂದು ನನ್ನಷ್ಟಕ್ಕೆ ನಾನು ಮೋಸಗೊಳಿಸಿಕೊಂಡೆ. ಹಕ್ಕಿಯ ಹಾಡನ್ನು ಕೇಳಿ ಹರ್ಷಪುಳಕಿತನಾದ ಮೇಲೆ ನಾನು ನಿಜವಾದ ಕವಿಯಾಗಿರಬೇಕಲ್ಲ! ಆಗ ಮನೆಗೆ ಹೋಗಿ ಇದಕ್ಕಿಂತ ಮೊದಲೆ ಮನಸ್ಸಿನಲ್ಲಿ ಅರ್ಧಮರ್ಧ ಸಿದ್ಧವಾದ ಕವಿತೆಯನ್ನು ಬರೆದೆ. ಹೀಗಿತ್ತು ಚಿಕ್ಕಂದಿನಲ್ಲಿಯ ನನ್ನ ಅನುಭವ.

ಅದಕ್ಕಿಂತೇ ಹಳಗನ್ನಡದ ಕವಿಗಳು ಕೋಗಿಲದ ಗಾನವನ್ನು ಬಣ್ಣಿಸುವದನ್ನು ಓದಿದ ಕೂಡಲೆ ನನ್ನ ತಲೆಗೆ ಪಿತ್ತವೇರುತ್ತಿತ್ತು. ಚಿಕ್ಕಂದಿನಲ್ಲಿ ನಾನು ನನ್ನನ್ನು ಮೋಸಗೊಳಿಸಿಕೊಂಡಂತೆ ಇವರ ಸ್ಥಿತಿಯಾಗಿರಬೇಕೆಂದು ನನಗೆ ಪೂರ್ಣ ಮನವರಿಕೆಯಾಗಿಹೋಗಿತ್ತು. ಸಂಪ್ರದಾಯ ಶರಣರಾಗಿ ಅವರು ಆತ್ಮವಂಚನೆಗೆ ಈಡಾದರೆಂದು ನನ್ನ ಮನಸ್ಸು ಹೇಳುತ್ತಿತ್ತು. ಯಾವನೋ ಒಬ್ಬ ಸಂಸ್ಕೃತ ಕವಿಯು ಪಕ್ಷಿಗಾನವನ್ನು ಬಣ್ಣಿಸಿಬಿಟ್ಟ. ಅಂದಿನಿಂದ ಪಂಪ ರನ್ನಾದಿಗಳೆಲ್ಲ ಕೋಗಿಲೆಯ ಬೆನ್ನು ಹತ್ತಿದರು!

ಹೀಗೆ ನನ್ನ ವಿಚಾರಗಳೆಲ್ಲ ಕ್ರಾಂತಿಮಯವಾಗಿದ್ದರೂ ಅಂದು ಮುಂಜಾನೆ ನಾನು ಹಕ್ಕಿಯ ಗಾನವೆಂದರೇನೆಂಬುದನ್ನು ಕಂಡುಕೊಂಡೆ; ಆ ಗಾನಕ್ಕೆ ಮನಸೋತುಬಿಟ್ಟೆ. ಪ್ರತಿನಿತ್ಯದಲ್ಲಿ ಅದೊಂದು ನನಗೆ ಆನಂದದ ವಿಷಯವಾಯಿತು. ಬೇರೆ ಕೆಲವು ಕಾರಣಗಳ ಮೂಲಕ

ಬಂದಾನೊಂದು ದಿನ ತಿರುಗಾಟವನ್ನು ನಿಲ್ಲಿಸಿದರೆ, ಆ ದಿನವೆಲ್ಲ ಹಕ್ಕಿಯು ನನ್ನನ್ನು ಕರೆದಂತಾಗಿ ಮನವು ಬಣಗುಟ್ಟುತ್ತಿತ್ತು. ಹೀಗೆ ದಿನಾಲು ಮುಂಜಾನೆ ಅದೇ ತರಹದ ಪಕ್ಷಿಗಾನವನ್ನು ಅದೇ ಸ್ಥಳದ ಸುತ್ತು ಮುತ್ತು ಕೇಳಿ ಕೇಳಿ ಅದಕ್ಕೆ ನಾನು ನನ್ನ ಮನಸ್ಸನ್ನು ಮಾರಿಕೊಂಡೆ.

ಆಗ ನನ್ನ ಕ್ರಾಂತಿಕಾರತೆಯು ಇನ್ನೊಂದು ಹಾದಿಯನ್ನು ಹುಡುಕಿತು. ಗಾನವೆಂದರೆ ಕೋಗಿಲೆಯದೆಂದು ಹಳಗನ್ನಡ ಕವಿಗಳೆಲ್ಲ ವರ್ಣಿಸಿದ್ದಾರೆ. ಅವರಲ್ಲಿ ಪ್ರತಿಯೊಬ್ಬನು ಕೋಗಿಲೆಯನ್ನು ಕುರಿತು ೧೦–೧೫ ಶ್ಲೋಕಗಳನ್ನಂತೂ ಬರೆದೇ ಬರೆದಿದ್ದಾನೆ. ಒಬ್ಬನು ಕೋಗಿಲೆಯ ಬಗ್ಗೆ ಬರೆದೊಡನೆ 'ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ' ಈ ಶುಂಭರೆಲ್ಲ ಕೋಗಿಲೆಯನ್ನು ಬಣ್ಣಿಸಿದರು. ಇವರಿಗೆ ಇನ್ನೊಂದು ಹಕ್ಕಿ ದೊರಕಲಿಲ್ಲೆ? ಈ ಕವಿಗಳಿಗೆ ಕಿವಿಗಳೇ ಇರಲಿಲ್ಲವೇನು? ಕೋಗಿಲೆಯು ಪಂಚಮದಲ್ಲಿ ಹಾಡುವದಂತೆ. ಹಾಡಲಿ. ಆದರೆ ಉಳಿದ ಹಕ್ಕಿಗಳ ಗಾನವನ್ನು ಕೇಳದೆ ಈ ಕವಿಗಳು ಪಂಚತ್ವವನ್ನೈದಿದರಲ್ಲ! ಅವರನ್ನು ಕಿವಿ ಹಿಡಿದು ತಂದು ಇಲ್ಲಿ ನನ್ನೊಡನೆ ತಿರುಗಾಡಿಸಬೇಕಾಗಿತ್ತು. ಅಂದರೆ ಯಾರಿಗೂ ಕೇಳಿಸದ ಕೋಗಿಲೆಯ ಗಾನವನ್ನು, ಎಲ್ಲರೂ ಕೇಳಬಹುದಾದ ಈ ಹಕ್ಕಿಯ ಹಾಡು ಹೇಗೆ ಮೀರಿಸುವದೆಂಬುದನ್ನು ಅವರಿಗೆ ತೋರಿಸುತ್ತಿದ್ದೆ. ನನ್ನ ಕಾವ್ಯದ ಕವಿಗಣವಂದಿತ ಕೋಕಿಲಕ್ಕೆ ಸ್ಥಾನವಿರದು. ನಾನು ಕೇಳಿದ ಹಕ್ಕಿಯ ಗಾನವನ್ನೇ ಬಣ್ಣಿಸಿ ಸಾಹಿತ್ಯದಲ್ಲಿ ಸತ್ಯಾನುಭವದ ಧ್ವಜವನ್ನು ನಿಲ್ಲಿಸುವೆನು. ಅಸತ್ಯಾತಿಶಯದ ಪರಂಪರೆಯು ಸಾಕು.

ಈ ರೀತಿಯಾಗಿ ನನ್ನ ವಿಚಾರಗಳು ತಾಕಲಾಡುತ್ತಿದ್ದವು. ಏಕಾಕಿಯಾಗಿ ದಿನಾಲು ತಿರುಗಾಡುತ್ತ ಹೋಗುವ ನಾನು ಒಂದು ಮುಂಜಾವು ನನ್ನ ನೇಹಿಗನನ್ನು ಕರೆದುಕೊಂಡು ನಡೆದೆನು. ಅವನನ್ನು ರಸಿಕನೆಂದು ಕರೆಯೋಣ. ರಸಿಕನು ಆಗ ಸೀನಿಯರ್ ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದ. ಸ್ಕಾಲರು; ಅಲ್ಲದೆ ಹಳಗನ್ನಡದ ನುಡಿಜೇನನ್ನು ತುಂಬಾ ಸವಿದಿದ್ದ. ಅವನೆದುರಿಗೆ ನನ್ನ ಈ ವಿಚಾರಗಳನ್ನು ಹೇಳುತ್ತ ನಡೆದೆ. ಕೋಗಿಲೆಯನ್ನೂ

ಹಳೆಯ ಕವಿಗಳನ್ನೂ ಬಯ್ದು ಮುಚ್ಚಿ ನಾನು ಕೇಳಿದ ಹಕ್ಕಿಯನ್ನೂ ಬರೆಯಲಿರುವ ಕಾವ್ಯವನ್ನೂ ಎತ್ತಿ ಹಿಡಿದೆ. ರಸಿಕನಲ್ಲಿಯ ಕುತೂಹಲವು ಹೆಚ್ಚಿತು. ವಿನಯಶಾಲಿಯಾದ ಆತನು ಭಾಷ್ಕಳಪಂತನಾದ ನನ್ನ ಮಾತನ್ನು ನಂಬಿ ಅನೇಕ ಸಲ ತಡೆಯಿಲ್ಲದೆ ಕೇಳಿದ್ದುಂಟು. ಈ ಸಲವೂ ನನ್ನ ನವೀನ ಶೋಧವನ್ನು ಕಂಡುಕೊಳ್ಳಲು ಉತ್ಸುಕನಾದನು. ಆ ಹಕ್ಕಿಯು ವಾಡಿಕೆಯಾಗಿ ಪ್ರೀತಿಸುವ ಸ್ಥಾನವನ್ನು ನಾವು ಸಮೀಪಿಸಿದೆವು. ಸಜ್ಜಾಗಲು ನಾನು ರಸಿಕನಿಗೆ ಸೂಚನೆ ಕೊಟ್ಟೆನು.

'ಹೂ—ಸಿ—ಹೂ—

ಹಾ—ಹೂ—'

ಎಂಬ ಧ್ವನಿಯು ಮರದಿಂದ ಬಂದಿತು. ಆನಂದಿತನಾಗಿ ನಾನು ರಸಿಕನ ಕಡೆಗೆ ತಿರುಗಿ ನೋಡಿದೆ.

'ಇದೇ ಏನು ನೀನು ಹೇಳಿದ ಹಕ್ಕಿ?' ರಸಿಕನು ಕೇಳಿದ.

ಹೌದೆಂದು ನಾನು ಉತ್ತರ ಕೊಟ್ಟೆ.

'ಅಯ್ಯೋ! ಹುಚ್ಚೆ! ಇದೇ ಕೋಕಿಲ!' ರಸಿಕನೆಂದ.

ಆಗ ನಾನು ಬೆಚ್ಚಿಬಿದ್ದೆ. 'ಇದು ಹೇಗೆ ಕೋಗಿಲೆಯಾಗಬಹುದು? ಕು ಹು ಹೂ' ಮುಂತಾಗಿ ಇದು ಎಲ್ಲಿ ಕೂಗುತ್ತದೆ?' ಎಂದು ನಾನು ಪ್ರಶ್ನೆ ಮಾಡಿದೆ.

'ಕೋಗಿಲೆಯು ಒಂದೇ. ಅದರ ಕೂಗು ಬೇರೆ ಬೇರೆ ಜನರಿಗೆ ಬೇರೆ ಬೇರೆಯಾಗಿ ಕೇಳಿಸುತ್ತದೆ' ಎಂದು ರಸಿಕನು ಹೇಳಿದ.

ಅಂದಿನಿಂದ ನಾನು ಪರಂಪರೆಯೆಂದರೆ ಕೀಳು, ಹಾಗು ಪ್ರಯೋಗವೆಂದರೆ ಮೇಲೆಂಬ ತಿಳುವಳಿಕೆಯನ್ನು ಬಿಟ್ಟುಬಿಟ್ಟಿದ್ದೇನೆ. ನಿರ್ಣಯ ಬುದ್ಧಿಯೆಂಬ ಕುದುರೆಗೆ ಇಂತಿಷ್ಟು ನಿಯಮಗಳೆಂಬ ಕಣ್ಣುಕುಲಾಯಿಗಳನ್ನು ಹಾಕಿದರೆ ಸಾಲದು. ಸದಾ ಜಾಗೃತವಾಗಿರುವ ವಿವೇಕವೆಂಬ ಕಡಿವಾಣವು ಅದಕ್ಕೆ ಅವಶ್ಯವಾಗಿ ಬೇಕು.



## ತಾರೆಗಳು

ತೀ. ನಂ. ಶ್ರೀಕಂಠಯ್ಯ

‘ತಟಿದ್ವಾ ತಾರಾ ವಾ ಕನಕಲತಿಕಾ ವಾ ಕಿಮಬಲಾ’ ಎಂದು ಮುಗಿಯುವ ಪದ್ಯವೊಂದು ಸಂಸ್ಕೃತದಲ್ಲಿದೆ. ಅಬಲೆಯರನ್ನು ವರ್ಣಿಸುವ ಪದ್ಯಗಳು, ಕಾವ್ಯಗಳು ಸಂಸ್ಕೃತದಲ್ಲೂ ಅದರಿಂದ ಪುಷ್ಟವಾದ ದೇಶಭಾಷೆಗಳಲ್ಲೂ ಹೇರಳವಾಗಿ ಉಂಟು; ಈ ವಿಷಯವನ್ನು ಬಿಟ್ಟರೆ ಕವಿತೆಗೆ ಜೀವನವೇ ಸಾಗುವುದಿಲ್ಲವೋ ಎಂದು ಕೇಳುವಷ್ಟು ಮಟ್ಟಿಗೆ ಉಂಟು. ಆದರೆ ಅವುಗಳಲ್ಲಿ ಸಾಮಾನ್ಯವಾಗಿ ಕಾಣದಿರುವ ಒಂದು ಸೌಂದರ್ಯವು ಈ ಪದ್ಯದಲ್ಲಿರುವಂತೆ ತೋರುತ್ತದೆ. ಪದ್ಯದ ವಿಷಯವಾಗಲಿ ಅದನ್ನು ನಿರೂಪಿಸುವ ರೀತಿಯಾಗಲಿ ಹೊಸದೇನೂ ಅಲ್ಲ. ತನ್ನ ಕಣ್ಣ ಮುಂದೆ ಸುಂದರಿಯೊಬ್ಬಳು ಹೊಳೆದಾಗ ‘ಇದು ಇಂದುವೋ ಪದ್ಮವೋ ಕನ್ನಡಿಯೋ ಅಥವಾ ಮುಖವೋ? ಇವು ಕಮಲಗಳೋ ಮೀನುಗಳೋ ಮದನ ಬಾಣಗಳೋ ಅಥವಾ ಕಣ್ಣುಗಳೋ?’ ಎಂದು ಮೊದಲಾಗಿ ಕೇಳುವ ಭ್ರಾಂತಿ ಹಿಂದೆ ಅನೇಕರಿಗೆ ಹುಟ್ಟಿದೆ; ಮುಂದೆಯೂ ಹುಟ್ಟತಕ್ಕದ್ದೇ. ಅದರಲ್ಲೇನೂ ಅತಿಶಯವಿಲ್ಲ. ಈ ಪದ್ಯದ ಅತಿಶಯವೆಲ್ಲಾ ಅದರ ಕೊನೆಯ ಪಾದದಲ್ಲಿ ಅಡಗಿದೆ: ‘ಇದು ಮಿಂಚೋ ತಾರೆಯೋ ಕನಕಲತೆಯೋ ಅಥವಾ ಅಬಲೆಯೋ?’—ಅಬಲೆಯನ್ನು ತಾರೆಯೆಂದು ಭ್ರಮಿಸಿದವನು ಈ ಕವಿಯೊಬ್ಬನೇ. ಏನು ಸುಂದರವಾದ ಕಲ್ಪನೆ! ಎಷ್ಟು ಗಭೀರವಾದ ಹೋಲಿಕೆ।

ಪಶ್ಚಿಮಗಗನದಲ್ಲಿ ಸಂಜೆಗೆಂಪು ಒಂದೊಂದು ಸಲ ಬಲು ಬೇಗ ಆರಿಹೋಗುತ್ತದೆ. ಮೇಘಗಳು ಯಾವಾಗಲೋ ಮರೆಯಾಗಿರುತ್ತವೆ. ಆಕಾಶದಲ್ಲೆಲ್ಲಾ ಶುಭ್ರ ನೀಲ; ಮುಳುಗಿದ ಸೂರ್ಯನ ಕಿರಣಶೇಷದ

ಬೆಳಕು ಪೂರ್ಣವಾಗಿ ಅಳಿಯದ ಅಗಾಧವಾದ ನೀಲ. ಅದರಲ್ಲಿ, ಕುದುರೆಯ ಮುಖದ ಮೇಲಿನ ಬಿಳಿಯ ಬಟ್ಟಿನಂತೆ ಒಂದೇ ಒಂದು ತಾರೆ ಮೂಡುತ್ತದೆ. ಆ ತಾರೆಯ ಮೇಲೆ ನೆಡುವ ನೋಟವನ್ನು ಸೆಳೆಯುತಕ್ಕ ಬೇರೆ ಯಾವ ವಸ್ತುಶಕಲವೂ ಆ ಅನಂತಾಕಾಶದಲ್ಲಿ ಸುಳಿಯುವುದಿಲ್ಲ. ಹೊರಗೆ ಬರಲು ಹಿಂಜರಿಯುವ, ಗುಂಪಿನೊಳಗೆ ಮರೆಯಾಗುವ ಆ ಕಿರಿಯ ತಾರೆಯನ್ನು ಒಮ್ಮೆಯಾದರೂ ಲೋಕದ ಗಮನಕ್ಕೆ ತರಬೇಕೆಂದೇ ಮಿಕ್ಕೆಲ್ಲ ವಸ್ತುಗಳೂ ಆಕಾಶರಂಗದಿಂದ ಜಾರಿಬಿಟ್ಟಿರುವಂತೆ ತೋರುತ್ತದೆ. ನೀಲಿಯ ತೆರೆಯ ಮೇಲಿನ ಈ ಬಿಳಿಯ ಚುಕ್ಕೆ ಆಕಾರದಲ್ಲಿ ಕಿರಿದಾಗಿದ್ದರೂ ನಮ್ಮ ಅಂತಃಕರಣವನ್ನೆಲ್ಲಾ ತುಂಬಿಕೊಳ್ಳುತ್ತದೆ. ಇಂಥ ತಾರೆಗೆ ನಲ್ಲೆಯನ್ನು ಹೋಲಿಸುವುದು ಎಷ್ಟು ಮರ್ಮಜ್ಞವಾದ ಉಪಮಾನ!

ಹೀಗಿದ್ದರೂ, ನಮ್ಮ ಹಿಂದಿನ ಕವಿಗಳು ತಾರೆಗೆ ಅನ್ಯಾಯ ಮಾಡಿದ್ದಾರೆ. ಅದು ಅವರ ಎದುರಿಗೆ ಬಂದು ಚೀರಲಿಲ್ಲ; ಸಹಜ ಲಜ್ಜೆಯಿಂದ ಸ್ವಲ್ಪ ಹಿಂದೆ ನಿಂತಿತು. ಈ ಕಾರಣದಿಂದ ಅದನ್ನು ಅವರು ಉಪೇಕ್ಷಿಸಿಬಿಟ್ಟರು. ಎಲ್ಲೋ ಒಂದೊಂದು ಸಲ ರಮಣಿಯ ಕಣ್ಣುಗಳೊಂದಿಗೆ ಅದನ್ನು ತೂಗಿ ಅದರ ಕಣ್ಣೊರಸಿಬಿಟ್ಟರು. ಸಾಮಾನ್ಯವಾಗಿ, ತೋರಿದ ಕೂಡಲೆ ಬಯಲಾಗುವ ಮಿಂಚಿನ ಕ್ಷಣಿಕ ಸೌಂದರ್ಯದ ಮೇಲೆಯೇ ಅವರ ದೃಷ್ಟಿ; ಲೋಕದಲ್ಲೆಲ್ಲೂ ಇಲ್ಲದ ಚಿನ್ನದ ಬಳ್ಳಿಯ ಮೇಲೆಯೇ ಅವರ ಮೋಹ. ಸ್ಥಿರವಾದ ವಿಮಲವಾದ ದಿವ್ಯವಾದ ತಾರೆಯ ಹೋಲಿಕೆಯನ್ನು ಸ್ತ್ರೀದೇಹಕ್ಕೆ ಕೊಟ್ಟು ಅದನ್ನು ಪವಿತ್ರಗೊಳಿಸುವ ಬಗೆ ಅವರಿಗೆ ಹೊಳೆಯಲಿಲ್ಲ. ಅವರಲ್ಲಿ ಒಬ್ಬನಿಗಾದರೂ ಅದು ಸ್ಫುರಿಸಿತಲ್ಲ!—ಇದಕ್ಕಾಗಿ ಸಂತೋಷಿಸೋಣ.

ಹೋಲಿಕೆಯ ಮಾತು ಹೋಗಲಿ; ತಾರೆಯ, ತಾರೆಗಳ ಸೌಂದರ್ಯವನ್ನಾದರೂ ನಮ್ಮವರು ಗಮನಿಸಿದ್ದಾರೆಯೆ? ಇಲ್ಲ, ಇಲ್ಲ: 'ಕಾ ನಿಶಾ ಶಶಿನಾ ವಿನಾ' (ಚಂದ್ರನಿಲ್ಲದೆ ಎಂಥ ರಾತ್ರಿ?)—ಬೆಳದಿಂಗಳೇನೋ ಸೊಗಸಾದದ್ದು. ಆದರೆ ಅದೇ ಜೀವನದ ಸುಖಸರ್ವಸ್ವವೆ? ಚಂದ್ರನಿಗೆ

ನಮ್ಮವರು ಅತಿಪ್ರಾಶಸ್ತ್ಯವನ್ನು ಕೊಟ್ಟು ಅವನನ್ನು ಕೊಬ್ಬಿಸಿಬಿಟ್ಟಿದ್ದಾರೆ. ಕಾವ್ಯಗಳಲ್ಲೆಲ್ಲಾ ಅವನ ಪ್ರತಾಪವೇ. ತಾರೆಯ ಮಾತನ್ನು ಒಂದು ವೇಳೆ ಎತ್ತಿದರೆ,—ಚಂದ್ರನೊಡನೆ ಹೋಲಿಸಿ ಅದನ್ನು ಹೀಯಾಳಿಸುವುದಕ್ಕೆ. ಚಂದ್ರನು ತಾರಾಮಂಡಲಕ್ಕೆಲ್ಲಾ ಒಡೆಯನೆಂದು ಸಾರುವುದಕ್ಕೆ. ಆದರಿಂದಲೇ ಅವನಿಗೆ ಅಷ್ಟು ಅಹಂಕಾರ! ವಿರಹಿಗಳನ್ನು ಕರುಣೆಯಿಲ್ಲದೆ ಉರಿಸುತ್ತಾನೆ. ಅಂತೂ, ಚಂದ್ರನ ಮೇಲಿನ ದುರಭಿಮಾನದಲ್ಲಿ ನಮ್ಮ ಕವಿಗಳ ಪ್ರಜ್ಞೆ ಮಂಕಾಗಿ ಹೋಗಿದೆ. ಇಲ್ಲದಿದ್ದರೆ, ಅಮಾವಾಸ್ಯೆಯ ರಾತ್ರಿಯಲ್ಲಿ ಅವರು ಆಕಾಶವನ್ನು ನಿರೀಕ್ಷಿಸಿ ಅದರ ಸೌಂದರ್ಯವನ್ನು ಸವಿಯದೆ, ಹೊಗಳದೆ ಬಿಡುತ್ತಿದ್ದರೆ?

ರಾತ್ರಿಯಲ್ಲಿ ಆಕಾಶವನ್ನು ನಿರೀಕ್ಷಿಸುವುದು ಈಚೀಚೆಗೆ ಒಂದು ಅಪೂರ್ವಭೋಗವಾಗಿ ಪರಿಣಮಿಸುತ್ತಿದೆ. ವಿದ್ಯುದ್ದೀಪಗಳು ಬೆಳಗುವ ಪಟ್ಟಣಗಳಲ್ಲಂತೂ ಬೆಳದಿಂಗಳ ಸುಖವನ್ನು ಅನುಭವಿಸುವುದೇ ಅಸಾಧ್ಯ. (ಒಂದೊಂದು ಸಲ ದೀಪಗಳು ಥಟ್ಟನೆ ಆರಿಹೋದಾಗ ಹೊಸ ನಿಧಿ ಸಿಕ್ಕಿದಂತೆ ಮನಸ್ಸಿಗೆ ಅನ್ನಿಸುತ್ತದೆ.) ಇನ್ನು ತಾರೆಗಳ ಮಾತೇಕೆ? ಅನೇಕರು ಅವುಗಳನ್ನು ಚೆನ್ನಾಗಿ ನೋಡಿದ್ದಾರೆಯೋ ಇಲ್ಲವೋ, ಅದೂ ಸಂದೇಹವೇ. ಅವುಗಳನ್ನು ಮನದಣಿಯ ನೋಡಬೇಕಾದರೆ ಈಗ ಹಳ್ಳಿಗಳಿಗೆ ಹೋಗಬೇಕು; ಅದರಲ್ಲೂ ಮಾಳಿಗೆಮನೆಗಳಿರುವ ಹಳ್ಳಿಗಳಿಗೆ ಹೋಗಬೇಕು. ಬೇಸಗೆಯಲ್ಲಿ ಹಾಯಾಗಿ ಮನೆಯ ಮಾಳಿಗೆಯ ಮೇಲೆ ಅಂಗತ್ತನಾಗಿ ಮಲಗಿ ಅಮಾವಾಸ್ಯೆಯ ಆಕಾಶವನ್ನೆಲ್ಲಾ ಒಂದೇ ನೋಟದಲ್ಲಿ ನುಂಗಿಬಿಡುವ ಅದೃಷ್ಟವು ಎಲ್ಲರಿಗೂ ಲಭಿಸುವುದಿಲ್ಲ. ಆ ನೋಟದಲ್ಲಿ ಏನು ವೈವಿಧ್ಯ, ಏನು ಸ್ವಾರಸ್ಯ, ಏನು ಅದ್ಭುತ, ಏನು ವಿಭ್ರಮೆ! ಲೆಕ್ಕವಿಲ್ಲದಷ್ಟು ಬೆಳಕಿನ ಕಿಡಿಗಳು ಮಿನುಗಿ ಮಿನುಗಿ ಮಿನುಗುವುದನ್ನು ಎಷ್ಟು ಹೊತ್ತು ನೋಡಿದರೂ ತೃಪ್ತಿಯುಂಟಾದೀತೆ? ರಾತ್ರಿಯ ಬಹುಭಾಗವು ಕಣ್ಣುಮುಚ್ಚದೆಯೆ ಕಳೆದುಹೋಗುತ್ತದೆ. ಉತ್ತರದಲ್ಲಿ ಸಪ್ತರ್ಷಿಮಂಡಲದ 'ಸ'ವೊತ್ತು ಗಡಿಯಾರದ ಘಂಟೆಯ ಮುಳ್ಳಿನಂತೆ ನಿಶ್ಚಲವಾಗಿ ತೋರಿ ಪರಿಭ್ರಮಿಸುತ್ತಿರುತ್ತದೆ. ಇತ್ತ ಪಶ್ಚಿಮದಲ್ಲಿ ಮೃಗಶಿರೆಯು

ಮಂಡಲವು ಮೆಲ್ಲಮೆಲ್ಲಗೆ ಬೆಟ್ಟಗಳ ತುದಿಗೆ ಇಳಿಯುತ್ತಿರುತ್ತದೆ. ನೆತ್ತಿಯ ಕಡೆ ತೇಜಸ್ಸಿನ ಪುಂಜ: ಬಿಳಿಮುರಳ ದಿಣ್ಣೆಯಂತೆ ಗೋಚರಿಸುವ ಛಾಯಾಪಥ. ಎಲ್ಲೆಲ್ಲಿಯೂ ಹೂವೆರಚಿದಂತೆ ತಾರೆಗಳು; ಇಲ್ಲಿ ದಟ್ಟವಾಗಿ, ಅಲ್ಲಿ ವಿರಳವಾಗಿ, ಒಂದು ಕಣ್ಣುಕುಕ್ಕುವಂತೆ ಮಿರುಗಿ, ಮತ್ತೊಂದು ಆಕಾಶದ ನೀಲದಲ್ಲಿ ಮಬ್ಬಾಗಿ ಕರಗಿ, ನೋಡುವವನ ಮುಗ್ಧಹೃದಯವನ್ನು ತಮ್ಮಲ್ಲಿಯೇ ಲಯಗೊಳಿಸುತ್ತವೆ. ವಿಶ್ವತೇಜಸ್ಸೇ ಅನಂತಾಕೃತಿಯನ್ನು ತಳೆದು ಪ್ರತ್ಯಕ್ಷವಾಗಿರುತ್ತದೆ. ಈ ದಿವ್ಯದರ್ಶನದ ಎದುರಿಗೆ ಮನುಷ್ಯನ ಕ್ಷುದ್ರಭಾವಗಳು ದಹಿಸಿಹೋಗುವುದರಲ್ಲಿ ಏನಾಶ್ಚರ್ಯ!



## ಭೂವೈಕುಂಠ

ಆರ್. ಪಿ. ಕುಲಕರ್ಣಿ

ನನ್ನ ಗೆಳೆಯನ ವಿಷಯಕ್ಕೆ ನಾನು ಹಿಂದೊಮ್ಮೆ ಬರೆದಿದ್ದೆ. ಈಗ ಮತ್ತೆ ಅವನ ವಿಷಯವಾಗಿಯೇ ಬರೆಯಬೇಕೆಂದೆನಿಸಿ ಬರೆಯುತ್ತಿದ್ದೇನೆ. ಇಲ್ಲಿ ನಾನು ಬರೆಯುವದು ವ್ಯಕ್ತಿಪರಿಚಯವಲ್ಲವೆಂದು ಮೊದಲೇ ಹೇಳಿಡುತ್ತೇನೆ. ಏಕೆಂದರೆ ವ್ಯಕ್ತಿಪರಿಚಯವು ಬೇಸರವನ್ನುಂಟು ಮಾಡುವ ವಿಷಯ. ಮೇಲಾಗಿ ನನ್ನ ಗೆಳೆಯನ ಹಿರಿಮೆಯನ್ನು ನಾನೇ ಹೊಗಳಿದರೆ, ಅದರಲ್ಲಿ ಮಹತ್ವವೂ ಇಲ್ಲ. ಆದರೂ ಅವನ ವಿಷಯವಾಗಿ ಎರಡು ಮಾತುಗಳನ್ನು ಬರೆಯದಿರಲಾರೆ.

ನನ್ನ ಗೆಳೆಯನು ಭಾವನಾತರಂಗಗಳಲ್ಲಿ ತೇಲುವ ಜೀವಿ. ಅವನದು ಒಂದೇ ಮಾತು, ಒಂದೇ ವಿಚಾರ. ಅವನು ತುಳಿಯುವದು ಒಂದೇ ದಾರಿ. ದಾರಿಯೊಂದುದರಿಂದ ಅವನು ಪ್ರಯಾಣ ಬೆಳೆಸುವನೆಂದು ಮಾತ್ರ ತಿಳಿದುಕೊಳ್ಳಬೇಡಿ. ಇಲ್ಲವೆ ತಿಳಿದುಕೊಂಡರೂ ಯಾವ ಆತಂಕವೂ ಇಲ್ಲ. ಯಾಕಂದರೆ ಅವನು ಮೇಲಿಂದಮೇಲೆ ಹೇಳುವನು–ತಾನೊಬ್ಬ ಪ್ರಯಾಣಿಕ; ತನ್ನ ದೊರೆಯ ಊರಿಗೆ ಹೋಗತಕ್ಕವನು, ಎಂದು. ಗೆಳೆಯನ ಮಾತುಗಳಲ್ಲಿ ಕೆಲವೊಂದು ನನಗೆ ಅರ್ಥವಾಗುವವು. ಉಳಿದವು ಹಾಗೆಯೇ ಉಳಿದುಬಿಡುವವು. ಆದರೂ ಅವನು ಹೇಳುವದರಲ್ಲಿ ಏನಾದರೂ ಒಂದು ಸತ್ಯತೆ ಇರಬಹುದೆಂದು, ಅದನ್ನು ಅರಿತುಕೊಳ್ಳಬೇಕೆಂಬ ಕುತೂಹಲವು ದಿನದಿನಕ್ಕೆ ನನ್ನಲ್ಲಿ ಬೆಳೆಯಹತ್ತಿತು. ಅವನದಾದರೂ ನನ್ನ ಮೇಲೆ ಸಂಪೂರ್ಣ ನಂಬಿಗೆ. ನನ್ನನ್ನುಳಿದು ಅವನು ಅನ್ಯರ ಕೂಡ ಇಂಥ ಮಾತುಗಳನ್ನು ಎಂದೂ ಆಡುತ್ತಿರಲಿಲ್ಲ.

ಹೀಗೆ ಒಂದು ದಿನಸ ಮಾತಿಗೆ ಮಾತು ಹೊರಟು, 'ಸ್ವರ್ಗ,

ವೈಕುಂಠ ವಿಷಯಗಳನ್ನು ನೀನು ನಂಬುವಿಯಾ?' ಎಂದು ಗೆಳೆಯನು ಕೇಳಿದನು. 'ಇಲ್ಲ' ಎಂದೆ.

'ಅದೇಕೆ?' ಎಂದನು ಗೆಳೆಯ.

'ಇದೇನು ಪ್ರಶ್ನೆ ರಾಮು!' ಎಂದೆ. ಆಗ ರಾಮುನೂ ತೀಕ್ಷ್ಣ ದೃಷ್ಟಿಯಿಂದ ನನ್ನನ್ನು ನೋಡಿ 'ಅದೇಕೆ? ಪುರಾಣದಲ್ಲಿ ಬರೆದಿರುವದು ಸುಳ್ಳೇ? ಕನಕದಾಸರು ವೈಕುಂಠದ ವರ್ಣನೆಯನ್ನು ಮಾಡಿದ್ದು ಹುಸಿಯೆ?' ಎಂದನು.

ಇಂದಿನ ಯಂತ್ರಯುಗದಲ್ಲಿ ಪುರಾಣವನ್ನು ನಂಬುವವರು ಯಾರು ರಾಮು? ಅದು ಕಾವ್ಯ, ಕವಿಯ ಕಲ್ಪನಾಶಕ್ತಿ. ಅದಕ್ಕೆ ಸತ್ಯತೆಯ ಸ್ವರೂಪ ಹೇಗೆ ಬಂದೀತು? ಇನ್ನು ಕನಕದಾಸರ ವಿಷಯ: ಅವರಂತೂ ಕವಿಗಳೇ. ಕವಿಗಳ ರಾಜ್ಯದಲ್ಲಿ ಏನನ್ನು ಕಾಣಲಿಕ್ಕಿಲ್ಲ ನೀನು? ಅದಕ್ಕಾಗಿ ಇಲ್ಲದ ಸಂಗತಿಗಳನ್ನು ನಂಬಿ ತಲೆಯಲ್ಲಿ ಏನಾದರೊಂದು ಹುಚ್ಚು ಕಲ್ಪನೆಯನ್ನು ಹಾಕಿಕೊಳ್ಳಬೇಡ' ಎಂದೆನು. ಆದರೆ ಅವನಿಗೆ ಸಮಾಧಾನವಾಗಲಿಲ್ಲ. ಮತ್ತೆ ವಿಚಾರಮಗ್ನನಾದನು.

'ಏನನ್ನು ಕುರಿತು ಚಿಂತಿಸುತ್ತಿರುವೆ?' ಎಂದು ನಾನು ಮತ್ತೆ ಕೇಳಿದೆ.

'ಏನಿಲ್ಲ. ಅದೇ ಸ್ವರ್ಗ, ವೈಕುಂಠ.' ರಾಮುನುತ್ತರ ಕೊಟ್ಟ.

'ಇರಲಿ ನಡೆ ಈಗ, ಊಟ ಮಾಡಿ ಬರೋಣ' ಎಂದು ಹೇಳಿ ನಾವು ಹೋಗಬೇಕಾದ ಹೊಟೆಲ್ಲಿಗೆ ಅವನನ್ನು ಕರೆದುಕೊಂಡು ಹೋದೆ. ಅಲ್ಲಿ ಹೋಗುವವರೆಗೆ ಯಾವ ಮಾತನ್ನೂ ಆಡಲಿಲ್ಲ. ಯಂತ್ರದ ಗೊಂಬೆ ಯಂತೆ ರಾಮುನು ನನ್ನನ್ನು ಹಿಂಬಾಲಿಸಿದನು. ಯಂತ್ರದಲ್ಲಿ ಉರವಲನ್ನು ತುರುಕುವಂತೆ ಕೆಲವು ತುತ್ತುಗಳಿಂದ ತುತ್ತಿನ ಚೀಲವನ್ನು ತುಂಬಿದನು. ತನ್ನ ದೇಹದ ಪರಿವೆಯೇ ಅವನಿಗಿರಲಿಲ್ಲ. ಊಟ ಮುಗಿಸಿಕೊಂಡು ನಮ್ಮ ಕಿರುಮನೆಗೆ ಬಂದೆವು. ಆಗ ಸಹ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಕನಕದಾಸರ 'ಭೂವೈಕುಂಠ' ಎಂಬ ಪದವನ್ನು ಹೇಳುತ್ತ ಕೋಣೆಯು ತುಂಬ ತಿರುಗಾಡಹತ್ತಿದನು ತಿರುಗಾಡುತ್ತಿರುವಾಗಲೇ ನನ್ನೆದುರಿಗೆ ನಿಂತು 'ವಸಂತ, ಈ ವಿಷಯವು ನಿನಗೆ ತಿಳಿಯದು. ಸ್ವರ್ಗವು

ಸತ್ಯಸೃಷ್ಟಿ. ಕನಕದಾಸರು ಬರಿ ಕವಿಗಳಲ್ಲ, ಪೂರ್ಣಜ್ಞಾನಿಗಳವರು. ಜ್ಞಾನಿಗಳೆಂದಿಗೂ ಹುಸಿಯಾಗಲಾರರೆಂದು ನನ್ನ ಹೃದಯವು ಒಡನುಡಿಯುತ್ತಿದೆ. ಭೂವೈಕುಂಠವನ್ನು ಕಣ್ಣಾರೆ ನೋಡಿ ವರ್ಣಿಸಿರುವೆವೆಂದು ಅವರು ಹೇಳಿದ್ದಾರೆ. ತಿಳಿದುಕೊಳ್ಳುವ ಯೋಗ್ಯತೆ ನಮ್ಮಲ್ಲಿಲ್ಲವೆಂಬುದನ್ನು ಮರೆತು ಅದು ಸುಳ್ಳೆಂದು ತಿಳಿಯುವ ಪಾಪಕ್ಕೆ ನಾವು ಗುರಿಯಾಗುತ್ತೇವೆ' ಎಂದು ನನ್ನ ಅಂತಃಕರಣದಲ್ಲಿ ಕಲಮಲವಾಗುವಂತೆ ನುಡಿದನು. ಗೆಳೆಯನು ಗಂಭೀರನಾದುದನ್ನು ಕಂಡು 'ಇರಬಹುದು ಬಿಡು, ಪಾಪಕ್ಕೆ ಗುರಿಯಾಗುವದು ನಮ್ಮಂಥ ಪಾಮರರಿಗೇ ಸಲ್ಲಿತು' ಎಂದು ನಾನು ಮಾತು ಮುಗಿಸಿದೆನು. ರಾತ್ರಿಯಾಗಿದ್ದರಿಂದ ಇಬ್ಬರೂ ಮಲಗಿಕೊಂಡೆವು. ಬೆಳಗಿನಲ್ಲಿ ಸುಮಾರು ೫॥ ಘಂಟೆಗೆ ನನಗೆ ಎಚ್ಚರಾಯಿತು. ಕಣ್ಣು ತೆರೆದು ನೋಡುತ್ತೇನೆ, ರಾಮನು ಪದ್ಮಾಸನಸ್ಥನಾಗಿ ನಾಭಿಕಮಲದಿಂದ ಬ್ರಹ್ಮರಂಧ್ರದವರೆಗೆ ಶ್ವಾಸೋಚ್ಛ್ವಾಸವನ್ನು ನಡೆಸಿದ್ದನು. ಧ್ಯಾನಸ್ಥನಾಗಿ ಕುಳಿತಿದ್ದ ಅವನ ಕಣ್ಣುಗಳು ಅರ್ಧಮುಚ್ಚಿದ್ದವು. ನೋಡನೋಡುತ್ತಾ ಅವನ ಮೈನವಿರಿತು; ಮುಖವು ಅರಳಿತು! ತುಟಿಗಳಲ್ಲಿ ಮುಗುಳುನಗೆಯೊಂದು ಮೂಡಿತು. ಯಾವದೋ ಒಂದು ಆನಂದಸಮಾಧಿಯಲ್ಲಿ ತಲ್ಲೀನನಾಗಿದ್ದ ರಾಮನು ಒಮ್ಮೊಂದೊಮ್ಮೆ ಮೈ ಜುಮ್ಮೆನಿಸುವ ಧ್ವನಿಯಲ್ಲಿ, 'ಭೂವೈಕುಂಠ! ಭೂವೈಕುಂಠ!' ಎಂದು ಕೂಗಿಕೊಂಡನು. ಕೂಗುತ್ತಲೆ ರಾಮನಿಗೆ ಎಚ್ಚರವಾಯಿತು. ಅವನೊಡನೆ ಮಾತನಾಡಲು ನನಗೆ ಧೈರ್ಯ ಸಾಲಲಿಲ್ಲ. ಕೆಲವೊಂದು ನಿಮಿಷಗಳ ಮೇಲೆ ಅವನೇ ಮಾತನಾಡಿಸಿದನು. 'ವಸಂತಾ, ಕನಕದಾಸರು ಬರೆದದ್ದು ಬರಿ ಕಾವ್ಯವಲ್ಲ; ಅದು ಅವರ ಅನುಭವದ ಅಸ್ತಿವಾರದ ಮೇಲೆ ನಿಂತಿದೆ. ಭೂವೈಕುಂಠವನ್ನು ನಂಬು' ಎಂದು ನಿಶ್ಚಯಾತ್ಮಕ ಧ್ವನಿಯಲ್ಲಿ ರಾಮನು ಹೇಳಿದನು. 'ಅದಿರಲಿ, ನಿನ್ನ ಅನುಭವವನ್ನು ನಾನು ಕೇಳಿ ತಿಳಿಯಬಹುದೇ?' ಎಂದು ನಾನು ಆತುರನಾಗಿ ಕೇಳಿದೆ. ರಾಮನೆಂದನು, 'ಹೇಳದೆ ಏನು? ನಿನ್ನೆ ರಾತ್ರಿ ನಾನು ಮಲಗಿದೆನು ಮಾತ್ರ. ಆದರೆ ನಿದ್ರೆ ಬರಲಿಲ್ಲ. ಹಾಸಿಗೆಯ ಮೇಲೆ ಆಸನಸ್ಥನಾಗಿ ಕುಳಿತು ಬಿಟ್ಟೆ. ಹರಿದಾಡುವ ಮನಸ್ಸನ್ನು ಒಂದೆಡೆಯಲ್ಲಿ ತರಲು ಎರಡು ತಾಸುಗಳು ಕಳೆದವು. ಮುಂದೆ

ವೈಕುಂಠವನ್ನು ಕಾಣಬೇಕೆಂಬ ಹಂಬಲವನ್ನು ಬಿಟ್ಟು ಏಕಾಗ್ರಚಿತ್ತ ವಾಗಿರಲು ಹವಣಿಸಿದೆ. ಕಲ್ಪನೆಗಳು ಬಯಲಾದಂತೆ ಆತ್ಮವು ಗಾಳಿಯಂತೆ ಹಗುರಾಯಿತು. ವಿಭೂತಿಗಳಿಬ್ಬರು ಬಂದು ಎಲ್ಲಿಯೋ ನನ್ನನ್ನು ಕೈಹಿಡಿದು ಕರೆದುಕೊಂಡು ಹೋದರು. ಬೆಟ್ಟದ ತುದಿಗೆ ಹೋಗಿ ಮುಟ್ಟಿದಾಗ, ಅಲ್ಲಿರುವ ಒಂದು ಹಾಸುಗಲ್ಲನ್ನು ತೆಗೆಯಲು ಹೇಳಿದರು. ಕಿತ್ತು ನೋಡುತ್ತೇನೆ, ಅದೊಂದು ಗುಹೆಯಾಗಿತ್ತು. ಅದರೊಳಗಿಂದ ದಿವ್ಯತಮವಾದ ಬೆಳಕು ಹೊರಹೊಮ್ಮಿತು. ಅವರ ಸೂಚನೆಯ ಮೇರೆಗೆ ಇಣಿಕಿ ನೋಡಿದೆನು. ಕನಕದಾಸರು ವರ್ಣಿಸಿದ ಭೂವೈಕುಂಠವೇ ಅಲ್ಲಿತ್ತು. ಎಂದೂ ಕಾಣದ ಒಂದು ದೇದೀಪ್ಯಮಾನವಾದ ಮಂಟಪ. ಅದರಲ್ಲಿ ಬೆಳಕು ಎಲ್ಲಿಂದ ಬರುತ್ತಿತ್ತೋ ಕಾಣೆ. ಆದರೆ ಮನಸ್ಸಿಗೆ ಆನಂದ ವನ್ನುಂಟುಮಾಡುವ ಬೆಳಕದು ! ಅಲ್ಲಿರುವ ತೊಲೆಗಳ ಬೆಳಕು ಬಣ್ಣಿಸಲ ಸಾಧ್ಯವಾದುದು. ಅವುಗಳ ಮೇಲೆ ವಜ್ರ–ವೈಡೂರ್ಯಗಳ ಕೆತ್ತನೆಯ ಕೆಲಸವಿತ್ತು. ನೆಲಗಟ್ಟಿನಲ್ಲಿ ಸಹ ಹರಳುಗಳನ್ನು ಹೊಂದಿಸಿದ್ದರು. ನನ್ನ ಕಿವಿಗಳೆಂದೂ ಕೇಳದ ದೈವಿಕ ನೃತ್ಯಸಂಗೀತಗಳ ಧ್ವನಿಯು ಕೇಳಿಸಿತು. ಆನಂದದಿಂದ ಮೈಮರೆತ ತೇಜಸ್ವಿಗಳಾದ ಸ್ತ್ರೀ–ಪುರುಷರು ಅಲ್ಲಿಯ ಮಹೋತ್ಸವದಲ್ಲಿ ಪಾಲುಗಾರರಾಗಿದ್ದರು. ಅಲ್ಲಿಯ ತುಂಬುರ ನಾದವು ಇನ್ನೂ ನನ್ನ ಕಿವಿಯಲ್ಲಿ ಕಟ್ಟಿದಂತಾಗಿದೆ. ಈ ಮಹಾದೃಶ್ಯವನ್ನು ನಾನು ಕಣ್ಣಾರೆ ಕಾಣುವಾಗ ಇದೇ ಕನಕದಾಸರು ಬಣ್ಣಿಸಿದ ಭೂವೈಕುಂಠವಿರಬಹುದೆಂಬ ಕಲ್ಪನೆಯು ಮನದಲ್ಲಿ ಸುಳಿದುಹೋಯಿತು. ಒಡನೇ ಆ ದಿವ್ಯ ದೃಶ್ಯವು ಮಾಯವಾಯಿತು. ಆಧ್ಯಾತ್ಮಸಾಧನದಲ್ಲಿ ಕಲ್ಪನೆಗಳಿಗೆ ಎಡೆಯಿರಬಾರದೆಂಬ ಮಾತು ಆಗ ನನಗೆ ಮನದಟ್ಟಾಯಿತು. ಅದೇನೇ ಇರಲಿ ಕನಕದಾಸರು ಮಾಡಿದ ಭೂವೈಕುಂಠದ ವರ್ಣನೆಯಲ್ಲಿ ಅಕ್ಷರಶಹ ಸತ್ಯವಿದೆ. ಅದನ್ನು ನಾನು ಕಂಣಾರೆ ಕಂಡಿದ್ದೇನೆ.'

ರಾಮನು ಮಾತು ಮುಗಿಸಿದಾಗ ಬೆಳ್ಳಗೆ ಬೆಳಕಾಗಿತ್ತು. ದಿವ್ಯ ದರ್ಶನವನ್ನು ಪಡೆದ ಅವನ ದೃಷ್ಟಿಯಲ್ಲಿ ಸಾಫಲ್ಯತೆಯು ಒಡೆದು ಕಾಣುತ್ತಿತ್ತು. ನಾನು ಭೂವೈಕುಂಠವನ್ನು ಕಾಣುವೆನೆಂದು ?

---

## ನೌಕಾಚಂದ್ರ

ಪು. ತಿ. ನರಸಿಂಹಾಚಾರ್ಯ

ಅಂದು ಕೃಷ್ಣದ್ವಾದಶಿ. ಇರುಳು ದಟ್ಟವಾಗಿ ಹಬ್ಬಿತ್ತು. ನನ್ನ ಕಿರುಮನೆಯಲ್ಲಿ ಹಾಸಿಗೆಯ ಮೇಲೆ ಮಲಗಿಕೊಂಡು ಅಂದೆ, ತಲುಪಿದ್ದ ನನ್ನ ಹೆಂಡತಿಯ ಕಾಗದವೊಂದನ್ನು ಮೂರನೆಯ ಸಾರಿ ಓದುತ್ತಾ, ಅದರಲ್ಲಿದ್ದ ಒಲುಮೆಯ ಸಂದೇಶ, ಚಿರಕಾಲ ಅಗಲಿರುವದರ ಯಾತನೆ, ಸಂದರ್ಶನೋತ್ಸುಕತೆ, ಒಂದು ಜೀವವು ಇನ್ನೊಂದನ್ನು ಅರಸಿಕೊಂಡು ಹರಿದು ಬಂದು ಬೆರೆಯುವರೀತಿ, ಇವುಗಳನ್ನು ಕುರಿತು ಮನಸದಲ್ಲೆ ಮೆಲುಕು ಹಾಕುತ್ತಿದ್ದೆ. ಪ್ರಣಯವೊಂದು ಅಮೋಘವಾದ ಜೀವಶಕ್ತಿ, ಹಾಗೂ ಗಂಭೀರವಾದ ಮಾಯೆಯೆಂದೆನ್ನಿಸಿತು. ಅದು ಎಷ್ಟು ವಿವಿಧ ವಿಚಿತ್ರ ರೀತಿಗಳಲ್ಲಿ ಆವಿರ್ಭವಿಸುತ್ತದೆ! ಅದರ ಪ್ರವಾಹವು ಎಷ್ಟು ಚಿತ್ರಗತಿಗಳಲ್ಲಿ ಹರಿಯುತ್ತದೆ! ವಿಶ್ವವೆಲ್ಲಾ ಈ ಹೊನಲಿನ ಪಾತ್ರದಂತೆ ತೋರಿತು. ನೀರಿನಲ್ಲಿ ಮೀನುಗಳಂತೆ–ಹಂಸಗಳಂತೆ, ಈ ಹೊನಲಿನಲ್ಲಿ ಚರಾಚರ ಜೀವಿಗಳೆಲ್ಲವೂ ಈಜಿ ತೇಲಿ ಮುಳುಗಿ ಕ್ರೀಡಿಸುತ್ತಿರುವಂತೆ ಭಾಸವಾಯಿತು. ಈ ಪ್ರವಾಹದ ಮೇಲೆ ಮಾನವರ ಅಸಂಖ್ಯಾತವಾದ ಅತಿ ಲಘುನೌಕೆಗಳು ತೇಲುತ್ತಿರುವುದೂ ಕಣ್ಣಿಗೆ ಬಿತ್ತು. ಇವುಗಳಲ್ಲಿ ಕೆಲವು ಅಲೆಗಳ ಹೊಡೆತಕ್ಕೆ ಮಗುಚಿಕೊಳ್ಳುವುವು. ಕೆಲವು ಚಂಡ ಮಾರುತನಿಗೆ ಸಿಕ್ಕಿ ಬಂಡೆಗಳ ಮೇಲೆ ಒಡೆಯುವುವು; ಇನ್ನೂ ಕೆಲವು ಸುಳಿಗಳೊಳಗೆ ಗಿರ್ರನೆ ತಿರುಗಿ ಮುಳುಗಿಹೋಗುವುವು. ಆದರೆ ಈ ವ್ಯಾಘಾತಗಳಿಂದ ತಪ್ಪಿಸಿಕೊಂಡು ತೇಲುವ ಕ್ರೀಡಾ–ನೌಕೆಗಳು ಅಲ್ಪವಾಗಿಲ್ಲ. ಅಸಂಖ್ಯಾತವಾಗಿವೆ. ಈ ದೋಣಿಗಳು ಅಲೆಗಳ ಮೇಲೇರಿ, ಕೆಳಗೆ ಧುಮುಕಿ, ಕುಣಿದು, ನಲಿದು, ಪಾರಿವಾಳಗಳಂತೆ–ಅಲ್ಲ, ಉಚ್ಚೈಶ್ರವಸ್ಸ

ಗಳಂತೆ- ಎಷ್ಟು ಸೋಜಿಗವಾಗಿ ಸಾಗುತ್ತಿವೆ! ಅವುಗಳಲ್ಲಿ ಕುಳಿತಿರುವವರ ವಿನೋದಾನಂದಗಳನ್ನು ಏನು ಹೇಳಲಿ? ವಿಶ್ವವು ಇವರ ನಗೆಯಿಂದ ತುಂಬಿತುಳುಕುವಂತೆ ತೋರುತ್ತದೆ. ಭಗ್ನನೌಕೆಗಳಲ್ಲಿ ಮುಳುಗಿ ಹೋಗುತ್ತಿರುವವರ ಆರ್ತನಾದವು ಈ ನಗೆಯ ಸೆರಗನ್ನೂ ಸೋಕುವುದಿಲ್ಲವೇನೋ! ಈ ಆನಂದಗಾನದ ಏಕದೇಶದಲ್ಲಿ ಅದು ಮುಳುಗಿ ಹೋಗುವದೇನೋ! ಹೀಗೆ ಭಾವಿಸಿಕೊಳ್ಳುತ್ತಿರುವಾಗ ಹೊರಗಡೆ ಎದುರು ಕಿಟಕಿಯ ಮೂಲಕ ಉಜ್ವಲವಾಗಿ ಮಿನುಗುತ್ತಿರುವ ಮಿಥುನರಾಶಿಯು ಕಣ್ಣಿಗೆ ಬಿತ್ತು. 'ನೀವೂ ಈ ಪ್ರಣಯವ್ಯಾಪ್ತಿಯಿಂದ ತಪ್ಪಿಸಿಕೊಂಡಿಲ್ಲ' ಎಂದು ಮನದಲ್ಲಿ ನಕ್ಕೆ.

ಈ ರೀತಿಯಾಗಿ ಪ್ರಣಯವೊಂದು ನೆರೆಯಾಗಿ ಭಾವಿಸಿ, ಸೃಷ್ಟಿಯನ್ನು ಅದರಲ್ಲಿ ತೇಲಿಬಿಟ್ಟಿರುವ ನನ್ನ ಕಲ್ಪನೆಯು ನನಗೆ ಒಂದು ವಿಧವಾದ ಸಂತೋಷವನ್ನುಂಟುಮಾಡಿತು. ಈ ಹರ್ಷವು ಮನಸ್ಸಿಗೆ ಒಂದು ತರದ ನೆಮ್ಮದಿಯನ್ನು ತುಂಬಿತು—ಈ ನೆಮ್ಮದಿ ನಿದ್ರೆಯನ್ನು—ನಿದ್ರೆಯೊಂದು ಕನಸನ್ನು.

ಅದೊಂದು ವಿಚಿತ್ರವಾದ ಕನಸು. ನನ್ನ ಜಾಗೃತಭಾವನೆಗಳೆಲ್ಲಾ ಕನಸಿಗಿಳಿದು ರೂಪುಗೊಂಡಿದ್ದವು.

ಚಂದ್ರನು ಮುತ್ತಿಡುತ್ತಿರುವ ಇರುಳು. ಎರಡು ದಡಗಳನ್ನೂ ಮೀರಿ ಹರಿಯುತ್ತಿರುವ ನೆರೆಗೊಂಡ ವಿಶಾಲ ನದಿ. ಈ ನದಿಯಲ್ಲಿ ಅದೇ ಅತಿ ಹಗುರವಾದ ಪ್ರಣಯನೌಕೆಗಳ ಯಾತ್ರೆ. ಅಲೆಗಳ ಹೊಡೆತ ಮೊರೆತಗಳನ್ನು ಅಲಕ್ಷಿಸಿ, ನೆರೆಯ ಪೆರ್ಮೆಯನ್ನೂ ದರ್ಪವನ್ನೂ ಹೀಯಾಳಿಸುವಂತೆ, ಮದಗಜವನ್ನೇರಿ ಅದನ್ನು ಕೆಣಕಿ ಕೆರಳಿಸಿ ಅದರ ಕೋಪಾಟೋಪಕ್ಕೆ ವಿನೋದಗೊಳ್ಳುವ ಚತುರಮಾವತಿಗನಂತೆ, ತೆರೆಗಳ ಮೇಲೇರಿ, ಹಾರಿ, ಧುಮುಕಿ, ದೆಸೆದೆಸೆಗೆ, ವಿಚಿತ್ರಗತಿಯಿಂದ ಧಾವಿಸುವ ದೋಣಿಗಳು. ಆ ಪ್ರವಾಹದ ಗಂಭೀರನಾದವನ್ನೇ ಶ್ರುತಿಗೊಂಡು, ಆ ವಾತಾವಾರಣವನ್ನು ತುಂಬುವಂತೆ ಈ ದೋಣಿಗಳಿಂದೇಳುವ, ಹೃದಯಸ್ಪರ್ಶಿಯಾದ ಪ್ರಮೋದಾನಂದಗಾನ! ಈ ಗಾನದಂಚಿನಲ್ಲಿ, ಅಶುದ್ಧಸ್ವರದಂತೆ,

ರಾಗದ ಸೊಗಸನ್ನು ಹೆಚ್ಚಿಸುವ ಮಿಶ್ರಸ್ವರದಂತೆ, ಒಡೆದ ದೋಣಿಗಳಿಂದೆದ್ದು ಒಮ್ಮೆಗೊಮ್ಮೆ ಕೇಳಿಸುವ ಆಕ್ರಂದನ. ಒಂದು ಗಳಿಗೆಯ ಮೇಲೆ ಇವುಗಳೆಲ್ಲಾ ತೆರೆಯಲ್ಲಿ ಮರೆಯಾಗಿ ಮತ್ತೊಂದು ಕನಸು ರೂಪುಗೊಳ್ಳುವುದು.

ಈಗೊಂದು ಪಟ್ಟಣ. ಅಲ್ಲಿ ತನುಮನಪ್ರಾಣಗಳನ್ನು—ಯಾಕೆ ಜೀವಿತಸರ್ವಸ್ವವನ್ನೂ ಅಭಿಲಾಷೆಗೆ ಒತ್ತೆಯಿಟ್ಟು, ಸಂಕೇತವನ್ನು ಅರಸಿಕೊಂಡು ಹೋಗುವ ಪ್ರಣಯಮುಗ್ಧರ ಅಭಿಸಾರ! ಆ ಮೇಲೆ ವಿರಹಿಗಳ ನಿಟ್ಟುಸಿರು, ಪ್ರಣಯಚ್ಯುತರ ನಿರಾಶೆಯ ಬೇಗೆ. ಕುಲದಲ್ಲಿ ಕಳಂಕವು ಹರಡುವ ಜ್ವಾಲೆ, ಈ ಜ್ವಾಲೆಗೆ ತುತ್ತಾಗಿ ದಹಿಸಹೋಗುವ ಸೌಂದರ್ಯ, ಮಾಧುರ್ಯ, ಸೌಭಾಗ್ಯ, ಒಳ್ಳೆಯತನ, ಕಳಂಕವೂ ಕೂಡ. ಇದರ ಮೇಲೆ ಒಂದು ಉದ್ಯಾನವನ. ಅಲ್ಲಿ ಚಿರಕಾಂಕ್ಷಿತ ಸುಖವೊಂದು ಕೈಗೆ ದೊರೆತಿರುವದನ್ನು ನಂಬಲಾರದೆ, ನಂಬದಿರಲಾರದೆ, ಸ್ವಲ್ಪ ಹೊತ್ತು ಸಂದೇಹಗೊಂಡು ಕಳವಳಗೊಂಡು, ಆ ಮೇಲೆ ಈ ಪ್ರಮೋದವು ತನ್ನನುಭವದ ಹಿಡಿತಕ್ಕೆ ಸಿಕ್ಕಿದ ಮೇಲೆ ತಾವೇ ತಾವಾಗಿ, ವಿಶ್ವಕ್ಕೆಲ್ಲ ತಾವೇ ತಾವಾಗಿ, ನಿಯತಿಯ ಕಟ್ಟಳೆಗಳನ್ನೆಲ್ಲಾ ಮೀರಿ, ಸ್ವತಂತ್ರರಾಗಿ, ಜೀವನ್ಮುಕ್ತರಾಗಿ, ಆನಂದಜೀವಿಗಳಾಗುವ, ಪ್ರೇಮೋನ್ಮತ್ತರ ವಿಹಾರ. ಈ ಆನಂದವೇ ನಿಜ, ಇದೇ ನಿಯತಿಯ ಸತ್ಯ, ಇದೇ ಮುಕ್ತಿ, ಉಳಿದುವೆಲ್ಲಾ, ಮಾಯೆ—ಅನೃತ. . ಎಂದುಕೊಳ್ಳುವಷ್ಟರಲ್ಲಿ ಈ ಕನಸು ಮಾಯವಾಗಿ ಮತ್ತೊಂದು ಕಣ್ಣಿಗೆ ಬೀಳುವುದು.

ಕಾರಿರುಳು. ಅಪಾರವಾದ ಅಕ್ಷುಬ್ಧವಾದ ಪ್ರಶಾಂತಸಾಗರ. ಅದರಲ್ಲಿ ತೆರೆಗಳೊಂದೂ ಎದ್ದಿಲ್ಲ. ಸಾಗರವು ಸುಷುಪ್ತಿಯಲ್ಲಿರುವಂತೆ ತೋರುವುದು. ಇದು ಭಯಜನಕವಾದ ಶಾಂತಿ. ಈ ಕಡಲಿನ ಮೇಲೆ ಮೆಲ್ಲಮೆಲ್ಲನೆ ಒಂಟಿದೋಣಿಯೊಂದು ತೇಲುತ್ತಿದೆ. ಚೆಲುವಾದ ಹಗುರವಾದ ಪುಟ್ಟ ಹೂದೋಣಿ. ಆ ಗಂಭೀರಸಾಗರದ ವಾತಾವರಣಕ್ಕೆ ಈ ದೋಣಿಯು ಹೊಂದಿಕೊಂಡಿರುವದಿಲ್ಲ. ಅದು ಅಲ್ಲಿ ತೇಲುತ್ತಿರುವುದು ನಿಯತಿಯ ಪರಿಹಾಸ್ಯದಂತೆ ತೋರುತ್ತದೆ. ಸಾಗರದ ಅರಿವಿಲ್ಲದೆ, ಆದರ

ಲಕ್ಷ್ಯಕ್ಕೆ ಬೀಳದೆ, ಕಳ್ಳತನದಿಂದ ಹುದುಗಿರುವಂತೆ,–ಕಡಲೆಲ್ಲಿ ಎಚ್ಚರ ಗೊಳ್ಳುತ್ತದೋ, ಆ ಮೇಲೆ ಅದರ ದೃಷ್ಟಿಗೆಲ್ಲಿ ಬೀಳುತ್ತೇನೋ, ಬಿದ್ದರೆ ಏನಾಗುವದೋ ಎಂಬ ಭಯದಿಂದ ಅದರ ನಿಶ್ವಾಸಕ್ಕೆ ತಲ್ಲಣಿಸುತ್ತಿರು ವಂತೆ ತೋರುತ್ತದೆ.

ಅದರಲ್ಲಿ ತೇಲುವ ಸಾಹಸಿಗರಾರು ?

ಹೆಂಗಸು ! ಹರೆಯದ ಹುಡುಗಿ, ಸಂದರಿ. ಇದೇನು, ಒಬ್ಬಳೇ ಒಬ್ಬಳು–ಒಂಟಿ ! ಅನ್ಯಮನಸ್ಕಳಾಗಿ ಕುಳಿತಿದಾಳೆ. ಅತಿವಿಷಣ್ಣಳಾಗಿ ದಾಳೆ. ಮುಖದಲ್ಲಿ ನಿರಾಶೆಯ ಮುದ್ರೆಯೊತ್ತಿದೆ. ಕಡಲಿನಲ್ಲಿ ತನ್ನ ಆ ದೋಣಿಯಂತೆ ಪ್ರಣಯದ ಸಾಗರದಲ್ಲಿ ತನ್ನ ಬಾಳನ್ನು ತೇಲಿಬಿಟ್ಟಿರ ಬಹುದು; ಅಹಾ, ಕಡು ಚಲುವೆ–ಕಡು ಚಲುವೆ ! ಪ್ರಿಯನಿಂದ ತಿರಸ್ಕೃತಳಾಗಿ ಸಂಕೇತದಿಂದ ಹಿಂತಿರುಗುತ್ತಿದಾಳೇನು ? ಆ ಮೇಲೆ, ಈಗ ನಿಷ್ಠುರಬಂಧುಗಳ ಬಳಿಗೆ ತೇಲಿ ಹೋಗುತ್ತಿದಾಳೊ ? ಇಷ್ಟು ಗಭೀರ ವಾದ ಇರುಳಿನಲ್ಲಿ, ಅಪಾರಸಾಗರದಲ್ಲಿ, ಈ ಅಸಾಧಾರಣ ಮೌನದಲ್ಲಿ, ಅಮಾನುಷವಾದ ಒಂಟಿತನದಲ್ಲಿ, ಶೋಕಪಾತ್ರೆಯಂತೆ ತೋರುತ್ತಿರುವ ಲಘುತಮವಾದ ನಾವೆಯಲ್ಲಿ ಈ ತಿರಸ್ಕೃತೆ ಎಲ್ಲಿಗೆ ತೇಲಿ ಹೋಗು ತ್ತಿದಾಳೆ ? ಯಾವ ಗತಿಗೆ ?

ನಾನು ತೀರ ಭಯಗೊಂಡೆ, ತೀರ ಕುತೂಹಲಗೊಂಡೆ. ಅಲ್ಲಿಗೆ ಕನಸು ಹರಿಯಿತು. ಕಣ್ಣುಬಿಟ್ಟೆ. ಆದರೆ ಕನಸಿನ ಪ್ರಭಾವವಳಿಯಲಿಲ್ಲ. ನನ್ನ ಪಾರ್ಥಿವ ಜೀವನಕ್ಕೆ ಪರಿಚಿತವಾದ ವಸ್ತುಗಳು ದೃಷ್ಟಿಗೆ ಬಿದ್ದ ಮೇಲೆ ಕನಸು ಕರಗಿ ಹೋಗಿ ನಾನು ನನ್ನ ಕಿರುಮನೆಯಲ್ಲೆ ಮಲಗಿದೇ ನೆಂಬ ಅರಿವುಂಟಾಯಿತು. ಎದ್ದು ಹೊರಗಡೆ ನೋಡಿದೆ. ಇನ್ನೂ ಕತ್ತಲು. ರಾತ್ರಿಯ ಮೂರು ಜಾವಗಳು ಮಾತ್ರ ಕಳೆದಿದ್ದವು. ಬ್ರಾಹ್ಮಮುಹೂ ರ್ತವು ಆಗತಾನೆ ಪ್ರಾರಂಭವಾಗಿತ್ತು. ಹಾಸಿಗೆ ಬಿಟ್ಟು ಮನೆಯ ಹೊರಗೆ ಹೊರಟು ಬಂದೆ.

ಬ್ರಾಹ್ಮಮುಹೂರ್ತವು ಎಷ್ಟು ನೀರವವಾದ ಕಾಲ ! ಆ ವೇಳೆ ಯಲ್ಲಿ ಗಾಳಿಕೂಡ ಅಲುಗುವುದಿಲ್ಲ. ಹಕ್ಕಿಗಳು ಕನವರಿಸುವುದಿಲ್ಲ.

ನಿಶಾಚರ ಜೀವಿಗಳನ್ನೂ ಸಹ ಮೌನವೊಂದು ಬಿಗಿದಿರುತ್ತದೆ. ತರು ಲತಾಗುಲ್ಮಾದಿಗಳೆಲ್ಲವೂ ಮಂತ್ರಮುಗ್ಧವಾದಂತೆ ನೀರವವಾಗುತ್ತವೆ. ಊರಿನಲ್ಲಿಯೂ ಗಾಢವಾದ ಮೌನ, ಅಕ್ಷುಬ್ಧವಾದ ಮೌನ. ರೋಗಿಗಳ ನರಳಿಕೆಯಿಂದಾಗಲಿ, ಶಿಶುಗಳ ರೋದನದಿಂದಾಗಲಿ, ನಾಯಿಗಳ ಬಗಳು ವಿಕೆಯಿಂದಾಗಲಿ ಈ ಮೌನಕ್ಕೆ ಭಂಗಬರುವುದಿಲ್ಲ. ಈ ವಿಚಿತ್ರ ನೀರ ವತೆಯು ಸೃಷ್ಟಿಸುಷುಪ್ತಿಯಲ್ಲಿರುವುದರ ಪರಿಣಾಮವಲ್ಲ, ವಿಶ್ವಚೈತನ್ಯವು ಯಾವುದೊ ಒಂದು ಹೊಸಹುಟ್ಟಿಗೆ ವೇದನೆಯಲ್ಲಿರುವ ನೀರವ ಭಾವ!

ಈ ಮೌನವು ನನ್ನಾತ್ಮವನ್ನದುಮಿತು. ಕಾತರಗೊಂಡು ಸುತ್ತಲೂ ಹಬ್ಬಿರುವ ಮನೆಗಳನ್ನೂ ಹಿತ್ತಲಗಿಡಗಳನ್ನೂ ಬೆಟ್ಟವನ್ನೂ ಉತ್ಸುಕತೆ ಯಿಂದ ನೋಡಿದೆ. ಈ ಅಚರಪ್ರಪಂಚವೂ ತನ್ನ ಚಿಪ್ಪಿನಲ್ಲಿ ಹುದುಗಿ ಕೊಂಡು ಯಾವುದೊ ಒಂದು ಆವಿರ್ಭಾವವನ್ನು ಉಸಿರು ಹಿಡಿದು ನಿರೀಕ್ಷಿಸುತ್ತಿರುವಂತೆ ತೋರಿತು. ಮೇಲೆ, ಬಾನಿನಲ್ಲಿ ಉಜ್ವಲ ನಕ್ಷತ್ರ ರಾಶಿಗಳು ಮಿನುಗದೆ, ಕಣ್ಣೆವೆಯಿಕ್ಕದೆ, ಏಕದೃಷ್ಟಿಯಿಂದ ಕೌತುಕ ವೊಂದನ್ನು ನಿಟ್ಟಿಸುತ್ತಿರುವಂತೆ ತೋರಿದುವು. ಈ ಕಡೆ, ಸೂರ್ಯನು ಉದಿ ಸುವ ದಿಕ್ಕಿನಲ್ಲಿ ಕೃಷ್ಣತ್ರಯೋದಶಿಯ ಕೊಂಬಿನ ಚಂದ್ರನು ಒಂಟಿಯಾಗಿ, ಮ್ಲಾನನಾಗಿ, ವಿವರ್ಣನಾಗಿ, ವಿಷಣ್ಣನಾಗಿ, ತೇಲುತ್ತಿದ್ದನು. ಹ್ಞ, ಚಂದ್ರನೆಂದೆನೆ? ಅಲ್ಲ ಅಲ್ಲ, ಇದು ಚಂದ್ರನಲ್ಲ. ಆ ತಿರಸ್ಕೃತ ಪ್ರಣಯಿ ನಿಯ ದೋಣಿಯಿರಬಹುದು. ಆ ಪ್ರಣಯುದಗ್ಧಳನ್ನು ಯಾವುದೊ ಒಂದು ವಿಷಾದಾಂತಕ್ಕೆ ಒಯ್ಯುವ ನೌಕೆ! ನನ್ನ ಕನಸಿನ ನನಸು! ಹೌದು, ಅದೇ ಸಾಗರ, ಪ್ರಶಾಂತ ಧೀರ ಭೀಮಸಾಗರ! ಅದೇ ಮೌನ—ಅಕ್ಷುಬ್ಧ ಸ್ನಿಗ್ಧ ಮೌನ. ಅದೇ ದೋಣಿ, ಅತಿ ಸುಂದರವಾದ, ಲಘುತಮವಾದ ಒಂಟಿದೋಣಿ! ಅದೋ, ಅದರಲ್ಲಿ ಕುಳಿತಿರುವ ಆ ಅಪ್ಸರ ಕನ್ಯೆಯ ಅಂಗರೇಖೆಯು ಹೇಗೆ ಕಣ್ಣಿಗೆ ಕಾಣಿಸಿಕೊಳ್ಳುತ್ತಿದೆ! ಈ ಹತಭಾಗ್ಯೆ ಯನ್ನು ಹೊತ್ತುಕೊಂಡು ಈ ಶೋಕಪಾತ್ರೆ ಎಲ್ಲಿಗೆ ಹೋಗುತ್ತಿದೆ? ಯಾವ ಗತಿಗೆ?

ನಾನು ವಿಷಾದಕುತೂಹಲಗಳಿಂದ ನನ್ನ ದೃಷ್ಟಿಯನ್ನು ಆ ದೋಣಿಯ ಮೇಲೆ ನೆಟ್ಟು ಬೆರಗುಬಡಿದವನಂತೆ ನಿಂತುಬಿಟ್ಟೆ.

ನಾನು ಹೀಗೆ ನಿಂತಿರುವಾಗಲೇ ಬ್ರಾಹ್ಮಮುಹೂರ್ತವು ಕಳೆಯಿತು. ಉಷಃಕಾಲವು ಪ್ರಾಪ್ತವಾಯಿತು. ವಿವಿಧ ಧ್ವನಿಸಂಕುಲದಿಂದ ಮೌನವು ಒಡೆಯಿತು. ಮೂಡಲು ಬೆಳುಪೇರಿತು. ಜೀವಕ್ಕೆ ನಿಶೆಯ ಸೆರೆಯು ಸಡಿಲಿತು. ಬೂದು ಬೆಳಕೊಂದು ಕತ್ತಲನ್ನು ಪಶ್ಚಿಮದ ಕಡೆಗೆ ತರುಬಿ ಕೊಂಡು ಹೋಗುತ್ತಿತ್ತು. ನಕ್ಷತ್ರಗಳು ಈ ಅನಾಹುತದ ಕೊನೆಯನ್ನು ನೋಡಲಾರದೆಯೋ ಎಂಬಂತೆ ಮ್ಲಾನವಾಗಿ, ಒಂದೊಂದಾಗಿ ಮರೆ ಗೊಂಡವು. ಆ ಮೇಲೆ ಆ ಒಂಟಿದೋಣಿ!

ಈಗ ಅದೋ, ಕರೆ ಕಾಣುತ್ತಿದೆ. ಅಲ್ಲಿ ಚಲಿಸುವ ನೆರಳುಗಳೇನು? ಯಾರವು? ಅಲ್ಲೇನು ಸನ್ನಾಹ ನಡೆಯುತ್ತಲಿದೆ? ಆ ಮೇಲೆ ಈ ದೋಣಿ?....

ಕ್ಷಣಕ್ಷಣಕ್ಕೂ ಮುಂದುವರಿದು ಗಳಿಗೆಗಳಿಗೆಗೂ ಮ್ಲಾನತರ ವಾಗಿ, ವಿವರ್ಣವಾಗಿ, ಮಹಾಸಾಗರ ಮಧ್ಯದಲ್ಲಿ ಅದು ಹೇಗೆ ತಲ್ಲಣಿಸು ತ್ತಿದೆ! ಆ ಕರೆಯನ್ನು ಅದು ಮುಟ್ಟಲೇಬೇಕು.

* * * *

ಉಷಸ್ಸು ರಾಗರಹಿತವಾಗಿ ಮೂಡಿ ಸಾಗಿಹೋಯಿತು. ಮೂಡ ಲಲ್ಲಿ ಬೆಳಕು ಬಲಗೊಂಡಿತು. ಈಗ ಕರೆಗೂ ದೋಣಿಗೂ ಒಂದೇ ಒಂದು ಮಾರು ದೂರ. ಮಾತ್ರ—ಕೆಲವು ಗಳಿಗೆಗಳ, ಅಂತರ. ಅದು ಹೇಗೆ ಬಳಿಚಿ ಕೊಳ್ಳುತ್ತಿದೆ!

* * * *

ಸೂರ್ಯಬಿಂಬವು ಚಕ್ರವಾಳದಂಚಿನಲ್ಲಿ ಜಡವಾಗಿ, ಕಾಂತಿಹೀನ ವಾಗಿ ಒದೆಯುವದಕ್ಕೆ ಅಣಿಮಾಡಿಟ್ಟಿರುವ ಚಂಡಿನಂತೆ ಕಾಣಿಸಿ ಕೊಂಡಿತು. ದೋಣಿಯೊ?....

ಹಾ – ನಾನು ನೋಡುತ್ತಿರುವ ಹಾಗೆಯೇ, ಅದು ಹೇಗೆ ಕರಗಿ ಕಣ್ಮರೆಯಾಗಿ ಹೋಯಿತು! ಕರೆಗೆ ತಲುಪಿತೇನು? ಅಥವಾ ಅರೆಗೆ ಬಡೆದು ಮುಳುಗಿಹೋಯಿತೋ?....

ನಾನು ಅವ್ಯಾಜವಾಗಿ ಗಡಗಡನೆ ನಡುಗಿದೆ....

# ಹರಟೆ

ೲ ೲ ೲ

'ಚಿಕ್ಕಕೋರ'

ಅದಾವ ದಿನವೊ ನನಗೆ ಗೊತ್ತಿಲ್ಲ; ಆದರೆ ಅದೊಂದು ನನ್ನ ಜೀವನದಲ್ಲಿಯ ಚಿರಸ್ಮರಣೀಯವಾದ ದಿನ. ಅದನ್ನು ನಾನೆಂದಿಗೂ ಮರೆಯುವಂತಿಲ್ಲ. ಅಂದು ಸಾಯಂಕಾಲ ಗೆಳೆಯರೊಡನೆ ಮನದಣಿ ಹರಟೆ, ವಾಯುಸೇವನಕ್ಕಾಗಿ ಹೊರಹೊರಟೆ. ನಾನು ಇತ್ತೀಚೆಗೆ ಹರಟುವುದು ತೀರ ವಿರಳ. ಆಗ ಹಾಗಿರಲಿಲ್ಲ, ಆಗ ನಾನೊಬ್ಬ ಹರಟೆಯ ಮಲ್ಲ. ಅವರಲ್ಲಿಯೆ ನನಗೆ ಅತ್ಯಾನಂದ; ಅದರಿಂದಲೇ ಎಲ್ಲರಿಗಾನಂದವಾಗುವ್ರುದೆಂಬುದು ನನ್ನ ಭಾವನೆ. ಎಂದಿನಂತೆ ಆ ದಿನವೂ ನಾನು ಹರಟೆಯಲ್ಲಿ ಮೈಮರೆತಿದ್ದೆ. ನನ್ನ ಮಾತಿನ ಹೊನಲು ತಡೆಯಿಲ್ಲದೆ ಹರಿದು ಗೆಳೆಯರಲ್ಲೆಲ್ಲ ವಿಧವಿಧದ ಭಾವಲಹರಿಗಳು ಮೂಡಿದವು. ಮೆಚ್ಚು ಮಾತಿನಿಂದ ನಲ್ಮೆಯೂ, ಹುಚ್ಚು ಮಾತಿನಿಂದ ನಗೆಯೂ, ಚುಚ್ಚು ಮಾತಿನಿಂದ ರೇಗುವಿಕೆಯೂ, ಮನದಲ್ಲಿ ಮೊಳೆತು, ಮುಖದಲ್ಲಿ ಹೊಳೆಯಿತು. ಆದರೆ ನನ್ನ ಸಂತಸದಲ್ಲಿಯೆ ಲೀನನಾದ ನನಗೆ ಅವುಗಳ ಪರಿಚಯವಾಗುವುದೆಂತು? ಕೊನೆಗೊಮ್ಮೆ ನನ್ನ ಹರಟೆಯು ಕೊನೆಗಂಡಿತು. ಮತ್ತು ನನ್ನ ಮಾತಿನ ಮೇಲ್ಮೆಯನ್ನು ಮನದಲ್ಲಿಯೆ ಹೊಗಳುತ್ತ ನಾನು–ಉಲ್ಲಸಿತವೃತ್ತಿಯಿಂದ ನನ್ನ ಒಲವಿನ ಕಿರಿಬೆಟ್ಟನೇರಿದೆ. ಗೆಳೆಯರಾರು ಅಂದು ನನ್ನೊಡನೆ ಬಂದಿರಲಿಲ್ಲ.

ದಿನ್ನೆಯ ಮೇಲೆ ಹೋದ ಕೂಡಲೆ ಅಲ್ಲಿಯ ಪ್ರಸನ್ನತೆಯು ನನ್ನನ್ನೊಂದು ಬಲವಾಗಿ ಸೆಳೆಯಿತು. ಗಗನಾಂಗಣದಲ್ಲಿ ಗೆಳೆಯರೊಡನೆ ಹರಟೆ, ನೇಸರನು ಅದೇ ಪಡುವಣ ಬೆಟ್ಟವನ್ನಲಂಕರಿಸಿದ್ದ. ದಿಗ್ಬಂಧುಗಳಲ್ಲಿ ಕೆಲವರ ಮುಖಗಳು ಹೊಂಬಣ್ಣದಿಂದ ಹೊಳೆಯುವವು; ಕೆಲವರ

ಮುಖಗಳು ಕಪ್ಪಾಗಿರುವುವು. ಮೇಘ ಮಂಡಲದಲ್ಲಿಯೂ ಇದೇ ವೈಚಿತ್ರ್ಯವು ವ್ಯಕ್ತವಾಗಿರುವುದು. ಇದೆಲ್ಲ ಹರಟೆಯ ಪರಿಣಾಮವೋ ಏನೋ? ಸೂರ್ಯನು ಮಾತ್ರ ಮೆಲುನಗೆಯೊಂದಿಗೆ ಬೆಟ್ಟದ ಮೇಲೆ ಸಂಚರಿಸುತ್ತಲಿದ್ದ.

ಪ್ರಸನ್ನಚಿತ್ತನಾದ ನಾನು ಈ ನಗೆಮೊಗದ ನೇಸರನನ್ನು ಕಾಣುತ್ತ ನನ್ನ ಚಿರಪರಿಚಿತ ಆಸನದಲ್ಲಿ ಕುಳಿತೆ. ಬರಬರುತ್ತ ರವಿರಾಜನು ಬೆಟ್ಟವನ್ನಿಳಿದು ತನ್ನ ಕಡಲುಮನೆಯನ್ನು ಸೇರಿದ. ಅವನ ಪ್ರಭೆಯೊಡನೆ ನನ್ನ ಮನದಲ್ಲುಕ್ಕುವ ಸಂತಸವೂ ಕಡಿಮೆಯಾಯಿತು. ದಿನಾಲು ನನ್ನೊಡನೆ ಅಲೆದಾಡಲು ಬರುವ ನನ್ನ ಸಚ್ಚಿನ ಗೆಳೆಯನೂ ಅಂದು ಬಂದಿರಲಿಲ್ಲ. ಮಾತನಾಡಲು ಇನ್ನಾರೂ ಇಲ್ಲದ್ದರಿಂದ ನಾನು ಸಹಜವಾಗಿ ವಿಚಾರ ಪರವಶನಾದೆ.

ನನ್ನ ಭಾಗ್ಯದ ದಿನವೇ ಅದು. ಅಂದೆನ್ನ ಆಚಾರವೇ ವಿಚಾರದ ವಿಷಯವಾಯಿತು. ಅಂತರಂಗನಿರೀಕ್ಷಣೆಯು ನಡೆಯಿತು. ನಾನು ಮಾಡುವದೆಲ್ಲ ಒಳಿತೇ? ಆಡುವುದೆಲ್ಲ ಚನ್ನೇ? ನನ್ನ ನಡೆನುಡಿಗಳು ಅನ್ಯರನ್ನು ಸಂತೈಸುವವೋ? ಸಂತಪಿಸುವವೊ? ಇಂತು ಮುಂತಾದ ಅನೇಕ ವಿಚಾರಗಳು ಮನದಲ್ಲಿ ಮೂಡಿದವು. ಅದೇ ನಡೆದ ನನ್ನ ಹರಟೆಯು ನೆನಪಾಯಿತು. ಗೆಳೆಯರ ಮುಖಮುದ್ರೆಗಳು ಕಣ್ಣೆದುರು ನಿಂತವು. ಕೆಲವರು ನಗುತ್ತಿರುವರು; ಕೆಲವರು ಮೌನವಾಗಿರುವರು; ಬೇರೆ ಕೆಲವರು ಕೆಂಡದಂತಾಗಿರುವರು. ಈ ನೋಟವು ಸೂಚಿಸುವುದೇನನ್ನು? ಮುದ್ರೆಯ ಭಿನ್ನತೆಯಲ್ಲಿ ಭಾವಭಿನ್ನತೆಯಿರಬಹುದೇ? ನಗು ತಿರಸ್ಕಾರವನ್ನೂ, ಮೌನವು ನೋವನ್ನೂ, ಕೆಂಪು ಕೋಪವನ್ನೂ ತೋರಿಸುವುದೇ? ಅಹುದು. ಹಾಗೆಯೆ ಇರಬಹುದು. 'ಮಾತಿನಿಂ ನಗೆನುಡಿಯು, ಮಾತಿನಿಂ ಹಗೆ ಕೊಲೆಯು' ಎಂದೆನ್ನ ಗೆಳೆಯನು ಉಸುರಿದುದು ಅದಕ್ಕಾಗಿಯೆ ಇರಬಹುದು. ಹಾಗಾದರೆ ನನ್ನ ಮೊದಲಿನ ಅಭಿಪ್ರಾಯವು ತಪ್ಪಿರಬಹುದೇ?....

ಈ ಮೇರೆಗೆ ನಾನು ವಿಚಾರಸಾಗರದಲ್ಲಿ ಮುಳುಗಿದೆ. ನನ್ನನ್ನದು

ಪೂರ್ತಿಯಾಗಿ ಪರವಶವಾಡಿತು. ಪರಿಸರದ ಮರವುಂಟಾಯಿತೆನಗೆ. ಈ ಸ್ಥಿತಿಯಲ್ಲಿ ಕೆಲಕಾಲ ಕಳೆದಿರಬಹುದು. ಇನಿತರಲ್ಲಿ ಎಡಪಕ್ಕದ ಕೊಳದೊಳಗಿಂದ 'ಸೂಂಯ್' ಎಂಬ ಧ್ವನಿಯೊಂದು ಕೇಳಿಸಿತು. ನಾನತ್ತ ಹೊರಳಿದೆ. ಕೂಡಲೆ ಕೋಲ್ಮಿಂಚೊಂದು ನನ್ನ ಕಂಗಳನ್ನು ಕುಕ್ಕಿ ಮಾಯವಾಯಿತು. ಮರಳಿ ಕಣ್ದೆರೆದು ನೋಡುವಷ್ಟರಲ್ಲಿ ಓರ್ವ ಯುವತಿಯು ನನ್ನೆಡೆಗೆ ಬರುವುದು ಕಂಡುಬಂತು. ತರುಣಿಯು ಅತೀವ ಚೆಲುವೆ. ಅದೇನು ಇಲ್ಲಿಯ ಸೌಂದರ್ಯವಲ್ಲ; ದಿವ್ಯ ಸೌಂದರ್ಯ. ಆದರೆ ಅದೇಕೋ? ಅಂದು ಆ ಅಂದವಾದ ಹೂವು ಅತಿಯಾಗಿ ಬಾಡಿದ್ದಿತು. ಕಾಯವು ಕೃಶವಾಗಿತ್ತು; ಕಂಗಳಿಂದ ಹೊರಸೂಸುವ ಕಂಬನಿಗಳು ಮ್ಲಾನವಾದ ಮುಖದ ದೈನ್ಯವನ್ನು ಹೆಚ್ಚಿಸಿದ್ದವು. ಬೆಲೆಯುಳ್ಳ ಬಟ್ಟೆಗಳೆಲ್ಲ ಅಲ್ಲಲ್ಲಿ ಹರಿದುದರಿಂದ ಆಕೆಯ ಅಂಗಾಂಗಗಳ ಬಹುಭಾಗವು ಬತ್ತಲೆಯಾಗಿದ್ದಿತು. ಕೊರಳಲ್ಲಿ ಮುಳ್ಳಿನ ಹಾರ; ಮುಡಿಯಲ್ಲಿ ಮುಳ್ಳಿನ ಮಾಲೆ; ಕೈಯಲ್ಲಿ ಮುಳ್ಳಿನ ಬಳೆಗಳು. ಆಕೆಯ ಮೈಮೇಲಿನ ಈ ವಿಚಿತ್ರ ತೊಡವುಗಳು ಆಕೆಯ ಸೌಂದರ್ಯಕ್ಕೆ ಭೀಷಣತೆಯನ್ನು ತಂದಿದ್ದವು. ಈ ವಿಚಿತ್ರ-ವೇಷದ ಸುಂದರಿಯನ್ನು ಕಂಡು ನಾನು ಬಹಳ ಬೆರಗಾದೆ. ವಿಧವಿಧದ ವಿಚಾರಗಳು ಹೆದರಿದ ಮನಸ್ಸನ್ನು ಹೆಚ್ಚಾಗಿಯೆ ನಡುಗಿಸಿದವು.

'ಯಾರಿರಬಹುದೀಕೆ? ಈ ಬನದ ದೇವಿಯೊ? ದೆವ್ವೊ? ಎಂಥ ಸೋಜಿಗದ ವೇಷವಿದು?' ಎಂದಾಲೋಚಿಸುವಷ್ಟರಲ್ಲಿಯೇ ಆ ತರುಣಿಯು ನನ್ನನ್ನು ತೀರ ಸಮೀಪಿಸಿದಳು. ನನ್ನ ಶರೀರವೆಲ್ಲ ಬೆವರೊಡೆಯಿತು; ತುಟಿಗಳು ನಡುಗಲಾರಂಭಿಸಿದವು; ಒಣಗಿದ ಗಂಟಲೊಳಗಿಂದ ಮಾತೊಂದೂ ಹೊರಬೀಳದಾಯಿತು.

ನನ್ನ ಈ ಅನುಕಂಪನೀಯ ಅವಸ್ಥೆಯನ್ನು ಕಂಡು ಯುವತಿಯು ನುಡಿದಳು.

'ಹೆದರದಿರು. ಮಗು! ನಾನೇನು ನಿನ್ನನ್ನು ನುಂಗಲು ಬಂದ ಬೆಂತರವಲ್ಲ. ಆಶ್ರಯಿಸಲು ಬಂದ ಯುವತಿ.'

ಕೆಲಕಾಲ ನೀರವ. ಆಕೆಯ ಮಾತಿನಿಂದ ಅಂಜಿಕೆಯು ಕೊಂಚ

ಕಡಿಮೆಯಾಯಿತು. ಆಕೆ ಯಾರೆಂಬುದನ್ನರಿಯುವ ಕುತೂಹಲವು ಕೊನರಿತು, ಕೇಳಿದೆ.

'ನೀನಾರಮ್ಮ? ಎಲ್ಲಿಯುವಳು?'

'ನಾನೋರ್ವ ಅಪ್ಸರೆ! ಮಗು.'

'ನಿನ್ನಮರಲೋಕವನ್ನು ತೊರೆದು ಇಲ್ಲಿಗೆ ಬಂದುದೇತಕ್ಕಮ್ಮಾ?'

'ದೇವಲೋಕದಲ್ಲೊಮ್ಮೆ ಅಮರೇಂದ್ರನೊಡನೆ ಸರಸವಾಡುತ್ತಿರಲು ಎಚ್ಚರ ತಪ್ಪಿ ಅವನನ್ನು ಅವಮಾನಗೊಳಿಸಿದೆ. ಕ್ರುದ್ಧನಾದ ಒಡೆಯನು ಶಪಿಸಿದ್ದರಿಂದೆನಗೆ ಇಲ್ಲಿಗೆ ಬರಬೇಕಾಯಿತು.'

'ಅದೆಂದಿನ ಮಾತು? ಎನಿತು ಕಾಲಕಳೆಯಿತಮ್ಮ ನೀನಿಲ್ಲಿಗಿಳಿದು?'

'ಅನಂತಕಾಲ ಕಳೆಯಿತು. ಅಂದಿನಿಂದ ನಾನು ಮಾನವರನ್ನು ಸಂತೈಸುತ್ತಿರುವೆ.'

'ಅದೆಂತಮ್ಮಾ! ನಮಗಾಗಿ ಹೆಣಗುವ ನಿನ್ನ ಪರಿಚಯವೇ ಇಲ್ಲವಲ್ಲಾ ನನಗೆ?'

'ನಾನಿಲ್ಲಿ ಬಂದಂದಿನಿಂದ ಒಹುಕಾಲ ಪಂಡಿತರ ಮನೆಯಲ್ಲಿಯೆ ನೆಲೆಸಿದ್ದೆ. ಅವರು ನನ್ನನ್ನಾದರದಿಂದ ಬರಮಾಡಿಕೊಂಡು, ಬೆಲೆಯುಳ್ಳ ಉಡುಪು-ತೊಡವುಗಳನ್ನಿತ್ತು ಒಲವಿನಿಂದ ಸಲುಹಿದರು. ನಾನು ಆಗಾಗ ಅವರ ಮಾತಿನಲ್ಲಿ ಮಿಂಚಿ ಅವರನ್ನು ಸಂತೈಸುತಿದ್ದೆ. ಗಹನವಿಚಾರದಿಂದವರು ಬೇಸತ್ತಾಗ ನಾನವರಲ್ಲಿಗೆ ಸಾರಿ ಅವರನ್ನು ಮರಳಿ ಚೇತರಿಸುತ್ತಿದ್ದೆ. ಆದುದರಿಂದ 'ಸುಭಾಷಿತೆ'ಯೆಂದು ಅವರೆನ್ನನ್ನು ಕರೆಯುತಿದ್ದರು.'

'ಮುಂದೆ ನೀನು ತೆರಳಿದುದೆಲ್ಲಿ?'

'ಪಂಡಿತರನ್ನು ಈ ಮೇರೆಗೆ ರಂಜಿಸುತ್ತಲಿರುವುದನ್ನು ಕಂಡು, ಪಾಮರನೊಬ್ಬನು ನನ್ನನ್ನು ಪಡೆಯಲೆಳಸಿದ. ಅವನ ಒಲವಿನ ಔತಣವನ್ನಲ್ಲಗಳೆಯಲರಿಯದೆ ನಾನವನಿಗೆ ವಶಳಾದೆ. ಅದೇ ಪ್ರಾರಂಭ ನನ್ನ ಅಳಿಗಾಲಕ್ಕೆ.'

'ಅದು ಹೇಗಾಯಿತಮ್ಮ? ಅವನು ನಿನ್ನನ್ನು ಚೆನ್ನಾಗಿ ನಡೆಯಿಸಿ ಕೊಳ್ಳಲಿಲ್ಲವೇ?'

'ಏನು ಹೇಳಲಿ? ಮಗು! ಅವನೇನೋ ಒಳ್ಳೆಯವನಿದ್ದ. ಆದರೆ ಬರಬರುತ್ತ ಪಾಮರರೆಲ್ಲರೂ ನನ್ನನ್ನು ಹಿಂಬಾಲಿಸಿದರು. ಚಿಕ್ಕಮಕ್ಕಳು ಪಾತರಗಿತ್ತಿಯನ್ನು ಪೀಡಿಸುವಂತೆ, ಅವರೆನ್ನನ್ನು ಪರಿಪರಿಯಾಗಿ ಕಾಡಿದರು; ಇನ್ನೂ ಕಾಡುತ್ತಿರುವರು. ನೀನೀಗ ಕಾಣುವ ವೇಷವೂ ಭೂಷೆಯೂ ಅದರ ಪರಿಣಾಮವೇ!'

'ಇನ್ನೂ ಕಾಡುವರು? ಯಾರವರು? ಅದೆಂತು?'

'ಎಲ್ಲರು, ಮಗು! ನೀವೆಲ್ಲರು. ನೀವೇ ದಯಪಾಲಿಸಿದ ಆಭರಣಗಳಿವು!'

'ಏನು? ನಾವೇ? ನಾನೇ? ಈವರೆಗೆ ನಿನ್ನನ್ನೆಂದಿಗೂ ಕಾಣದ ನಾನು ನಿನ್ನನು ಪೀಡಿಸುವುದೆಂತಮ್ಮ?'

'ಕಂಡಿರುವೆ, ಮಗು. ಆದರೆ ಈ ಸ್ಥೂಲ ರೂಪದಲ್ಲಲ್ಲ. ಸೂಕ್ಷ್ಮ ರೂಪವನ್ನು ತಾಳಿದ ನಾನು ಇದೇ ಸಾಯಂಕಾಲ ನಿನ್ನ ಆಘಾತಗಳಿಗೆ ಗುರಿಯಾಗಿದ್ದೆ.'

'ನಿನ್ನ ಮಾತಿನ ಅರ್ಥವೇ ಆಗದಲ್ಲಾ? ನಿನ್ನ ಸೂಕ್ಷ್ಮ ರೂಪವು ಅದಾವುದು?'

'ಕೇಳು. ನಾನು ನಿನಗೆ ಚಿರಪರಿಚಿತಳಾದ 'ಹರಟವ್ಮ್ಮ.' ನೀವೇ ನನ್ನನ್ನೀ ಕೀಳು ಸ್ಥಿತಿಯಲ್ಲಿರಿಸಿರುವಿರಿ. ನನ್ನ ಬೆಲೆಯುಳ್ಳ ಬಟ್ಟೆಗಳನ್ನು ಹರಿದು ನನ್ನನ್ನು ಅರೆಬತ್ತಲೆಯನ್ನಾಗಿ ಮಾಡಿರುವಿರಿ. ನನ್ನ ನಗ್ನ ರೂಪವನ್ನು ಕಾಣುವುದರಲ್ಲಿಯೆ ನಿಮ್ಮೆಲ್ಲನೇಕರಿಗೆ ಅತ್ಯಾನಂದ. ಸಹಿಸಲಾರೆನಯ್ಯ ಈ ವಿಡಂಬನವನ್ನಿನ್ನು ಮುಂದೆ! ಅಂದು ಮಾತಿನ ಮಲ್ಲಿಗೆಯನ್ನೇರಿ ಸಾಗುವ ನನಗೆ ಇಂದು ಅಲಗುಗಳನ್ನಾಶ್ರಯಿಸಬೇಕಾಗಿದೆ. ಅಂದಿನ ಬಿಚ್ಚು ಮಾತುಗಳು ಇಂದು ಚುಚ್ಚು ಮಾತುಗಳಾಗಿವೆ. ಆದುದರಿಂದ ನಾಲ್ಕು ಜನರ ಕೂಟವೆಂದರೆ ಅದೊಂದು ಕಾಲಕೂಟ ನನಗೆ.'

'ಮೇಲಾಗಿ ನನ್ನನ್ನು ಮಾತಿನ ಮೊನೆಯೊಡನೆ ಎಸೆಯುವದನ್ನು ಳಿದು ನಿಮಗೆ ಬೇರೆ ಕೆಲಸವೇ ಇಲ್ಲದಾಗಿದೆ. ನಿಮಗೆ ಗಂಭೀರ ವಿಚಾರ ವಿಲ್ಲ–ಪವಿತ್ರ ವಿಷಯವಿಲ್ಲ. ಎಲ್ಲೆಲ್ಲಿಯೂ ಯಾವಾಗಲೂ ನಿಮ್ಮ ಸರಸವು ನನ್ನೊಡನೆ. ಅದೂ ನನಗೀ ವಿಚಿತ್ರ ವೇಷವನ್ನು ದಯಪಾಲಿಸಿ ಅಲ್ಲದ ಸಮಯಕ್ಕೆ ಸಲ್ಲದ ಮಾತನ್ನೆತ್ತಿ ನನ್ನನ್ನು ಕಾಡುವುದು ವಾಡಿಕೆ. ವಿಶ್ರಾಂತಿಯೆಂಬುದು ನನಗೆ ಗೊತ್ತೇ ಇಲ್ಲ. ಇದೀಗ ಅಂತರ್ಮುಖ ನಾದ ನಿನ್ನ ವಿಚಾರಗಳನ್ನು ಕೇಳಿ....

'ಏನು? ನನ್ನ ವಿಚಾರಗಳು ನಿನಗೆ ಕೇಳಿಸಿದುದು ಹೇಗಮ್ಮ?'

'ಬೆರಗಾಗುವ ಕಾರಣವಿಲ್ಲ ಮಗು! ನನಗೆ ಎಲ್ಲವನ್ನರಿಯುವ ಬಲವುಂಟು. ನಿನ್ನ ಪವಿತ್ರ ವಿಚಾರಗಳನ್ನರಿತು ನಿನ್ನನ್ನಾಶ್ರಯಿಸಲು ಬಂದಿರುವೆ. ಕೊಡುವೆಯಾ ನನಗೆಡೆಯನ್ನು ನಿನ್ನೆದೆಯಲ್ಲಿ? ನಿನ್ನಲ್ಲಿ ಕೆಚ್ಚಿದೆ. ಬಗೆದರೆ ನೀನೆಲ್ಲವನ್ನು ಪಡೆಯಬಲ್ಲಿ. ನೆರವೇರಿಸುವೆಯಾ ನನ್ನ ಬಯಕೆಯೊಂದನ್ನು?'

'ನಿನ್ನ ಬಯಕೆಯದಾವುದು ದೇವಿ? ಹೇಳು! ಸಾಧ್ಯವಿದ್ದರೆ ನೆರ ವೇರಿಸುವೆ.'

'ಸಾಧಿಪಗೆ ಅಸಾಧ್ಯವಾದುದಾವುದು? ನನ್ನ ಹಾಳು ಬಾಳು ಮರಳಿ, ಅಂದಿನ ಅಂದವನ್ನು ಹೊಂದಬೇಕು. ಸಹಜವಾದ ಲೀಲೆಯಿಂದ ನಲಿಯಲು ನನಗೆ ಬಿಡುವು ಬೇಕು. ನನಗೆ ಮೈತುಂಬ ಬಟ್ಟೆಗಳೂ ಆಭರಣ ಗಳೂ ಬೇಕು. ದಣಿದಿರುವೆ. ಮಗು! ನಾನು ಅತೀವ ದಣಿದಿರುವೆ. ನನಗೆ ವಿಶ್ರಾಂತಿಯ ಅವಶ್ಯಕತೆಯು ಬಹಳವಿದೆ. ಈ ಹಾಳು ಬಾಳಿನ ಬೇಸರುಂಟಾಗಿದೆ ಎನಗೆ. ಈ ಪಾಮರರ ಕೈಯಲ್ಲಿ ಸಿಲುಕಿದಂದಿನಿಂದ ನನ್ನ ಬಳಲಿಕೆಗೆ ಮಿತಿಯಿಲ್ಲ. ಬಿಡಿಸಯ್ಯ ಅವರ ಹಿಡಿತದಿಂದೆನ್ನನ್ನು?'

'ಅದೆಂತು ಮಾಡುವುದಮ್ಮ ನಿನ್ನ ಬಿಡುಗಡೆಯನ್ನು?'

'ತರುಣರನ್ನು ಮೊದಲು ಕೆಲಸಕ್ಕೆ ಹಚ್ಚು. ಕೆಲಸವಿಲ್ಲದ ಆಲಸಿ ಗರು ನನ್ನನ್ನು ಅತಿಯಾಗಿ ಪೀಡಿಸುವರು. ಹುಲಿಯಂತೆ ಗುಡುಗಿ ನನ್ನ ಕರುಣ ಕಥೆಯು ಎಲ್ಲರ ಕಿವಿಗಳನ್ನು ಸೇರಿ ಎದೆಯನ್ನು ಸೀಳುವಂತೆ

ಯತ್ನಿಸು. ನಾನು ಓರ್ವ ಅಂಗನೆ. ನನಗೂ ದಣಿವಾಗುವದೆಲ್ಲರಂತೆ. ಸಿರಿ-ಸಿಂಗಾರವು ನನಗೂ ಬೇಕು. ಯಾವಾಗಲೂ ನನ್ನನ್ನು ಕಾಡುವುದು ಸರಿಯಲ್ಲ. ತಕ್ಕ ಸಮಯವನ್ನರಿತು ನನ್ನನ್ನು ಕರೆದರೆ ನನಗೂ ಸಂತಸ; ನಿಮಗೂ ಸುಖ. ಅಲ್ಲವೇ? ಏನು? ಮಾಡುವಿಯಲ್ಲವೇ ನನ್ನ ಈ ಕಾರ್ಯವನ್ನು ?'

ನನ್ನ ಬಗೆಗಣ್ಣು ತೆರೆಯಿತು. ಹಾಳು ಹರಟೆಯಲ್ಲಿ ಕಾಲಕಳೆಯುವ ನಮ್ಮ ಜನಜೀವನದ ಚಿತ್ರವು ನಿಚ್ಚಳವಾಗಿ ಹೊಳೆಯಿತು ನನ್ನ ಒಳಗಣ್ಣಿಗೆ. ನನ್ನ ಆವರೆಗಿನ ಚರಿತ್ರೆಯ ಚಿತ್ರಪಟವು ಸರಸರನೆ ಜಾರಿ ಹೋಯಿತು, ಕೂಡಲೆ.

'ಮಾಡುವೆನಮ್ಮ ನಿನ್ನಿಷ್ಟವನ್ನು ಯಥಾಶಕ್ತಿ' ಎಂದು ಬಾಗಿದ ತಲೆಯನ್ನು ಮೇಲಕ್ಕೆತ್ತುವಷ್ಟರಲ್ಲಿ ಆ ತರುಣಿಯು ಮಾಯವಾಗಿದ್ದಳು.



## ನಾದುರುಸ್ತ

ರಂ. ಶ್ರೀ. ಮುಗಳಿ

ಈ ಜಗತ್ತಿನಲ್ಲಿ ನನ್ನದೆಲ್ಲಾ ಸರಿಯಾಗಿರಬೇಕೆಂಬ ಅಪೇಕ್ಷೆಗೂ ಪ್ರತ್ಯಕ್ಷವಾಗಿ ಸರಿಯಾಗಿರುವದಕ್ಕೂ ಅದೆಷ್ಟು ಅಜಗಜಾಂತರವಿದೆ! ಕಾರಣವಿಲ್ಲದೆ ಯಾವದೋ ಒಂದು ವಸ್ತು ಕೆಡುತ್ತದೆ. ಅದನ್ನು ಶ್ರಮಬಟ್ಟು ಸರಿಮಾಡುವದರಲ್ಲಿ ಇನ್ನೊಂದು ಕೆಡುತ್ತದೆ. ಅದನ್ನು ಸರಿಪಡಿಸುವಷ್ಟರಲ್ಲಿ ಹೊಸ ಹೊಸವು ಕೆಡುತ್ತವೆ, ಮೊದಲಿನವು ಮತ್ತೆ ಕೆಡುತ್ತವೆ. ಇದನ್ನೆಲ್ಲ ನೋಡಿ ಕೈಚೆಲ್ಲಿ 'ಜಗತ್ತೇ ಕೆಟ್ಟದು' ಎಂದುಬಿಡುತ್ತೇನೆ. ಇನ್ನು ಸರಿಪಡಿಸುವದು ಸಾಧ್ಯವಿಲ್ಲ ಎಂದು ಇದ್ದದ್ದೇ ಸರಿ ಎನ್ನುತ್ತೇನೆ, ಸಂಸಾರದ ಸುಂಟರುಗಾಳಿಯಲ್ಲಿ ಸಿಕ್ಕ ಧೂಳಿಕಣವಾಗಿ ಹಾರಾಡುತ್ತ ಹೊರಡುತ್ತೇನೆ.

ಒಮ್ಮೆ ಹೀಗಾಯಿತು: ನನ್ನ ಕೈಗಡಿಯಾಳವು ನಾದುರುಸ್ತ ಆಯಿತು; ಅಂದರೆ ನಿಂತುಬಿಟ್ಟಿತು. ನಿಲ್ಲದೆ ಮತ್ತೆ ಯಾವ ಬಗೆಯಲ್ಲಿ ಅದು ಕೆಟ್ಟಿದ್ದರೂ ನನಗೆ ಅಷ್ಟು ಚಿಂತೆಯಿರಲಿಲ್ಲ. ಬೇಕಾದಷ್ಟು ಅಲುಗಾಡಿಸಿ ರಮಿಸಿ ನೋಡಿದೆ, ಅದು ನಡೆಯಲೇ ಒಲ್ಲದು. ಅದು ನಡೆಯದಿದ್ದರೆ ನನ್ನ ನಿತ್ಯದ ಕಾರ್ಯಕ್ರಮವು ನಡೆಯುವಂತಿಲ್ಲ. ಒಳ್ಳೇದು ಎಂದು ಗಡಿಯಾಳ ದೊಡದೆ ಅಂಗಡಿಗೆ ನಡೆದೆ. ಬೇಗನೆ ಹೋಗಿ ಬರಬೇಕೆಂದು ನನ್ನ ಪ್ರೀತಿಯ ಸಾಯಕಲ್ಲು ಹತ್ತಿ ಸಾಗಿದೆ. ಒಂದು ಬೀದಿಯ ತಿರುವಿಗೆ ಬರಲು ನಿಯಮದಂತೆ ಸಾಯಕಲ್ಲಗಂಟೆಗೆ ಕೈಯೊತ್ತಿದೆ. ಅದು ನುಡಿಯಲೇ ಇಲ್ಲ. ಸೆಟೆದುಕೊಂಡ ಅಳಿಯನಂತೆ ಮೌನವಾಗಿಬಿಟ್ಟಿದೆ. ನಾನೂ ಬಿಕ್ಕೊಂಡ ಬೀಗನಂತೆ ಆಗಬೇಕೆಂದರೆ ಆ ಎದೆಯಿಲ್ಲ. ಸಾಯಕಲ್ಲು ನಡೆಸುವ ವಿದ್ಯೆಯಲ್ಲಿ ನನ್ನ ಜಾಣ್ಮೆಯು ಅಷ್ಟಕ್ಕಷ್ಟೆ. ಬಹಳಷ್ಟು ಜನವಿಲ್ಲದ ಬೀದಿಯಲ್ಲಿ

ಕೈಯಲ್ಲಿ ಜೀವಹಿಡಿದುಕೊಂಡು ಕಾಲಗಾಡಿಯನ್ನು ನಡಸುವ ಬೀರನು ನಾನು. ಗಂಟೆಯ ಸಪ್ಪಳವಿಲ್ಲದೆ ನಾನು ಈಗ ಮುಂದರಿಯುವದು ಹೇಗೆ? ಹಳ್ಳಿಯ ಗಾಡಿಯವನಂತೆ 'ಹೋಳಾಗರಪೊ!' ಎಂದು ಕೂಗುತ್ತ ಹೋಗಬೇಕೇ? ಪಟ್ಟಣದ ಟಾಂಗೆಯವನಂತೆ 'ಹೋಹೋ' ಮಾಡ ಬೇಕೇ? ಯಾವದೂ ಬಗೆಹರಿಯಲಿಲ್ಲ. ಮೆಲ್ಲಗೆ ಜೋಕೆಯಿಂದ ಬೀದಿಯ ತುದಿಗೆ ಹೋದರಾಯಿತು ಎಂದು ಹೊರಟೆ. ಕೊನೆಗೆ ಗಡಿಯಾಳದ ಅಂಗಡಿಯನ್ನು ಸುರಕ್ಷಿತವಾಗಿ ಮುಟ್ಟಿದೆ. ಒಂದು ಅರ್ಧತಾಸಿನಲ್ಲಿ ಅಲ್ಲಿಯ ಕೆಲಸವಾಯಿತು. ಗಡಿಯಾಳವು ಸುಸೂತ್ರವಾಗಿ ತಿರುಗಹತ್ತಿತು. ಈಗೆಲ್ಲಾ ಸರಿಯಾಯಿತು ಎಂದುಕೊಂಡು ಮನೆಗೆ ತಿರುಗಿದೆ; ಉಲ್ಲಾಸ ದಿಂದ ಸಿಳ್ಳು ಹಾಕುತ್ತ ಕೆಳಗೆ ಮೇಲೆ ನೋಡುತ್ತ ಕಾಲಚಕ್ರವನ್ನೇರಿದ ವಿಶ್ವಪುರುಷನಂತೆ ಸಾಯುಕಲ್ಲ ಮೇಲೆ ಹೊರಟೆ. ಅರ್ಧದಾರಿ ಹೋದ ಮೇಲೆ ಇದಿರಿಗೆ ರಭಸದಿಂದ ಮೋಟರಕಾರೊಂದು ಬಂದಿತು. ನಾನು ಸಾಯುಕಲ್ಲ ಮೇಲೆ ಇರುವಾಗ ಈ ಕಾರಿನ ಮೇಲೆ ಬಹಳ ಸಿಟ್ಟು; ಅವನ್ನು ನೋಡಿ ರಕ್ತವನ್ನೆ ಕಾರುತ್ತೇನೆ. ಅದೇ ನಾನೇ ಕಾರಿನಲ್ಲಿದ್ದಾಗ ಬೇರೆ ಮಾತು, ಸೊಕ್ಕೇರಿದ ಅರಸನಂತೆ ಮೆರೆಯಬೇಕೆನ್ನುತ್ತೇನೆ. ನಾನು ಸಾಯುಕಲ್ಲನ್ನು ಏರಿದಾಗ ಮಾತ್ರ ಅದರ ಸಹಸವಿಲ್ಲ. ನನ್ನ ದುರ್ದೈವ ದಿಂದ ಅಲ್ಲಿ ಬೀದಿಯು ತುಸು ಇಳಕಲಾಗಿತ್ತು. ಕಾರಿಗೆ ಹಾದಿ ಬಿಟ್ಟು ನಾನು ನನ್ನ ಎಡಕ್ಕೆ ಹೊಡೆಯಬೇಕೆಂದರೆ ನನ್ನ ಮುಂದೆ ಚಕ್ಕಡಿಗಳ ಮೆರವಣಿಗೆಯು ಹೊರಟಿತ್ತು. ಆಯಿತು, ಗಾಬರಿಯಿಂದ ಮೈಬೆವರಿತು, ಬ್ರೆಕ್ಕು ಹಾಕಿ ನಿಲ್ಲಿಸುವ ಬುದ್ಧಿ ಮಾಯವಾಯಿತು. ಬಾಯಿಂದ ಅಸ್ಪಷ್ಟ ವಾಗಿ 'ಏ ಏ!' ಎಂದು ಅಡಿದೆ. ಕಡೆಗೆ ಮೋಟರಿಗೆ ಹಾದಿ ಕೊಟ್ಟು ನಾನು ಮಾತ್ರ ನನ್ನ ಸಾಯುಕಲ್ಲಿನ ಕೂಡ ಹೋಗಿ ಚಕ್ಕಡಿಯೊಂದರ ಹಿಂಬದಿಗೆ ಹಾಯ್ದು ಬಿದ್ದುಬಿಟ್ಟೆ. ಒಂದೆರಡು ಮಿನಿಟು ನನಗೆ ಎಚ್ಚರ ತಪ್ಪಿರಬೇಕು. ಎದ್ದಮೇಲೆ ನೋಡಲಾಗಿ ಸುತ್ತು ಜನ ನೆರೆದಿರುವರು. ನನ್ನ ನೋವಿಗಿಂತ ಆ ನೆರವಿಯು ನನಗೆ ಅಸಹ್ಯವಾಯಿತು. ಹಾಗೆ ಮಾಡಿರಿ, ಹೀಗೆ ಮಾಡಿರಿ ಎಂಬ ಉಪದೇಶಕ್ಕೆ ಆರಂಭವಾಯಿತು. ಅದೇನೂ ಬೇಡವೆಂದು ಒಂದು

ಟಾಂಗೆಯನ್ನು ತರಿಸಿ ಸಾಯಿಕಲ್ಲನ್ನು ಹೇರಿಕೊಂಡು ನೆಟ್ಟಗೆ ಮನೆಗೆ ಹೋದೆ. ಹೋಗಿ ನೋಡುತ್ತೇನೆ, ಸಾಯಿಕಲ್ಲ ಗಂಟೆಯು ಜಬ್ಬಿ ಹೋಗಿದೆ, ಪ್ಯಾಡಲ್ಲು ಸೊಟ್ಟಾಗಿವೆ, ಬ್ರೆಕ್ಕು ಬಿಗಿಹಿಡಿದಿವೆ. ನನ್ನ ಮೈಕಡೆ ನೋಡುತ್ತೇನೆ, ಧೋತರ ಟರ್‍ರೆಂದು ಹರಿದಿದೆ, ಕೋಟು–ಶರ್ಟು ಹೊಲಸುಗೂಡಿವೆ. ಕೊನೆಯಲ್ಲಿ ಎಷ್ಟು ಹೊತ್ತಾಯಿತು ಎಂದು ಗಡಿಯಾಳ ನೋಡುತ್ತೇನೆ, ಅದು ಬಂದಾಗಿದೆ, ಮತ್ತೆ ನಿಂತು ಬಿಟ್ಟಿದೆ! ಎಲ್ಲಾ ನಾದುರುಸ್ತ, ನಾದುರುಸ್ತ! ಎನ್ನುತ್ತ ನನ್ನ ಕೋಣೆ ಸೇರಿದೆನು.

ಮೇಲಿನ ಅನುಭವವು ಬಂದಂದಿನಿಂದ ಕೆಟ್ಟದ್ದನ್ನು ದುರುಸ್ತ ಮಾಡುವ ವಿಷಯದಲ್ಲಿ ನನ್ನ ಬುದ್ಧಿಯೇ ಸುಸ್ತಾಯಿತು. ಏನು ಕೆಟ್ಟರೂ ಅಷ್ಟರಮಟ್ಟಿಗೆ ಅದನ್ನು ಸರಿ ಮಾಡಿ ನಾನು ಸಾಗತೊಡಗಿದೆ. ತುಸು ಕೆಟ್ಟರೆ ಹೇಗಾದರೂ ಕೆಲಸವು ಸಾಗುವಂತೆ ನೋಡಿಕೊಳ್ಳುತ್ತಿದ್ದೆ. ಬಹಳ ಕೆಟ್ಟರೆ ಅಲ್ಲಿಯೆ ಕೈಬಿಡುತ್ತಿದ್ದೆ. ಯಾಕಂದರೆ ಒಂದು ಕೆಟ್ಟರೆ ಇನ್ನೂ ಹತ್ತು ಕೆಟ್ಟೇಕೆಡುವವು ಎಂಬ ಸಿದ್ಧಾಂತವು ನನ್ನಲ್ಲಿ ಮನೆಮಾಡಿತ್ತು. ಈ ಸಿದ್ಧಾಂತವು ಸರಿಯಿರುವದಕ್ಕಾಗಿ ಒಮ್ಮೊಮ್ಮೆ ಸರಿಯಿದ್ದ ವಸ್ತುಗಳೂ ಕೆಟ್ಟವು ಎಂದು ಗೋಳಿಡುತ್ತಿದ್ದೆ. ಪ್ರತಿದಿನವೂ ನನ್ನ ಕೋಣೆಯಲ್ಲಿ ಮೇಗಡೆಯಿಂದ ಸಣ್ಣಾಗಿ ಧೂಳಿಯು ಬೀಳುತ್ತಿತ್ತು. ಬೆಳಿಗ್ಗೆದ್ದು ನೋಡಿದಾಗ ಅದು ನನ್ನ ಟೇಬಲ್ಲಿನ ಮೇಲೆ ಹೊಲಸುಬಟ್ಟೆಯನ್ನು ಹಾಸಿದಂತೆ ಇರುತ್ತಿತ್ತು. ನನ್ನ ಕೋಣೆಯ ಮೇಲೊಂದು ಚಿಕ್ಕ ಅಟ್ಟದ ಮನೆಯಿತ್ತು. ಅದು ಇಲಿಗಳ ಅರಮನೆಯಾಗಿತ್ತು. ಅರಮನೆಯಲ್ಲಿ ಯಾವಾಗಲೂ ಕಾದಾಟ ಇದ್ದೇ ತೀರಬೇಕು. ರಾತ್ರಿಯೆಲ್ಲ ಕಾದಾಟ-ಚೀರಾಟ ನಡೆದದ್ದರ ಪರಿಣಾಮವೆಂದರೆ ನನ್ನ ಟೇಬಲ್ಲಿನ ಮೇಲೆ ಹೊಲಸುಹಾಸಿಗೆ. ಇದಕ್ಕೇನು ಮಾಡಬೇಕು ಎಂಬುದು ನನಗೆ ಗೊತ್ತಿತ್ತು. ಆದರೆ ಅಷ್ಟು ಮಾಡಲು ಮನಸ್ಸಿಲ್ಲ. ಒಂದು ಮಾಡಲು ಹೋದರೆ ಇನ್ನೊಂದು ಮೈಮೇಲೆ ಬಂದರೆ ಗತಿಯೇನು? ಒಂದು ಕಟುವಾದ ಅನುಭವ ಬಂದಿತೆಂದರೆ ಅದು ಮನುಷ್ಯನ ಜೀವನದೃಷ್ಟಿಯನ್ನೆ ರೂಪಿಸುವದೊ ಏನೊ! ನನಗೆ ಹಾಗೆ ಆಯಿತು ಮಾತ್ರ. ಮೇಲಟ್ಟಕ್ಕೆ ಹೋಗಿ ಬಿರಕುಬಿಟ್ಟ

ಸಂದಿಗೊಂದಿಗಳನ್ನು ಗುರುತಿಸಿ ಅದನ್ನು ಮುಚ್ಚಿಸಬಹುದಾಗಿತ್ತು. ಸಿಮೆಂಟಿನಿಂದ ಇಲಿಗಳ ಅರಮನೆಯ ನೆಲಗಟ್ಟನ್ನು ಇನ್ನಿಷ್ಟು ಸೊಗಸಾಗಿ ಮಾಡಬಹುದಾಗಿತ್ತು. ಆದರೆ ನನಗೆ ಅದು ಬೇಕಾಗಲೊಲ್ಲದು. ದಿನವೂ ಧೂಳಿಬೀಳುತ್ತಿದೆ, ದಿನವೂ ಅದನ್ನು ಒರಸುತ್ತಿದ್ದೇನೆ. ಅದೂ ಹೇಗೆ? ನನ್ನ ಕಣ್ಣಿಗೆ ಬಿದ್ದಷ್ಟು ಧೂಳಿಯನ್ನು ಒಂದು ಬದಿಗೆ ಸರಿಸುತ್ತೇನೆ, ಇಲ್ಲವೆ ಕೆಳಗೆ ನೂಕುತ್ತೇನೆ. ಒಮ್ಮೊಮ್ಮೆ ಟೇಬಲ್ಲಿನ ಧೂಳಿಯು ಕುರ್ಚಿಗೆ ಹೋಗುತ್ತದೆ, ಅಂಥ ಕುರ್ಚಿಯ ಮೇಲೇ ನಾನು ಕೂಡುತ್ತೇನೆ. ಎಲ್ಲಾ ಧೂಳಿಯನ್ನು ಸಮೂಲವಾಗಿ ನಾಶಗೊಳಿಸಬೇಕೆಂಬ ಆತುರವೇ ಕೈಬಿಟ್ಟು ಹೋಗಿದೆ. ಸುತ್ತೆಲ್ಲಾ ಪುಸ್ತಕದ ಅಡಕಲುಗಳಿವೆ. ಅವುಗಳ ಮೇಲೆಯೂ ಧೂಳಿ ರಾಸಿಯಾಗಿದೆ, ಜಾಡ ನೂತುಕೊಂಡಿದೆ. ಅದನ್ನು ಹಾಗೇ ನೋಡುತ್ತಿದ್ದೇನೆ. ಯಾವಾಗಲಾದರೂ ಒಂದು ಪುಸ್ತಕವು ಬೇಕಾದರೆ ಅದೊಂದನ್ನು ಎತ್ತಿ ಅಬ್ಬರದಿಂದ ಅದನ್ನು ಹಸನಗೊಳಿಸುತ್ತೇನೆ. ಅದರ ಪುಟದೊಳಕ್ಕೆ ಸಿಕ್ಕು ಸತ್ತುಹೋದ ನೊಣಗಳನ್ನೂ ಪಕ್ಕದ ಹುಳಗಳನ್ನೂ ಕಿತ್ತಿ ತೆಗೆಯುತ್ತೇನೆ. ಉಳಿದೆಲ್ಲ ಪುಸ್ತಕಗಳು ಹೊಲಸು ಮೋರೆ ಮಾಡಿ ಹುಳುಹುಳು ನೋಡುತ್ತವೆ. ಅವನ್ನು ನೋಡಿ ನನಗೆ ಕೋಪ ಬರುತ್ತದೆ; ಕನಿಕರವು ಬರುವದೇ ಇಲ್ಲ. ಎಲ್ಲಾ ಸರಿಯಾಗಿರಬೇಕೆಂದು ಹಂಬಲಿಸಿ ಹೊರಟ ನನ್ನ ರಾಜ್ಯದಲ್ಲಿ ಅದೆಷ್ಟು ಧೂಳಿ ಹೊಕ್ಕು ನನ್ನನ್ನು ಅಣಕಿಸುತ್ತಿರುವದಲ್ಲ ಎಂದು ನಾನು ಹಲ್ಲುಕಟಿಯುತ್ತೇನೆ, ದುಮುದುಮು ಉರಿಯುತ್ತೇನೆ. ನಿಷ್ಕಾರಣವಾಗಿ ಅಶಾಂತಿಯ ಕೈಯಲ್ಲಿ ಸಿಕ್ಕು ವಿಲಿವಿಲಿ ಒದ್ದಾಡುತ್ತೇನೆ.

ದುರುಸ್ತ ಮಾಡುವ ಬಗ್ಗೆ ನನ್ನ ಮೊದಲಿನ ಹುಮ್ಮಸು ಕುಗ್ಗಿಹೋದಷ್ಟು ನನ್ನ ವ್ಯವಹಾರಜ್ಞಾನವು ಹೆಚ್ಚಿದೆ. ಮೊದಲು ಏನಾದರೂ ಕೆಟ್ಟರೆ ಕೂಡಲೆ ಕೈಸಡಿಲು ಬಿಟ್ಟು ವೆಚ್ಚಮಾಡಿ ಅದನ್ನು ಸರಿಪಡಿಸುತ್ತಿದ್ದೆ. ಈಗ ಎಷ್ಟಾದರೂ ನಾಯಿಯ ಬಾಲ ಡೊಂಕೇ ಎಂಬ ವ್ಯವಹಾರವೇದಾಂತವು ನನಗೆ ತಿಳಿದುಹೋಗಿದೆ. ಅದರಿಂದ ನಾನು ಬಹಳಷ್ಟು ಹಣ ಹಾಳುಮಾಡಿ ಯಾವದನ್ನೂ ದುರುಸ್ತ ಮಾಡಿಸಲು ಹೋಗುವದಿಲ್ಲ.

ನನ್ನ ಬಟ್ಟೆ-ಬರೆಗಳು ಹೊಲಸಾದರೆ ಒಂದು ಬಿಲ್ಲಿಯ ಸಾಬಾಣನ್ನು ತಂದು ಮನೆಯ ಆಳುಮಕ್ಕಳಿಂದ ಹಚ್ಚಿಸಿಬಿಡುತ್ತೇನೆ. ಹೀಗಾಗಿ ಎಷ್ಟೋ ವರ್ಷಗಳ ವರೆಗೆ ನನ್ನ ಅರಿವೆ ನನ್ನ ಹತ್ತಿರ ಉಳಿಯುವವು. ಮೇಲಿಂದ ಮೇಲೆ ಹೊಸವನ್ನು ಕೊಳ್ಳಬೇಕಾಗಿಲ್ಲ. ಒಮ್ಮೆ ಮಾತ್ರ ನನ್ನ ಈ ವ್ಯವಹಾರಜ್ಞಾನಕ್ಕೆ ಧಕ್ಕೆ ತಗಲಿತು. ನನ್ನ ತಂಗಿಯು ಮಾತು ಮಾತಿಗೆ ಒಮ್ಮೆ ಹೇಳಿದಳು 'ಅಲ್ಲ, ನೀನು ಇಷ್ಟು ವರುಷ ಸಾಬಾಣಕ್ಕೆ ಖರ್ಚುಮಾಡಿದ ಹಣದಿಂದ ಹೊಸ ಬಟ್ಟೆಯನ್ನೆ ಕೊಳ್ಳಬಹುದಾಗಿತ್ತು.' ಓಹೋ ಎಂದೆ. ಈ ವರೆಗೆ ಇಂಥ ವಿಚಾರವೇ ನನಗೆ ಹೊಳೆದಿರಲಿಲ್ಲ. ಇದನ್ನು ಕೇಳಿ ವ್ಯವಹಾರಜ್ಞಾನವೆಂದರೇನು ಎಂದು ಬಹಳ ಆಳವಾಗಿ ವಿಚಾರ ಮಾಡಿದೆ. ಮಂದಿಯನ್ನು ಮೋಸಮಾಡಿ ತಾವು ಮೋಸ ಹೋಗದ್ದಿರುವದೇ? ಇಲ್ಲವೆ ಪದಾರ್ಥವೆಂಥದೇ ಇರಲಿ ಆದಷ್ಟು ಕಡಿಮೆ ಬೆಲೆಗೆ ಕೊಂಡುಕೊಳ್ಳುವ ಚಾತುರ್ಯವೆ? ತೀರ ಅಗ್ಗವಾಗಿ ಸಂಸಾರ ಮಾಡುವ ಯೋಗ್ಯತೆಯೇ? ಯಾವದು ವ್ಯವಹಾರಜ್ಞಾನ? ಕೆಲವು ವ್ಯವಹಾರಜ್ಞಾನದ ಕಲ್ಪನೆಗಳಲ್ಲಿ ಲೋಕವ್ಯವಹಾರದ ಸಂಪೂರ್ಣ ಜ್ಞಾನವೇ ಕಂಡುಬರುವದಿಲ್ಲವೆ? ಇಂದಿಗೆ ಹಣ ಉಳಿಸಿಕೊಂಡು ನಾಳಿಗೆ ದುಪ್ಪಟ್ಟು ಕಳೆಯುವದು ಎಂಥ ವ್ಯವಹಾರಜ್ಞಾನ? ಮೊದಮೊದಲು ನನ್ನ ವಿಚಾರಕ್ಕೆ ನೆಲೆ ಹತ್ತಲಿಲ್ಲ. ಆರಾಮಖುರ್ಚಿಯಲ್ಲಿ ಬಿದ್ದುಕೊಂಡೆ, ಸ್ವಲ್ಪು ಜೊಂಪು ಹತ್ತಿತು. ಏಳುವದರ ಕೂಡ ಒಂದು ವಿಚಾರವು ವಾಕ್ಯದ ಮೂರ್ತಸ್ವರೂಪವನ್ನು ತಾಳಿ ಹೊರಬಿದ್ದಿತು. ತನ್ನ ಹಾಗೂ ಪರರ ಆತ್ಯಂತಿಕ ಸುಖಕ್ಕಾಗಿ ಹೆಣಗುವ ಬುದ್ಧಿಯೇ ನಿಜವಾದ ವ್ಯವಹಾರಜ್ಞಾನ. ನಿಜವಾದ ವ್ಯವಹಾರಜ್ಞಾನಕ್ಕೂ ನಿಜವಾದ ಧರ್ಮಕ್ಕೂ ಭೇದವೇ ಇಲ್ಲ. ಈ ನಿರ್ಣಯದಿಂದ ಮನಸ್ಸಿಗೆ ಅದೇಕೊ ಶಾಂತಿಜಲವನ್ನು ನೀಡಿದಂತಾಯಿತು. ಉತ್ಸಾಹದಿಂದ ಎದ್ದುಬಿಟ್ಟೆ. ಇನ್ನು ಮೇಲೆ ನಾದುರುಸ್ತ ಆಗುವ ನನ್ನ ವಸ್ತುಗಳನ್ನು ಚೆನ್ನಾಗಿ ದುರುಸ್ತ ಮಾಡಿಸಬೇಕು, ರೊಕ್ಕದ ಮೋರೆ ನೋಡಕೂಡದು ಎಂದುಕೊಂಡೆ. ಹೀಗೆಂದು ಲೆಕ್ಕಹಾಕಲಿಕ್ಕೆ ತೊಡಗಲು 'ನನ್ನನ್ನು ಸರಿಪಡಿಸು, ನನ್ನನ್ನು' ಎನ್ನುತ್ತ

ಹತ್ತಾರು ನನ್ನ ಸೊತ್ತಿನ ಸಾಮಾನುಗಳು ಕಣ್ಣೆದಿರು ನಿಂತವು. ಇವನ್ನೆಲ್ಲ ತಿದ್ದಲಿಕ್ಕೆ ಈಗ ಹಣವನ್ನು ಕೊಡಬಲ್ಲೆ; ಆದರೆ ಇಷ್ಟಕ್ಕೆ ಮುಕ್ತಾಯ ವಾದೀತೇ? ಹಿಂದಿನ ಅನುಭವವು ಉಗ್ರಮುಖದಿಂದ ಅಡ್ಡಕಟ್ಟಿ ಹೇಳಿತು 'ಇಲ್ಲ, ಇಲ್ಲ' ಎಂದು. ಮತ್ತೆ ಮೊದಲಿನ ಸ್ಮೃತಿಗೆ ಬಂದು ಮುಟ್ಟಿದೆ, ತಟಸ್ಥನಾದೆ.

ಒಮ್ಮೆ ನನಗೆ ತೋರಿತು, ನನ್ನ ಹತ್ತಿರದ ಒಡವೆಗಳೆಲ್ಲ ದುರುಸ್ತ ಇರಲಿ ಬಿಡಲಿ, ನನ್ನ ಮೈಯೊಂದು ಸ್ವಸ್ಥವಾಗಿದ್ದರೆ ಸಾಕು. ನನ್ನ ಆರೋಗ್ಯವನ್ನು ನಾನು ನಾದುರುಸ್ತ ಇಡಗೊಡಬಾರದು. ಅದಕ್ಕಾಗಿ ಎಲ್ಲ ಮನುಷ್ಯಸಾಧ್ಯವಾದ ಸಾಹಸವನ್ನು ಮಾಡಿಯೇ ತೀರಬೇಕು. ನನ್ನಿಂದ ಕೆಲಸವೇನಾದರೂ ಆಗಬೇಕೆಂದು ಬ್ರಹ್ಮಸಂಕಲ್ಪವಿದ್ದರೆ ಅದಕ್ಕೆ ಮೊದಲು ಆರೋಗ್ಯದೇವತೆ ನನಗೆ ಒಲಿಯಬೇಕು. ಆದರೆ ಆ ದೇವತೆ ಒಲಿಯಬಾರದೆಂದೇ ಬ್ರಹ್ಮಸಂಕಲ್ಪವಿದ್ದರೆ ಮಾಡುವದೇನು ಎಂಬ ವಿಚಾರವು ಆಗ ನನ್ನ ತಲೆ ತಿನ್ನಲಿಲ್ಲ. ಅಂತೂ ನನ್ನ ಪ್ರಕೃತಿಯನ್ನು ಸುಧಾರಿಸುವದಕ್ಕೆ ನಾನು ತೊಡಗಿದೆ. ಮಿತವಾದ ಆಹಾರ, ಹಿತವಾದ ವ್ಯಾಯಾಮ ಎಂಬ ಸೂತ್ರವನ್ನು ಇಟ್ಟುಕೊಂಡು ಕೆಲವು ದಿನಗಳನ್ನು ಕಳೆದೆ. ಊರಲ್ಲಿ ಇರುವ ವರೆಗೆ ನನ್ನ ಮೈಗೆ ಒಂದು ಮೆರುಗು ಬಂದಿತ್ತು, ಬಂದಿತ್ತೆಂದು ನಾನಂತೂ ತಿಳಿದುಕೊಂಡೆ. ಮುಂದೆ ಬಿಡುವಿನಲ್ಲಿ ಊರಿಂದ ಊರಿಗೆ ಹೊರಟೆ. ಅನಾರೋಗ್ಯದ ಪ್ರತಿನಿಧಿಗಳೇನೊ ಎಂಬಂತೆ ನನ್ನ ಗೆಳೆಯರು ಆಪ್ತರು ಸರಿಯಾದ ನನ್ನ ಆರೋಗ್ಯವನ್ನು ಕೆಡಿಸಹತ್ತಿದರು. ಮತ್ತೆ ಮೊದಲಿನ ದೂರುಗಳು ತಲೆದೋರಿದವು. ಹಸಿವು ಹಿಂಗಿತು, ಮಲವು ಕಟ್ಟಿತು, ಕಳೆ ಮಾಸಿತು, ಬಲ ಕುಗ್ಗಿತು. ಇಂಥ ಸಮಯದಲ್ಲಿ ಒಂದೆರಡು ನೆನಸುವಂಥ ಸಂಗತಿಗಳು ಜರುಗಿದವು. ನನ್ನ ಗುರುತಿನ ಒಂದು ಊರಿಗೆ ಹೋಗಿ ಒಂದು ಓಣಿಯಲ್ಲಿ ಹೊರಟಿದ್ದೆ. ಇದಿರಲ್ಲಿ ಒಬ್ಬ ಗೃಹಸ್ಥರು ಬಂದರು. ನಾನು ಅವರಿಗೆ ನಮಸ್ಕಾರ ಮಾಡಿದೆ. ಅವರು ಹಾಗೇ ಹೋಗಬೇಕೆನ್ನುತ್ತಿದ್ದರೇನೊ, ತಡೆದರು, ನನ್ನನ್ನು ತಲೆ ಯಿಂದ ಕಾಲವರೆಗೆ ನೋಡಿದರು. ಕೊನೆಗೊಮ್ಮೆ ನಕ್ಕು ಹೇಳಿದರು

'ಅಲ್ಲರಿ, ನೀವು ಆ ಊರಿಗೆ ಹೋದಾಗಿನತೊಟ್ಟು ಎಷ್ಟು ಸುಧಾರಿಸೀರಿ? ನಿಮ್ಮ ಪ್ರಕೃತಿ ಬಹಳ ಲಕ್ಷ್ಯಾಗಿದೆ, ಗುರುತು ಸಹ ಹತ್ತುವಂತಿಲ್ಲ' ನನಗೆ ಎದೆಯುಬ್ಬಿಹೋಯಿತು, ಕುಲುಕುಲು ನಕ್ಕೆ. ನನ್ನ ಆರೋಗ್ಯವು ಉತ್ತಮವಾಗಿರುವದೆಂದು ಹೊಗಳುವವರು ಯಾರಾದರೂ ಈ ಭೂಮಿಯ ಮೇಲೆ ಭೆಟ್ಟಿಯಾಗುವರೇ ಎಂದು ಬಹಳ ದಿನದಿಂದ ನಾನು ಕನವರಿಸುತ್ತಿದ್ದೆ. ಅದು ಇಂದು ಪ್ರತ್ಯಕ್ಷ ಫಲವಾಗಿ ಬಿಟ್ಟಿತು. ಊರೂರಿನ ಅಲೆದಾಟದಿಂದ ನನ್ನ ಮೈಯಲ್ಲಿ ನಿಜವಾಗಿ ನೆಮ್ಮದಿ ಇರಲಿಲ್ಲ ಎಂದು ಆಗಳೆ ಹೇಳಿದೆ. ಆದರೆ ಈ ಹೊಗಳಿಕೆಯಿಂದ ಇಲ್ಲದ ನೆಮ್ಮದಿಯು ಈಗ ನನ್ನಲ್ಲಿ ಬಂದಿತು. 'ಹೌದು ಈಗ ಬಹಳ ಸುಧಾರಿಸಿರತೇನೆ' ಎಂದು ಅಭಿಮಾನದಿಂದ ಉತ್ತರಕೊಟ್ಟೆ. ಈ ಗೃಹಸ್ಥರು ಬೇರೆ ಒಂದೆರಡು ಮಾತನಾಡಿ ಮುಂದೆ ಸಾಗಿದರು. ನಾನು ನನ್ನ ಕೆಲಸಕ್ಕಾಗಿ ಹತ್ತು ಹೆಜ್ಜೆ ಮುಂದೆ ಹೋದೆ. ನನ್ನ ಗುರುತಿನ ಬಂಧುಗಳೊಬ್ಬರು ಇದಿರು ಬಂದರು. ನನ್ನನ್ನು ನೋಡಿದ್ದೇ ತಡ, ಅವರ ಮುಖವು ಗಂಭೀರವಾಯಿತು, ಹಣೆ ಮುದುಡಿಕೊಂಡಿತು. ಒಮ್ಮೆಲೆ ಅವರು 'ಏನೋ ಇದು! ಎಷ್ಟು ಅದ್ಭುತ ಸೊರಗಿಬಿಟ್ಟಿರುವೆ ನೀನು! ಆ ಊರ ಹವೆಯು ನಿನಗೆ ತಡೆಯುವದಿಲ್ಲವೆಂದು ಕಾಣತದೆ. ಛೀ, ನಿನ್ನ ಗುರುತ್ತೇ ಹತ್ತುವಂತಿಲ್ಲ!' ಎಂದರು. ನಾನು ದಿಕ್ಕುತಪ್ಪಿ ಹೋದೆ, ಸುಮ್ಮನಾಗಿ ನಿಂತೆ. ಅವರು ಆಡಿದ ಮಾತಿಗೆ ಅಷ್ಟಲ್ಲ, ಇನ್ನೊಬ್ಬರು ಆಗಳೆ ಆಡಿದ ಮಾತಿಗೂ ಇವರು ಈಗ ಆಡಿದ ಮಾತಿಗೂ ಇರುವ ದಿವ್ಯಸಾಮ್ಯಕ್ಕಾಗಿ! ಆಯಿತು, ಸಂದರ್ಭಕ್ಕೆ ಅನುಸರಿಸಿ ನಡೆಯಬೇಕೆಂದು ತತ್ವವೇ ಇದೆ—ನಾನು ಉತ್ತರ ಕೊಟ್ಟೆ 'ಹೌದು, ನನಗೆ ಈಗ ಬಹಳ ದಿನದಿಂದ ಪ್ರಕೃತಿ ನೆಟ್ಟಗಿಲ್ಲ. ಬಹಳ ತ್ರಾಸವಾಗಿದೆ' ಎಂದು. ಅವರು ಅದಕ್ಕೆ ಮರುಗಿ ಸಹಾನುಭೂತಿಯಿಂದ ನನಗೆ ಔಷಧಗಳನ್ನೂ ಅವನ್ನು ತೆಗೆದುಕೊಳ್ಳಬೇಕಾದ ವಿಧಾನವನ್ನೂ ತಿಳಿಸಿ ಹೇಳಿದರು. ಎಲ್ಲದಕ್ಕೂ ಹೂಗುಟ್ಟಿ ಮುಂದೆ ಹೊರಟೆ. ಹತ್ತು ಹೆಜ್ಜೆಯಲ್ಲಿ ಮನುಷ್ಯನ ಮನಸ್ಸು ಒಂದೇ ವಸ್ತುವನ್ನು ಹೇಗೆ ಬೇರೆ ಬೇರೆಯಾಗಿ ನೋಡುವದೆಂಬುದು ತಿಳಿಯಾಗಿ ಕಂಡಿತು. ಅವರಿಬ್ಬರ

ಮಾತಿನಲ್ಲಿ ಇರುವ ಸಮಾನವಾದ ಅಂಶವೆಂದರೆ 'ಗುರುತು ಸಹ ಹತ್ತುವದಿಲ್ಲ' ಎಂಬುದೊಂದೇ. ಆ ಎಳೆಯಿಂದ ಅವರ ಮಾತಿನ ಸುಳಿಯ ಗುರುತು ಹಿಡಿಯಬಹುದು ಎಂದುಕೊಂಡೆ. ಮನುಷ್ಯನಿಗೆ ಅಹಂಕಾರ ಹಾಗೂ ಲೌಕಿಕ ಇವು ಹೆಚ್ಚಿನವು, ಸತ್ಯವಲ್ಲ. ನಿಜವಾಗಿ ನನ್ನ ಗುರುತು ಹತ್ತದೆ ಹೋದದ್ದಕ್ಕೆ ನನ್ನ ಆರೋಗ್ಯದ ಮೇಲೆ ಹಾಯಿಸಿ ತಮ್ಮ ವಿಸ್ಮೃತಿಯನ್ನು ಅವರು ಬೇರೆ ಬೇರೆಯಾಗಿ ತೋರಿಸಿರಬಹುದಲ್ಲವೆ? ಇದು ಏನೇ ಇರಲಿ, ಒಂದು ವಿಷಯವು ನನಗೆ ಮನದಟ್ಟಾಯಿತು. ನಾದುರುಸ್ತ ಇರುವದೆಲ್ಲ ಹೊರಗಲ್ಲ, ಒಳಗೆ. ನಾನೇನು, ಹೆರವರೇನು ಇಬ್ಬರೂ ಅಷ್ಟೆ.

ಹೊರಗಿನ ವಸ್ತುಗಳು ಎಷ್ಟೋ ಸಲ ನಿಜವಾಗಿ ಕೆಡುತ್ತವೆ, ಇಲ್ಲವೆಂದಲ್ಲ. ಆದರೆ ಅವನ್ನು ನೋಡುವ ಒಳಗಿನ ಮನಸ್ಸಿನಿಂದ ಹೆಚ್ಚು ಕೆಡುತ್ತವೆ, ಹೆಚ್ಚು ಘನಘೋರವಾಗಿ ಕಾಣುತ್ತವೆ. ಒಮ್ಮೊಮ್ಮೆ ಅವನೂ ಕೆಡದೆ ಇದ್ದಾಗ ಕೂಡ ಅಂಥ ಮನಸ್ಸಿಗೆ ಎಲ್ಲಾ ಕೆಟ್ಟಂತೆ ಅನಿಸುತ್ತದೆ. ಅಂತೇ ಕೆಡೋದು ಬಿಡೋದು ಮುಖ್ಯವಾಗಿ ಅನಿಸಿಕೆಯ ಮಾತಲ್ಲವೆ? ನಮ್ಮ ಹೆಂಡಗುಡಕ ರತ್ನನ ಪದಗಳಲ್ಲಿ 'ಯೆಂಡದ್ ತೊಂದ್ರೆ' ಎಂಬ ಪದವಿದೆ. ಅದರಲ್ಲಿ ಹೆಂಡಗುಡಕನು ತುಂಬಾ ಕುಡಿದು ರಸ್ತೆಯ ಮೇಲೆ ಬಂದು 'ಎಲೇಲೇಲೇ ರಸ್ತೆ, ಏನು ಅವ್ವೆವಸ್ತೆ' ಎಂದು ಗೊಣಗುವನು.

ರಸ್ತೆಯೆಲ್ಲ ಅವನಿಗೆ ವೈಕೈ ಮುದರಿ ಕುಣಿಯುವಂತೆ ಕಾಣುತ್ತದೆ. ಅದೇ ಹೆಂಡ ಕುಡಿದಿದೆಯೆಂದು ಅವನ ತೀರ್ಪು. ಚಂದ್ರನ ಮುಖವು ಸೊಟ್ಟಾಗಿ ತೋರುತ್ತದೆ, ಅವನೂ ಕುಡಿದಿರಬೇಕು, ಬೀದಿ ದೀಪವೂ ಕುಡಿದು ಗಿರಿಕಿಹೊಡೆಯುತ್ತಿದೆ. ಈ ಪದದಲ್ಲಿ ಬರೀ ಕುಡಕನ ಹುಚ್ಚು ಬಗೆಯಿಲ್ಲ, ನಮ್ಮೆಲ್ಲರ ಮನಸ್ಸಿನ ಪಡಿನೆಳಲಿದೆ. ನಾವು ಕುಡಿದವರಂತೆ ಜಗತ್ತಿನ ಕಡೆ ನೋಡಿ, ಜಗತ್ತೇ ಕುಡಿದು ಗಿರಿಗಿರಿ ತಿರುಗುತ್ತಿದೆ ಎನ್ನುತ್ತೇವೆ. 'ಸೃಷ್ಟಿಯ ಕೀಲುತಪ್ಪಿದೆ, ದೇವರು ಸ್ವರ್ಗದಲ್ಲಿಲ್ಲ' ಎಂದು ಚೀರಾಡುತ್ತೇವೆ. ನನ್ನ ಪ್ರಪಂಚವು ನಾದುರುಸ್ತ ಆಗಿದೆ ಎನ್ನುವಾಗ ನಾನೂ ಹೀಗೇ ಮಾಡುತ್ತೇನೆ. . . .ಕೆಟ್ಟಿರುವದನ್ನು ತಿದ್ದುವದು ಹೆಚ್ಚಿನ

ನೂತಲ್ಲ, ಅದನ್ನು ಸರಿಯಾಗಿ ಕಂಡು ನಡೆಯುವದು ಹೆಚ್ಚಿನದು. ಕೆಟ್ಟದ್ದರಲ್ಲಿಯೂ ಲೇಸಿನ ಬೀಜವನ್ನು ಕಾಣಬೇಕು. ಕೊಳೆತದ್ದರಲ್ಲಿಯೂ ನಾಳಿನ ಮೊಳೆಯನ್ನು ತಿಳಿಯಬೇಕು. ಬಾಳುವೆ ತುಂಬ ಅಗಾಧವಾಗಿದೆ, ನಮ್ಮ ಕೈಮೀರಿದ ದೊಡ್ಡ ಆಟವದು. ಅದನ್ನು ನಾವು ತಿದ್ದಲಾರೆವು, ನಮ್ಮನ್ನು ನಾವು ತಿದ್ದಬಲ್ಲೆವು. ನಮ್ಮ ಹಿಗ್ಗು ನಮ್ಮ ಸೊತ್ತು. . . .

ಈ ಬಗೆಯಾಗಿ ಯೋಚಿಸುತ್ತ ಇರುವಾಗ ನನ್ನ ತೊಡಕುಗಳನ್ನೆಲ್ಲ ಬಿಡಿಸುವ ಸತ್ಯದ ಸೂತ್ರವೊಂದು ಹೀಗೆ ಹೊಳೆಯಿತು: ನಾ ದುರುಸ್ತ ಆಗುವವರೆಗೆ ನನ್ನದೆಲ್ಲವೂ ನಾದುರುಸ್ತ, ನಾದುರುಸ್ತ!



# ಜೋಗದರ್ಶನ

ಎನ್. ಕೆ. ಕುಲಕರ್ಣಿ

ಬೆಳಿಗ್ಗೆ ಮೂರು ಗಂಟೆಗೆ ಹೊರಡುವುದೆಂದು ನಿಶ್ಚಯಿಸಿದ್ದೆವು. ನಮ್ಮ ಗೌರವಕಾರ್ಯದರ್ಶಿಗಳು ಮೋಟಾರು ತೆಗೆದುಕೊಂಡು ನಮ್ಮ ಮನೆಗೆ ಎರಡೂಮುಕ್ಕಾಲು ಗಂಟೆಗೆ ಬರಬೇಕಿತ್ತು. ಆದರೆ ಅವರು ಬಂದರು ಐದೂವರೆ ಗಂಟೆಗೆ. ಕನ್ನಡಿಗನೆಂಬ ಅಭಿಮಾನವಿಲ್ಲವೆ ಅವರಿಗೆ? ಪ್ರಾಚೀನ ಕರ್ನಾಟಕ ಸಂಸ್ಕೃತಿಯ ಪರಂಪರೆಯನ್ನು ಕಾಯಬೇಡವೆ? ಅಂತೂ ನಾವೆಲ್ಲ ಹದಿನೆಂಟು ಜನ ಕೂಡಿ ಹೊರಡಬೇಕಾದರೆ ಸೂರ್ಯೋದಯಕ್ಕೆ ಸಮೀಪಿಸಿತು. ನಾವು—ನಾವೆಂದರೆ ಕಲೋಪಾಸಕರು—ಹೊರಟುದು ಧಾರವಾಡದಿಂದ. ನಮ್ಮ ಮಂಡಲದಲ್ಲಿ ಕೆಲವರು ಕವಿಗಳಿದ್ದರು; ಕೆಲವರು ವಾಗ್ಮಿಗಳು, ಕೆಲವರು ವಿದ್ವನ್ಮಣಿಗಳು, ಕೆಲವರು ಕನ್ನಡ ಪಂಡಿತಾರಾಧ್ಯರು, ಇನ್ನೂ ಕೆಲವರು ಸಂಪಾದಕ ಮಹಾಶಯರೂ ಇದ್ದರು. ಈ ಹದಿನೆಂಟು ಜನ ಕನ್ನಡಿಗರ ಏಕೀಕರಣವಾಗಿತ್ತೆಂದೇ ನಾವಾದರೂ ಈ ರಸಿಕ ಪ್ರವಾಸವನ್ನು ಕೈಕೊಂಡಿದ್ದೆವು. ಗೆರಸೊಪ್ಪೆಯು ಒಬ್ಬೊಬ್ಬರಿಗೆ ಒಂದೊಂದು ಬಗೆಯ ಆಹಾರವಾಗಬಹುದಿತ್ತು. ಪ್ರಸ್ತುತ ಲೇಖಕರೂ ಆ ಆಹಾರದಿಂದಲೇ ಈ ಲೇಖ ಬರೆಯುತ್ತಿರುವರು ಮತ್ತೆ. ಇದು ಕವಿಗಳ ಆಹಾರ. ಅಂತೆಯೆ ಶೈಲಿಯು ಕಾವ್ಯಮಯವಾಗ ಬೇಡವೆ?

ಹಾದಿಯುದ್ದಕ್ಕೂ ನಮ್ಮ ಮೋಟಾರು ಒಮ್ಮೊಮ್ಮೆ ಐತಿಹಾಸಿಕ ಸಂಶೋಧನ ಮಂಡಲವಾಗುವುದು; ಒಮ್ಮೊಮ್ಮೆ 'ಜೋಕುಮಾರ' (ಹರಟೆ ಹೊಡೆಯುವವ)ರ ಜಲಪಾತವಾಗುವುದು; ಒಮ್ಮೊಮ್ಮೆ ಗುಳಿಗೆಗಾರರ ಮಳಿಗೆಯಾಗುವುದು; ಒಮ್ಮೊಮ್ಮೆ ಕರ್ನಾಟಕ ಏಕೀಕರ್ತೃಗಳ

ವಾದಭೂಮಿಯಾಗುವುದು; ಒಮ್ಮೊಮ್ಮೆ ಕವಿಗಳ ಜಂಕ್ಶನ್ ಆಗುವುದು. ಬ್ರೇಕ್ ಬಿದ್ದಕೂಡಲೇ ಮಾತ್ರ ಮತ್ತೆ ಮೋಟಾರೇ ಆಗುವುದು.

ಸುಮಾರು ಏಳೂವರೆಯಾಗಿರಬಹುದು. ಒಂದು ಸಣ್ಣ ಹಳ್ಳಿಗೆ ಬಂದೆವು. ಮೋಟಾರು ನಿಂತಿತು. ಎಲ್ಲರಿಗೂ ಅವರವರ ಯೋಗ್ಯತಾನುಸಾರವಾದ ಚಟಗಳ ಪಿಡುಗು ಪ್ರಾರಂಭವಾಯಿತು. ಚಹದ ಭಕ್ತರಾದ ನಾವು ಬದಿಯಲ್ಲಿಯೆ ಭಕ್ತರಿಗಾಗಿ ಬಾಯಿತೆರೆದು ನಿಂತಿದ್ದ ಉಡುಪಿಯ ಕೃಷ್ಣನ ಮಂದಿರವನ್ನು ಪ್ರವೇಶಿಸಿದೆವು. ಭಕ್ತಿಪ್ರವಾಹದ ಬಿಸಿ ಬಿಸಿ ಧಾರೆಯನ್ನು ಈಂಟಿಕೊಂಡೆವು. ಕೆಲವರು 'ಚಹವಿಳಿಯದ ಗಂಟಲಿನಲ್ಲಿ ಇಡ್ಲಿಯಂ ತುರುಕಿ' ಕೊಂಡರು. ಎಲ್ಲರೂ ಚಹ ಮುಗಿಸಿಕೊಂಡು ಮೋಟಾರಿಗೆ ಬಂದೆವು. ಫ್ರಂಟಸೀಟಿಗೆ ಕುಳಿತಿದ್ದ ಮಹಾನುಭಾವರು ಮಾತ್ರ ತಮ್ಮ ಸ್ಥಳಬಿಟ್ಟು ಕದಲಿರಲಿಲ್ಲ. ಅವರ ಬಟ್ಟೆಯೆಲ್ಲ ಪೆಟ್ರೋಲ್ ಮಯವಾಗಿದ್ದಿತು. ಆದರೂ ತಮ್ಮ ಪಟ್ಟವನ್ನು ಯಾರು ಆಕ್ರಮಿಸುವರೊ ಎಂಬ ಭಯ ಅವರಿಗೆ. ಅದೇನು ಸಂಭ್ರಮವೊ ಆ ಫ್ರಂಟಸೀಟಿನಲ್ಲಿ! ಸರಿ, ಮಾಸಪತ್ರಗಳಲ್ಲಿ ಮೊದಲಿಗೇ ಕವಿತೆ ಬರಬೇಕೆಂಬ ಹುಮ್ಮಸ್ಸಿನ ಜಾತಿಯುವರಿವರು ಎಂದುಕೊಂಡೆ.

ಶಿರ್ಶಿಗೆ ಹೋಗಿ ತಲುಪಬೇಕಾದರೆ ಹನ್ನೊಂದು ಬಡಿಯಿತು. ತುಸು ತಂಗಿದೆವು. ಒಬ್ಬೊಬ್ಬರೆ ಮೋಟಾರಿನಿಂದಿಳಿಯುವಾಗ ಎಲ್ಲರ ಮುಖಗಳು ಪರಾಗದಲ್ಲಿ ಮಿಂದ ಭೃಂಗಗಳಂತೆ ಕಂಡವು. ಈ ಮೆಯ್ಯ ಕೆಂಪನ್ನು ತೊಳೆಯ ಹೋದಲ್ಲಿ ಹೊಳೆಯೇ ಎಲ್ಲಿ ಕೆಂಪಾಗುವುದೋ ಎಂಬ ಭಯವನ್ನುಂಟುಮಾಡುವಂತಿದ್ದಿತು. ಶಿರ್ಶಿಯಲ್ಲಿ ನಮಗೆ ಒಂದೆಡೆ ಆಶ್ರಯ ದೊರೆಯಿತು. ನಮಗಾದ ಆತಿಥ್ಯದಲ್ಲಿ ಚಿರಸ್ಮರಣೀಯವಾದುದೆಂದರೆ ಅಲ್ಲಿನ ಅಭ್ಯಂಜನ. ಕೇವಲ ನಮಗಾಗಿಯೆ ಅವರು ಈ ವ್ಯವಸ್ಥೆಯನ್ನು ಏರ್ಪಡಿಸಿದ್ದರೆಂತಲ್ಲ. ಆದರೆ ಅವರ ನಿತ್ಯದ ದಿನಚರಿಯದು. ನನಗೆ ಮಾತ್ರ ಅದು ಅಸಾಮಾನ್ಯವೆನಿಸಿತು. ಆ ಜಳಕದ ಮನೆ, ಸಣ್ಣ ಪೃಥ್ವಿಗೋಲದಂತೆಯೆ ಇದ್ದ ಆ ನೀರು ಕಾಸುವ ಪಾತ್ರೆ, ದಾವಾನಲದಂತೆ ಉರಿವುರಿವ ಆ ಅಗ್ನಿಕುಂಡ ಎಲ್ಲವೂ ಕವಿಗಳಾದ ನಮ್ಮನ್ನು ಬಹಳ

ಅಗಾಧಪಡಿಸಿದುವು. ಒಂದು ಕಾವ್ಯವನ್ನಾಗಲಿ, ಹರಟೆಯನ್ನಾಗಲಿ ಬರೆಯುವವನೇ ಇದ್ದೆ. ಕೂಡಲೆ ಮಲೆನಾಡಿನ ಕವಿಗಳೊಬ್ಬರು 'ಅಜ್ಜಯ್ಯನ ಅಭ್ಯಂಜನ' ಎಂಬ ಕತೆ ಬರೆದುದು ನೆನಪಾಗಿ ಆವೇಶವೆಲ್ಲ ಅಳಿದು ಹೋಯಿತು. ಅಂತೂ ಗೆರಸೊಪ್ಪೆಗೆ ಹೋಗಿಬರುವ ವರೆಗೂ ನಮ್ಮ ಕಾವ್ಯಸ್ಫೂರ್ತಿಗೆ ಬರಿ ಹಳಸಿದ ಅನ್ನವೆ ದೊರಕಬಹುದೇನೊ ಎಂಬ ಭೀತಿಯೂ ಆಯಿತು. ಅಯ್ಯೋ ಇದಕ್ಕೂ ಮೊದಲೇ ನಾನೇಕೆ ಈ ಜೋಗದ ಜಲಪಾತವನ್ನು ಸಂದರ್ಶಿಸಲಿಲ್ಲ ಎನಿಸಿತು. ಇರಲಿ, ಆದರೂ ಇದ್ದುದರಲ್ಲಿಯೆ ಒಮ್ಮೊಮ್ಮೆ ಇಲ್ಲದ್ದು ಹೊಳೆಯಬಹುದೆಂದು ಧೈರ್ಯ ಹಿಡಿದೆ.

ಮಧ್ಯಾಹ್ನ ಊಟದ ಹೊತ್ತು. ಆಗ ಶಿರ್ಶಿಯನ್ನು ಬಿಟ್ಟೆವು. ಅನತಿ ದೂರದಲ್ಲಿಯ ಬನಸಿರಿಯ ಸೊಬಗಿನ ಸೋನೆಯು ಹೃದಯವೀಣೆಯನ್ನು ಮಿಡಿಯುಹತ್ತಿತು. ಆದರೇನು? 'ಸರಸವೀಣೆ ವಿರಸವಾಯ್ತು.' ಅಯ್ಯೋ, ಹೊಟ್ಟೆ! ಏನಿದೆ ಹೊಟ್ಟೆಯಲ್ಲಿ? 'ಬರಿದೋ ಬರಿದು ತೆರವೋ ತೆರವು! ಸೌಂದರ್ಯಕ್ಕೆ ಮನಸೋತು ನಮ್ಮನ್ನೆ ನಾವು ಮರೆಯಬೇಕೆಂದರೆ ಹಾಳು ಹಸಿವೆಯೊಂದು ಹಿಂಗಿರಲಿಲ್ಲ. ಅದೇ ಚಿಗುರಿದ, ಮಲಮಲ ಎನ್ನುವ ಹಸುರು ಮುರಿದ ತಳಿರನ್ನು ಕಂಡು ಹೃದಯವು ಸ್ಪಂದಿಸುವುದು. 'ಈ ಸುಸಂಧಿಯನ್ನು ಕಳಿದುಕೊಳ್ಳಬೇಡಿರಿ' ಎಂದು ಪ್ರಕೃತಿದೇವಿ ಕೈಮಾಡಿ ಹೇಳುವಂತೆ ತೆಂಗಿನಮರಗಳು ಬಾನುದ್ದ ಬೀಸುವುವು. ಕಣ್ಣು ಸೃಷ್ಟಿದೇವಿಯನ್ನು ನಿರ್ವಾಹವಿಲ್ಲದೆ ನೋಡುತ್ತಿದ್ದರೂ ಮನಸ್ಸು ಜಮಾತಿಯ ಬೊಕ್ಕಸದ ಕಡೆಗೇ ಹೊರಳುತ್ತಿದ್ದಿತು; ಅದನ್ನೆ ಕಂಡು ಕಣ್ಣುಬಿಡುವುದು. ಭಾರದಿಂದ ತುಳುಕಾಡುವಾಗ 'ಅಯ್ಯೋ ಕಕ್ಕಸ ಬಡುತಿದೆ ಬೊಕ್ಕಸದೊಡಲು' ಎಂದು ಉದ್ಗಾರತೆಗೆಯುವುದು, ಒಳಗಿನ ಒಳದನಿಯೊಂದು. ಆದರೇನಿದೆ? 'ಬರಿದೋ ಬರಿದು ತೆರವೋ ತೆರವು.' 'ಹೊಟ್ಟೆಯೇ ಮೊಟ್ಟಮೊದಲ ಚಿಂತೆಯು'! ಇದೇ ಇಂದಿನ ಜನತೆಯ ಕೂಗಲ್ಲವೆ?

ಸರಿ. ಇಷ್ಟೊಂದು ಮರುಗುವುದಕ್ಕಿಂತ ನಾನೇಕೆ ನೇರವಾಗಿ,

'ವಾಗ್ದೇವಿಯ ಭಾಂಡಾರ ಮುದ್ರೆಯನೊಡೆದ ರನ್ನನಂತೆ ಈ ಪಾಕ ದೇವಿಯ ಭಾಂಡಾರ ಮುದ್ರೆಯನ್ನೊಡೆಯಬಾರದಾಗಿತ್ತು ?' ಎಂದು ನೀವು ಕೇಳಬಹುದು. ಆಗಬಹುದಿತ್ತು. ಆದರೆ ಅಲ್ಲಿರುವವರು ನಾನೊಬ್ಬನೆಯೆ ? ಹಸಿದಿದ್ದರೂ ಸೌಂದರ್ಯದರ್ಶನಮಾತ್ರದಿಂದಲೇ ತಮ್ಮ ಹಸಿವೆಯನ್ನು ತುಂಬಿಸಿಕೊಳ್ಳುತ್ತಿದ್ದ ಕವಿಕುಲಕ್ಕೆ ನಾನು ಹೇಗೆ ಹೊರಗಾಗಬಹುದಿತ್ತು ? ರೋಮದಲ್ಲಿ ರೋಮನರಂತೇ ಇರಬೇಕಲ್ಲವೆ ? ಕವಿಗಳ ಕಂಪನಿಯಲ್ಲಿಯೂ ಹಾಗೆಯೇ. ಹಾಗೇ ಸಾಗಿದೆವು. ಹಾದಿಯಲ್ಲಿ ಒಂದು ಮಂಗವು ಒಂದು ಬಾಳೆಯ ತೋಟದಲ್ಲಿ ಹಣ್ಣುಗಳನ್ನು ಸೂರೆಗೆಯ್ಯುತ್ತ ತೊತ್ತಳದುಳಿಯುತ್ತಿತ್ತು. ಆ ದೃಶ್ಯದೈಸಿರಿಯನ್ನು ಕಂಡು ಎಲ್ಲರೂ 'Oh beauty!' ಎಂದು ಧ್ವನಿತೆಗೆದರು. ಆದರೆ ನಾನೊ 'Oh, if I were a monkey' ಎಂದು ಗದ್ಗದಿಸಿದೆ. ಸಂಸಾರಸುಖದಂತೆ ಒಂದೊಂದಾಗಿ ರಮಣೀಯ ದೃಶ್ಯಗಳು ಕ್ಷಣಿಕವಾಗಹತ್ತಿದುವು. 'ಅಯ್ಯೋ, ಎಂತಹ ಸುಸಂಧಿಯನ್ನು ಕಳೆದುಕೊಳ್ಳುವೆನಲ್ಲ' ಎಂದು ಚಡಪಡಿಸುವೆ. ಒಂದು ಸನ್ನಿವೇಶಕ್ಕೆ ಒಂದು ಕಾವ್ಯವೆಂದಿದ್ದರೂ ಒಂದು 'ಡಜನ್' ಕಾವ್ಯಗಳನ್ನಾದರೂ ಬರೆಯಬಹುದಾಗಿತ್ತು. ಆದರೆ ಎಲ್ಲಕ್ಕೂ ಮನುಷ್ಯನು ಪಡೆದುಬಂದಿರಬೇಕಲ್ಲ !

ಅಡಕೆಯ ರೆಂಬೆಗಳು, ಗೊನೆಗಳು—ಅವನ್ನು ಸುತ್ತಿ ಬಳಸಿದ ಎಲೆವಳ್ಳಿಗಳು—ಆಕಾಶಗಂಗೆಗೆ ವೀಳ್ಯವನ್ನರ್ಪಿಸುತ್ತಿವೆಯೊ ಎಂಬಂತೆ ತೋರಿತು. ತೆಂಗಾಯಿಗಳು ಹಸಿರು ಕಲಶದಲ್ಲಿ, ತಿರುಗಾಡಿ ನೀರಡಿಸುವ ನೇಸರಂಗೆ ನೀರಾಂಜಲಿಯನ್ನೊಡ್ಡಿವೆಯೊ ಎಂಬಂತೆ ಕಂಗೊಳಿಸುತ್ತಿತ್ತು. 'ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು....' ಎಲ್ಲವೂ ಅಕ್ಷರಶಃ ನಿಜ. ಆದರೇನು—? ಆಂಡಯ್ಯನ ಪರಿಸ್ಥಿತಿಗೂ ನಮ್ಮ ಪರಿಸ್ಥಿತಿಗೂ ಅದೆಷ್ಟೊ ಅಂತರ ! 'ನೆನವುದೆನ್ನಮನಂ ಬನವಾಸಿ ದೇಶಮಂ' ಎಂದು ಹಾಡಿದ ಪಂಪನ ಹೊಟ್ಟೆ ಹಸಿದಿದ್ದರೆ ಹೇಳುತ್ತಿದ್ದೆ, ಅದು ಹೇಗೆ ನೆನೆವುತ್ತಿದ್ದನೆಂಬುದನ್ನು. ನನಗೊ, ನಮ್ಮೂರಿನ ಶೀನಪ್ಪನಂಗಡಿಯು ನೆನಪಾಗಿ ಬೆಳಗಾಗುತ್ತಲೆ ಬಿಸಿಬಿಸಿ ದೋಸೆಯನು ತಿನ್ನುತ್ತಿದ್ದುದು ನೆನಪಾಗಿ.

'ನೆನೆವುದೆನ್ನ ಮನಂ ಬಿಸಿ ದ್ವಾಸಿ ದೇಶಮಂ' ಎಂದುಸುರಿದೆ, ನಿಟ್ಟುಸು ರಿದೆ. ಮತ್ತಿನಿಸು ದೂರ ಹೋದಕೂಡಲೆ ಒಂದು ತಂಪು ಬಸದಲ್ಲಿ ಜುಳು ಜುಳೆಂದು ಕಾಲ್ವರಿಯುತ್ತಿರುವ ಒಂದು ಝರಿ, ಅದರ ದಡಕ್ಕೆ ಒಂದು ಬಳ್ಳಿ. ವಾಯುವೀರನು ಬಳ್ಳಿವೆಣ್ಣಿನ ಮೇಲೆ ಏರಿ ಹೋಗುತ್ತಿದುದರಿಂದ ಸುಕುಮಾರ ಯುವತಿಯಂತೆ ಅದು ಬಳುಕುವುದು. ಆ ಬಳ್ಳಿವಾದಲ್ಲಿ ಕುಳಿತು ಕಾಲುಗಳನ್ನು ಹರಿಯುತ್ತಿರುವ ಝರಿಯಲ್ಲಿ ಇಳಿಬಿಟ್ಟು ಒಂದೊಂದೆ ಚಪಾತಿಯನ್ನು ಸವಿಯುತ್ತ ಸುತ್ತಣ ಗಳಪುವ ಕೋಗಿಲೆ ಗಳ ಕೂಜನವನ್ನಾಲಿಸುತ್ತ ಆನಂದಿಸುತ್ತಿದ್ದರೆ—ಆಹಾ! ಅದೆಂತಹ ಕಾವ್ಯ ಸೊಗಸೊ! ಆಗ ಮಾತ್ರ ನಾಕವೇ ಲೋಕಕ್ಕೆ ಇಳಿದಂತೆ. (ಲೋಕವೇ ನಾಕಕ್ಕೆ ಏರಿದಂತಲ್ಲ ಮತ್ತೆ! ಏಕೆಂದರೆ ಅಲ್ಲೇನಿದೆ— ನ ಮಾ ಅಶ್ಯತೆ ನ ಮಾ ಪೀಯತೆ)

ಸಿದ್ದಾಪುರವನ್ನು ದಾಟಿದೆವು. ಗೆರಸೊಪ್ಪೆಯ ಸೆರಗು ತಾಗ ಹತ್ತಿತು. ನಮ್ಮ ಕವಿಗಳೆಲ್ಲರೂ ಉತ್ಕಂಠಿತರಾದರು. ಅವರಿಗೇನು, ಮೋಕ್ಷಕ್ಕೆ ಮುಕ್ತದ್ವಾರವೇ ದೊರೆತಂತಾಯಿತು. ಹಸಿವೆ ನೀರಡಿಕೆ ಗಳು ಮಾಯವಾದುವು. ಅವರ ಹೃದಯವೆಲ್ಲ ಕಣ್ಣಿಗೇ ಬಂದಿತ್ತು. ಅಂತೂ ಗೆರಸೊಪ್ಪೆಯು ಕೂಟಬಂದಿತು. ಜೋಗವನ್ನೂ ಕಂಡದ್ದಾಯಿತು, ಜಲಪಾತವನ್ನು ಕಂಡೊಡನೆಯೆ ಒಬ್ಬೊಬ್ಬರಿಗೂ ಸನ್ನಿಪಾತವು ಕದಡಿಯೆ ಬಿಟ್ಟಿತು. 'ಅಯ್ಯೋ—ಅಯ್ಯೋ' ಎನ್ನುತ್ತ ಒಬ್ಬೊಬ್ಬರೆ ಟಣ್ಣನೆ ಜಿಗಿದು ಬಿಟ್ಟರು, ಮೋಟಾರಿನಿಂದ ಕೆಳಗೆ. ಒಬ್ಬರಂತೂ ಮೆಟ್ಟಿಲಿವೆಯೆ ಇಲ್ಲವೆ ಎಂಬುದನ್ನು ಕೂಡ ನೋಡದೆ ಮುಂದೆ ನುಗ್ಗಿದರು. ಮತ್ತೊಬ್ಬರು 'ಅಯ್ಯೊ, ಕಾಮನಬಿಲ್ಲು' ಎನ್ನುತ್ತ ಬಾಣಬಿಟ್ಟಂತೆ ಓಡಿದರು. ಇನ್ನೊ ಬ್ಬರು ತಮ್ಮ ಜನಿವಾರದಂತಿದ್ದ 'ಕ್ಯಾಮೆರಾ' ಬಿಚ್ಚಿ 'ಸ್ನ್ಯಾಪ್' ಹೊಡೆಯಹತ್ತಿದರು. ನಾನೊ, ಮೇಲೆ ಬಂಗಲೆಯ ಮುಂದಿನ ತಂಪು ಅಂಗಣದಲ್ಲಿ ಚಹಕುಡಿಯುತ್ತ ಆರಾಮ ಕುರ್ಚಿಯ ಮೇಲೆ ಅಡ್ಡಾಗಿ, ಬಾಯಿಂದ ಹೊಗೆ ಬಿಡುತ್ತ ಲಕ್ಷ್ಯವಿಲ್ಲದೆ ವೃತ್ತಪತ್ರವನ್ನೋದುತ್ತ ಕುಳಿತಿದ್ದ ಕೆಲವು ಶ್ವೇತಮುಖಿಗಳ ಕಡೆಗೆ ಕಂಗಾಲನಂತೆ ನೋಡುತ್ತ

ನಿಂತೆ. ರಸಿಕಪ್ರವಾಸಿಗರೆನ್ನಬೇಕು ಇವರೇ, ಎಂದುಕೊಂಡೆ. ಈಗಂತೂ ಕೆಳಗಿಳಿಯಲು ತ್ರಾಣವಿಲ್ಲದಾಯಿತು; ಅಲ್ಲಿಯೆ ನಿಲ್ಲುವುದಕ್ಕು ಮನಸ್ಸಿಲ್ಲ. ನೇರವಾಗಿ ಮೋಟಾರು ಪ್ರವೇಶಿಸಲಿಕ್ಕೆ ಧೈರ್ಯವಿಲ್ಲ. 'ಊಟಮುಗಿಸಿ ಕೆಳಗಿಳಿಯಬಾರದಾಗಿತ್ತೆ ಇವರು' ಎಂದುಕೊಂಡೆ. ಮತ್ತೊಂದಿನಿಸು ವಿಚಾರಿಸಿದೆ. ನನ್ನ ಅಲ್ಪತೆಯು ನನ್ನನ್ನು ಬೊಟ್ಟು ಮಾಡಿ ಅಣಕಿಸುವಂತೆ ಎನಿಸಿತು. ನಿಜವಾದ ಸೌಂದರ್ಯೋಪಾಸನೆಯನ್ನಬೇಕು ಅವರದೇ. ಅಂತೇ-ಅವರ ಹಸಿವು ಆಚೆಗಿತ್ತು, ನನ್ನ ಹಸಿವು ಈಚೆಗಿತ್ತು. ಒಂದೆಸವನೇ ವಿಚಾರಲಹರಿಗಳು ಧಬಧಬೆಯಂತೆ ಉರುಳಹತ್ತಿದುವು. ನಾನೂ ಜಲಪಾತ ವನ್ನು ಮುಟ್ಟೇಬರುವುದೆಂದು ನಿಶ್ಚಯಿಸಿದೆ. ನಮ್ಮವರನ್ನು ಕೂಡಿದೆ.

ಇಳಿದೇ ಇಳಿದೆವು. ಇಳಿದೇ ಇಳಿದೆವು. ಮೇಲಕ್ಕೂ ಏರುವ ಹಾಗಿಲ್ಲ, ಕೆಳಕ್ಕೂ ಇಳಿಯುವ ಹಾಗಿಲ್ಲ. ಕೈಕಾಲು ನಡುಗಹತ್ತಿದುವು. ಕಣ್ಣಿಗೆ ಕತ್ತಲೆ ಬರಹತ್ತಿತು. ಕಣ್ಣು ಚಕ್ರಗಳಾದುವು. 'ಓಹೋ ಅದು ನೋಡಿರಿ ಕಾವ್ಯಪ್ರವಾಹವನ್ನು!' ಎಂದೊಬ್ಬರು ಕೂಗಿದರು. ನನ್ನ ನೋಟ ಆಚೆಗೆ ಹೊರಳಿತು. ತುಸು ವೇಳೆ ನನ್ನನ್ನೇ ನಾನು ಮರೆತೆ. ಮನಸ್ಸು ಹಗುರೆನಿಸಿತು. ಆದರೆ ಇದೇ ಮರೆವು ಕಡೆವರೆಗೂ ಉಳಿದರೆ, ಎಂಬ ಭೀತಿಯಿಂದಲೋ ಏನೊ ಆಗಾಗ ನನ್ನತನದ ಅರಿವು ಮರೆವನ್ನು ಭೇದಿಸಿ ಇಣುಕುತ್ತಿತ್ತು. ಬಂಡೆಗಳ ಸಂಘಾತದಿಂದ ಕೊಚ್ಚಿಕೊಂಡು, ಅಬ್ಬರಿಸಿ ಧುಮುಕುತ್ತಿರುವ ಆ ಜಲಪಾತವನ್ನು ಕಂಡು ಮನಸ್ಸು ಯಾವುದೋ ಲೋಕಕ್ಕೆ ಗರಿಗೊಂಡು ಹಾರಿದಂತೆ ಎನಿಸಿತು. ಆ ಶುಭ್ರ ಪ್ರವಾಹವೊಮ್ಮೆ ಹಿಂಜಿದ ಅರಳೆಯನ್ನು ಯಾರೋ ತೂರುತ್ತಿರುವಂತೆ ತೋರುವುದು. ಒಮ್ಮೊಮ್ಮೆ ದೇವತೆಗಳು ಬಡವರಿಗೆ ಅನ್ನದ ರಾಸಿಯನ್ನೆ ಕೊಡುಗೆಯಾಗಿ ತೂರುತ್ತಿದ್ದಾರೊ ಎನಿಸುವದು. ವರ್ಡ್ಸ್‌ವರ್ತ್ ಕವಿಯು 'Sponteneous overflow of powerful feelings' ಎಂದು ಹೇಳಿದಂತೆ ಸೃಷ್ಟಿಕರ್ತನ ಭಾವನಾಪ್ರವಾಹವೇ ಕಾವ್ಯರೂಪದಿಂದ ಧಾರೆಗಟ್ಟಿ ಹರಿಯುತ್ತಿರುವುದೊ ಎಂದೆನಿಸುವುದು. ಒಂದು ಪ್ರವಾಹವು ಗಂಭೀರವಾಗಿ ವೈಭವದಿಂದ ಬಿಳಿಯ ಮದ್ದಾನೆಯಂತೆ ಸೊಕ್ಕಿ 'ರಾಜ'ನಂತೆ

ಧಾವಿಸುತ್ತಿತ್ತು. ಇನ್ನೊಂದು ರಮಣೀಯವಾಗಿ 'ಗಂಜಿಯ ಗುಳ್ಳೆ' ಯಂತೆ ಡೊಂಕು ಡೊಂಕಾಗಿ ಬನಸಿಸಿಂದ ಕುಣಿದು ಬೀಳುತ್ತಿತ್ತು, 'ಯುವತಿ'ಯಂತೆ. ಇನ್ನೊಂದು ಹಿಟ್ಲರನಂತೆ ಬರಿ ಅಬ್ಬರದಿಂದ ಗರ್ಜಿಸುತ್ತ 'ಓಂಕಾರದ ಶಂಖನಾದ' ಕ್ಕಿಂತ ಕಿಂಚಿದಧಿಕವಾಗಿ ಧ್ವನಿಗೆಯ್ಯುತ್ತಿತ್ತು, ಹಸಿದ 'ಸಿಂಹ'ನಂತೆ. ಒಂದಂತೂ ಸುಯ್ಯನೆ ಒಂದು ಮೋಕಿಗೆ ಅಪ್ಪಳಿಸಿ ಪುಟಿದು ಬೀಳುತ್ತಿತ್ತು, 'ಬಾಣ' ಬಿಟ್ಟಂತೆ. ನಮ್ಮೊಳಗಿನ ಕೆಲವು ಭಾಷಾಶಾಸ್ತ್ರಜ್ಞರು ಇವುಗಳನ್ನು ಹೆಸರಿಸಿದವರು ಯಾರೆಂದು ಪ್ರಶ್ನಿಸ ತೊಡಗಿದರು.

ಇನ್ನೊಬ್ಬರು ತಮ್ಮ ಐತಿಹಾಸಿಕ ಸಂಶೋಧನದ 'ಸರ್ಚ ಲಾಯಿಟ್' ಹಿಡಿದು 'ಪಂಪಕವಿಯು ಬನವಾಸಿಯಲ್ಲಿಯೆ ಇದ್ದುಕೊಂಡು ಗೆರಸೊಪ್ಪೆಯನ್ನೇಕೆ ಬಣ್ಣಿಸಿಲ್ಲ?' ಎಂದು ಕೇಳಿದರು. ಪಂಪನಿಗೆ ಇಂತಹ ಕಂಪನಿ ದೊರೆತಿರಲಿಕ್ಕಿಲ್ಲ! ಇನ್ನೊಬ್ಬ ಭಾಸ್ಕರಾಚಾರ್ಯರು ಈ ನೀರಿನ ವೇಗವೆಷ್ಟಿರಬಹುದೆಂದು ಗಣಿತ ಹಾಕತೊಡಗಿದರು. 'ಕಣ್ಣೆದುರಿನ ಸೌಂದರ್ಯವನ್ನು ನೋಡಿ ಆನಂದ ಬಡಬಾರದೆ! ಎಂಥ ಜನಗಳಪ್ಪಾ ಇವರು' ಎಂದುಕೊಂಡೆ.

ನಾವೀಗ ಇಳಿದದು ೯೦೦ ಫೂಟು ಕೆಳಗೆ, ತಡಸಲಿನ ಅಡಿಯಲ್ಲಿಯೆ. ಕಾವ್ಯದೇವಿಯ ಅಡಿದಾವರೆಗೆ ಭಕ್ತರೆರಗುತ್ತಿರುವಂತೆ ಇತ್ತು. ಒಬ್ಬ ಭಕ್ತರಂತೂ ಕಾಮನಬಿಲ್ಲು ಹಿಡಿಯಲು ಹೋಗಿ ದೊಪ್ಪನೆ ಕೊಪ್ಪರಿಸಿ ಬಿದ್ದರು. 'ಕಾವ್ಯಕನ್ನೆಯ ಬೆನ್ನು ಹತ್ತಬಾರದು ಮಾರಾಯಾ' ಎಂದು ಮತ್ತೆ ನಾನೇ ನಾನಾದೆ. ಹಿಂದೊಮ್ಮೆ ರಾಘವಾಂಕನು ಅದೇ ಕನ್ನೆಯ ಬೆನ್ನುಹತ್ತಿ ಹಲ್ಲುಮುರಿಸಿಕೊಂಡಿದ್ದನಂತೆ-ನಮ್ಮ ಮಿತ್ರರೊಬ್ಬರು ಹೇಳುತ್ತಿದ್ದರು-ಈ ನವಯುಗದ ರಾಘವಾಂಕರು ಕಾಲುಮುರಿಸಿಕೊಳ್ಳಬೇಕಾಯಿತೆ ಎಂದು ಮಿಡುಕಿದೆ.

ಕಾವ್ಯಕ್ರೀಡೆಯನ್ನೂ ರಸದೂಟವನ್ನೂ ತೀರಿಸಿಕೊಂಡು ಮೇಲೆ ಬರಬೇಕಾದರೆ ನಾಲ್ಕೂವರೆಯಾಯಿತು. ಎಲ್ಲರೂ ಹಣ್ಣಾಗಿದ್ದರು. ಈಗಲಾದರೂ ಊಟದ ಕಡೆಗೆ ಅವರ ದೃಷ್ಟಿ ಹೊರಳಿತು, ನಮ್ಮ ಪುಣ್ಯ. ನನ್ನ

ಹೃದಯದ ಬಾಗಿಲು ತೆರೆಯಿತು. ಇನ್ನೂ ಭಾಂಡಾರದ ಬಾಗಿಲು ತೆರೆಯುವುದಿತ್ತು. ಒಬ್ಬ ಹಿರಿಯರು 'ಮೊದಲು ನಾವು ಈ ಮೈಸೂರುಗಡಿಯನ್ನು ದಾಟೋಣ, ಇಲ್ಲವಾದರೆ ಕರ ಬೀಳಬಹುದು 'ಎಂದು ಸೀಮೋಲ್ಲಂಘನವನ್ನು ಸಾರಿದರು. ಕೈಗೆ ಬಂದ ತುತ್ತು ಬಾಯಿಗೆ ಕುತ್ತಾಯಿತು. ಗಾಡಿ ಸಾಗಿತು. ಹಾಗೇ ಬ್ರಿಟಿಶ್ ಬಂಗ್ಲೆಗೆ ಬಂದೆವು. ನನ್ನ ಆತುರತೆಯು ಕುಗ್ಗಿಮುಗ್ಗಿ ಕುಸಿದುಹೋಯಿತು; ಹಸಿವೆಯು 'ಹಸಿಗೆಟ್ಟು' ಹೋಯಿತು. ಇನ್ನು ಏನೂ ಬೇಕಾಗಿರಲಿಲ್ಲ. ಆಗ ಸೃಷ್ಟಿನಿಯಮದಂತೆ ಚಪಾತಿ ದೇವಿಯು ಕಣ್ದೆರೆದಳು. ಸುಮಾರು ಮುನ್ನೂರರಷ್ಟು ಚಪಾತಿಗಳು, ಆರೇಳು ಸೇರಿನಷ್ಟು ಬೆಣ್ಣೆ, ಸಜ್ಜೆಯ ರೊಟ್ಟಿಗಳೂ ನೂರಾರು, ಬುತ್ತಿ, ಕಲಸನ್ನ! ಆಗ ಒಬ್ಬರೆಂದರು, 'ಅಯ್ಯೋ ಏನ್ರಿ ಎಷ್ಟೊಂದು ಸಾಹಿತ್ಯ! ನಾವು ತಡಸಲನ್ನು ನೋಡುವ ಮೊದಲೇ ತಿಂದಿದ್ದರೆ ಈಗ ಇನ್ನೊಮ್ಮೆ ತಿನ್ನಬಹುದಾಗಿತ್ತಲ್ಲ!' ಎಲ್ಲರೂ ಹಸಿವೆಯಿಂದ ಕಂಗಾಲರಾಗಿ ಆಗಿ, ಹಸಿವೆಯ ಹಸಿವನ್ನು ಕಳೆದುಕೊಂಡು ಬಿಟ್ಟಿದ್ದರು. ಅಂತೆಯೆ ಮತ್ತೊಮ್ಮೆಯಾದರೂ ೯೦೦ ಫೂಟಿನ ಮೇಲಿನಿಂದ ತಡಸಲು ಹೇಗೆ ಕಾಣುತ್ತದೊ ನೋಡಬೇಕೆಂದು ಹೊರಟರು. ಇಲ್ಲಿಯೂ ಮತ್ತೊಂದು ಬಗೆಯ ರಮಣೀಯತೆ. ರಮಣೀಯತೆಯೆಂದರೇನು—ಕಾವ್ಯದೇವಿಯ ಅಡಿದಾವರೆಯಿಂದ ಮುಡಿದಾವರೆಯನ್ನು ಏರಿದಂತೆ. ಆಗ ಮತ್ತೊಬ್ಬರು, 'ಅಲ್ಲರಿ, ಮೊದಲೇ ಇಲ್ಲಿ ಬಂದು ಊಟ ತೀರಿಸಿದ್ದರೆ ಎಷ್ಟು ಹಿತವಾಗುತ್ತಿತ್ತು?' ಎಂದು ಗೊಣಗಿದರು. (ಈ ಮೊದಲೆ ಒಬ್ಬರು ಸೂಚನೆ ಮಾಡಿದಾಗ ಎಲ್ಲರೂ ಕೇಳಿಯೂ ಕೇಳದಂತೆ ಕುಳಿತಿದ್ದರು.) ಅಂತೂ ಹದಿನೆಂಟೂ ಜನರು ಕೂಡಿ ತಿಂದ ಚಪಾತಿಯ ಸಂಖ್ಯೆಯೆಂದರೆ (ಅಂಕಿಯಲ್ಲಿ) ಇಪ್ಪತ್ತೇಳು, ಮಾತ್ರ. ಉಳಿಯಿತೆಷ್ಟು? ಎಲ್ಲವೂ—Simply waste! ಈಗ ನನ್ನ ಹೃದಯದಲ್ಲಿ ವೇದನೆ ಎಷ್ಟಾಗಿರಬಹುದು ಊಹಿಸಬಲ್ಲಿರಾ?



## ಕೆನ್‌ಸಿಂಗ್‌ಟನ್ ಪಾರ್ಕ್ — ಕೆ. ಗೋಪಾಲಕೃಷ್ಣರಾಯ

ಮೂರು ವರ್ಷಗಳಿಂದ ಈಚೆಗೆ ಕಚೇರಿಯ ಕೆಲಸ ಮುಗಿದೊಡನೆಯೆ ಕೆನ್‌ಸಿಂಗ್‌ಟನ್ ಪಾರ್ಕಿನ ಕಡೆಗೆ ತೆರಳುವುದು ವಾಡಿಕೆಯಾಗಿ ಹೋಗಿದೆ. ಸಂಜೆ ಇನ್ನೆಲ್ಲಿಗೆ ಹೋಗುವುದಕ್ಕೂ ಮನಸ್ಸು ಬರುವುದಿಲ್ಲ. ಕೆನ್‌ಸಿಂಗ್‌ಟನ್ ಪಾರ್ಕಿಗೆ ಬಂದು ಸಂಜೆಯನ್ನಲ್ಲಿ ಕಳೆದು, ರಾತ್ರಿ ಎಂಟು ಘಂಟೆಗೆ ಮನೆಗೆ ಹಿಂತಿರುಗಿದೆನೆಂದರೆ ಆಗ ಮನಸ್ಸಿಗೆ ಎಷ್ಟೋ ಹರ್ಷ. ಕಚೇರಿ ಕೆಲಸದ ಶೇಷವೊಂದೂ ಮನದಲ್ಲುಳಿದಿರುವುದಿಲ್ಲ. ಅದರಿಂದಲೇ ಸಂಧ್ಯಾಕಾಲದಲ್ಲಿ ಇತರರು ಇತ್ತ ಆಹ್ವಾನಗಳನ್ನೂ ಮನ್ನಿಸುತ್ತಿಲ್ಲ. ಅದಕ್ಕೋಸ್ಕರ ಅನೇಕರು ನನ್ನ ವಿಷಯದಲ್ಲಿ ತಪ್ಪು ತಿಳಿದುಕೊಂಡಿದ್ದಾರೆ. ಅನೇಕ ಕಡೆಯಿಂದ ಆಕ್ಷೇಪಣೆ ಬಂದಿದೆ. ಅದೂ ನನಗೆ ಗೊತ್ತು. ಪರಿಷತ್ತಿನ ನನ್ನ ಕೆಲವು ಮಿತ್ರರು ಪರಿಷತ್ತಿನಲ್ಲಿ ನಡೆಯುವ ಭಾಷಣ ಮೊದಲಾದ ಸಮಾರಂಭಗಳಿಗೆ ಬರುತ್ತಿಲ್ಲವೆಂದು ಆಕ್ಷೇಪಿಸಿದ್ದಾರೆ. ನನ್ನ ಕ್ಲಬ್ಬನ್ನೇ ನಾನು ಮರೆತುಬಿಟ್ಟಿದ್ದೇನೆ. ಅಲ್ಲಿನ ಆಟಪಾಟಗಳಲ್ಲಿ ಭಾಗಿಯಾಗುತ್ತಿಲ್ಲ ಎಂದು ನನ್ನ ಸಹೋದ್ಯೋಗಿಗಳು ಪ್ರತಿನಿತ್ಯವೂ ನನ್ನನ್ನು ಅಲ್ಲಗಳೆಯುತ್ತಿದ್ದಾರೆ. ಮನೆಗೆ ಬಂದು ಮಕ್ಕಳನ್ನೊಡಗೂಡಿ ಲಾಲ್‌ಬಾಗಿಗೆ ಯಾಕೆ ಹೋಗಬಾರದು; ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿ ನಿಮಗೆ ಏನಿದೆ?–ಅಲ್ಲಿ ಯಾರು ನಿಮ್ಮನ್ನು ಒಲಿಸಿದ್ದಾಳೆ? ಎಂದು ನನ್ನ ಸಹಧರ್ಮಿಣಿಯೇ ನನ್ನನ್ನು ಹಾಸ್ಯ ಮಾಡುತ್ತಿರುತ್ತಾಳೆ. ಕೆನ್‌ಸಿಂಗ್‌ಟನ್ ಪಾರ್ಕಿಗೂ ನನ್ನ ಮನೆಗೂ ಸುಮಾರು ಎಂಟು ಮೈಲಿಗಳಾಗುತ್ತದೆ. ಆದರೂ ಸಂಜೆಯಾಯಿತೆಂದರೆ ನಾನಾಯಿತು; ಕೆನ್‌ಸಿಂಗ್‌ಟನ್ ಪಾರ್ಕಾಯಿತು.

ನನ್ನ ವ್ಯಾಸಂಗ ಮುಗಿದು ಕೆಲಸಕ್ಕೆ ಸೇರುವ ಮೊದಲು ನಮ್ಮ ನಾಡಿನ ಹಿರಿಯರೊಬ್ಬರು ನನ್ನನ್ನು ಅವರ ಮನೆಗೆ ಬರಮಾಡಿಕೊಂಡು ಪುಷ್ಕಳವಾಗಿ ಭೋಜನ ಮಾಡಿಸಿ ಮುಂದೆ ಜೀವನದಲ್ಲಿ ಹೇಗೆ ನಡೆದು ಕೊಳ್ಳಬೇಕೆಂಬ ವಿಷಯದಲ್ಲಿ ಕೆಲವು ಬುದ್ಧಿವಾದಗಳನ್ನು ಕೊಟ್ಟಿದ್ದರು. ಅದರಲ್ಲಿ ಒಂದು 'ನೀನು ಮಾರನೆಯ ದಿವಸ ಮಾಡಬೇಕೆಂದಿರುವ ಕೆಲಸ ಗಳನ್ನೆಲ್ಲಾ ಹಿಂದಿನ ದಿನ ಮಲಗಿಕೊಳ್ಳುವ ಮೊದಲು ಯೋಚಿಸಿ ಇಂತಿಂತಹುದನ್ನು ಮಾಡಿಬಿಡಬೇಕೆಂದು ಮನದಲ್ಲಿ ಅಂದುಕೊಂಡು ಮಲಗಿಕೊ. ಮಾರನೆಯ ದಿನ ಅವುಗಳು ಆಯಾ ಹೊತ್ತಿಗೆ ಸುಸೂತ್ರ ವಾಗಿ ನಡೆದುಹೋಗುತ್ತಿರುತ್ತವೆ' ಎಂದು. ಇದು ನನ್ನ ಅನುಭವಕ್ಕೆ ಈಗ ಚೆನ್ನಾಗಿ ಬರುತ್ತಿದೆ. ಸಂಜೆಯಾದೊಡನೆ ನನ್ನ ಬೈಸಿಕಲ್ಲು ನಾನ ರಿಯದಂತೆಯೇ ನನ್ನನ್ನು ಕೆನ್‌ಸಿಂಗ್‌ಟನ್ ಪಾರ್ಕಿಗೆ ತಂದು ಬಿಟ್ಟಿರು ತ್ತದೆ. ಈ ಕೆನ್‌ಸಿಂಗ್‌ಟನ್ ಪಾರ್ಕಿಗೂ ನನ್ನ ಜೀವನಕ್ಕೂ ಒಂದು ನಿಕಟವಾದ ಸ್ನೇಹ ಬೆಳೆದುಹೋಗಿದೆ. ಬೆಂಗಳೂರಿನಲ್ಲಿ ಅನೇಕ ಪಾರ್ಕು ಗಳಿವೆ. ರಮ್ಯವಾದ ಲಾಲ್‌ಬಾಗಿದೆ, ಕಚೇರಿಯ ಹತ್ತಿರದಲ್ಲಿಯೇ ಕಬ್ಬನ್ ಪಾರ್ಕಿದೆ. ಆದರೆ ಅವುಗಳೆಲ್ಲದರಲ್ಲಿಯೂ ಸಂಜೆಯಲ್ಲಿ ಗದ್ದಲ. ಮನು ಷ್ಯರು, ಮೋಟರುಗಳು. ಅಬ್ಬಾ ಶಾಂತಿ! ಎಲ್ಲಿ ಸಿಗುವದು ಅಲ್ಲಿ ಶಾಂತಿ!

ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿನ ಆವರಣವೇ ಬೇರೆ. ಪಾರ್ಕಿನ ಪೂರ್ವಕ್ಕೆ 'ಎವರ್ ಗ್ರೀನ್' ಮರಗಳ ಸಾಲು; ಪಶ್ಚಿಮದಲ್ಲಿ 'ಸಿಲ್ವರ್ ಓಕ್' ಮತ್ತು ತಂಗಡಿಗಿಡಗಳ ಸಾಲು; ಅದರ ಮುಂದೆ ಪಾರ್ಕಿನ ಉದ್ದಕ್ಕೂ ಚಾಚಿದೆ ಹಲಸೂರಿನ ಕೆರೆ. ಕೆರೆಯಲ್ಲಿ ಮೂರು ದ್ವೀಪಗ ಳುಂಟು. ಆ ಮೂರು ದ್ವೀಪಗಳಲ್ಲೂ ದಟ್ಟವಾಗಿ ಬೆಳಯಿಸಿದ ಮರಗಳು. ನಡುದ್ವೀಪದಲ್ಲಿನ ಮರಗಳ ಕೊಂಬೆ ಕೂಡಿ ಒಂದು ಚಪ್ಪರದಂತಾಗಿದೆ— ಅಲ್ಲ ಮಂಟಪದಂತಿದೆ. ಮತ್ತೆರಡು ದ್ವೀಪಗಳೇ ಕುದುರೆಯ ಲಾಳ ದಾಕೃತಿಯಲ್ಲಿವೆ. ಅವುಗಳಲ್ಲಿನ ಮರಗಳು ತಮ್ಮ ಕೊಂಬೆಗಳನ್ನು ನೀರಿ ನೊಳಕ್ಕೆ ಚಾಚಿವೆ.

ಕೆರೆಯ ಒಂದು ಅಂಚಿಯಲ್ಲಿ ದೊಡ್ಡದೊಂದು ಬಂಡೆ. ಅದರ ಮೇಲೆ

ಕೆಂಪೆಗೌಡನ ಮಂಟಪ. ಮತ್ತೊಂದು ಅಂಚಿನಲ್ಲಿ ಕಾಣಿಸುವುದು ಮಹಾಯುದ್ಧದಲ್ಲಿ ಮಡಿದ ವೀರರ ಜ್ಞಾಪಕಾರ್ಥಕ್ಕಾಗಿ ನಿಲಿಸಿರುವ ಸ್ತಂಭ. ಕೆರೆಯ ಸುತ್ತಲೂ ಬೀದಿ. ಎದರ ಬೀದಿಯ ಸಾಲು ಮರಗಳು-ತೆಂಗಿನಮರಗಳು. ಪಾರ್ಕಿನಲ್ಲಿ ಕುಳಿತವರಿಗೆ ಒಂದು ಕಡೆ ಚರ್ಚು ಕಂಡು ಬಂದವರೆ ಮತ್ತೊಂದು ಕಡೆ ಕಾಣಬರುವುದು—ದೇಗುಲ. ಒಂದು ಕಡೆಯಿಂದ ಚರ್ಚಿನ ಗಂಟಾನಾದ ಕೇಳಿ ಬರುತಿದ್ದರೆ ಮತ್ತೊಂದು ಕಡೆಯಿಂದ ಕೇಳಿ ಬರುವುದು ದೇಗುಲದ ನಾಗಸ್ವರದ ರಮ್ಯಗೀತ. ಪಾರ್ಕಿನ ಹಿಂದೆ ಕ್ರಿಶ್ಚಿಯನ್ ಹುಡುಗಿಯರ ಮತ್ತು ಮಕ್ಕಳ 'ಬೋರ್ಡಿಂಗ್ ಹೊಂ' ಇದೆ. ಅಲ್ಲಿಂದ ಯಾವಾಗಲೂ ಮಕ್ಕಳ ಕಲಕಲ ಧ್ವನಿ ಹುಡುಗಿಯರ ಮೇಳದ ಗಾನ, ಪಾರ್ಕಿನ ಆವರಣಕ್ಕೇ ಒಂದು ಇಂಬುಗೊಟ್ಟಿರುತ್ತದೆ.

ಕೆರೆಯಲ್ಲಿ ಯಾವಾಗಲೂ ತಾವರೆ, ನೈದಿಲೆ. ಇದರಲ್ಲಿ ನಾನು ನೋಡಿರುವಷ್ಟು ಕೊಕ್ಕರೆಯೇ ಮೊದಲಾದ ನೀರುಹಕ್ಕಿಗಳನ್ನು ಇನ್ನೆಲ್ಲೂ ನೋಡಿಲ್ಲ. ಆ ಶ್ವೇತಪಕ್ಷಿಗಳು ಒಟ್ಟಿಗೆ ದ್ವೀಪದಲ್ಲಿರುವ ಮರಗಳ ಮೇಲೆ ಕುಳಿತಿರುವುದನ್ನು ನೋಡಿದರೆ ನೀರಿನಲ್ಲಿ ಆ ದ್ವೀಪ ಆದಿಶೇಷನ ಶಯ್ಯೆ ಮೇಲೆ ಶ್ವೇತಛತ್ರಿ....ಹೀಗೆ ಏನೇನೋ ಮನಸ್ಸಿಗೆ ತೋರಿಬರುವುದು. ಮನಸ್ಸು ಹಗುರವಾಗುವುದು. ನೀರಿನಲ್ಲಿ ಜಲರೇಖೆಯನ್ನು ನಿರ್ಮಿಸುತ್ತ ಸಂಚರಿಸುವ ಪುಟ್ಟಹಕ್ಕಿಗಳನ್ನು ನೋಡಬೇಕು. ಅವುಗಳ ಆಟ; ಓ! ಏನು ಆನಂದ!

ಪಾರ್ಕಿನಲ್ಲಿ ನಾನು ಯಾವಾಗಲೂ ಕುಳಿತುಕೊಳ್ಳುವ ತಾಣ ಹೊಂಗೆಯ ಮರದಡಿಯಲ್ಲಿ, ಶಿಲಾಪೀಠದ ಮೇಲೆ. ಸಂಜೆ ನನ ತಾಣದಲ್ಲಿ ಕುಳಿತನೆಂದರೆ ಎದುರಿಗೆ ಸೂರ್ಯಾಸ್ತಸಮಯದ ಸೂರ್ಯಕಿರಣಗಳು ಮೋಡಗಳಲ್ಲಿ ತೂರಿ ಆಗಸವನ್ನೆಲ್ಲಾ ಆವರಿಸಿರಲು, ಸೂರ್ಯ ಅಸ್ತಮಿತನಾದ ಹಾಗೆಲ್ಲಾ ಅಲ್ಲಿ ತಳೆಗೊಳ್ಳುವ ವಿವಿಧವರ್ಣಗಳ ಭವ್ಯ ನೋಟ ಭಾವನಾಪ್ರಪಂಚಕ್ಕೊಮ್ಮೆಯೇ ನಮ್ಮನ್ನು ಕರದೊಯ್ಯುವುದು. ಸಂಧ್ಯಾಕಾಲದಲ್ಲಿ ಇಲ್ಲಿ ಹೀಗೆ ಕುಳಿತು ಎಷ್ಟು ವಿಷಯಗಳನ್ನು ಇಲ್ಲಿ ಯೋಚಿಸಿ ಬಗೆಹರಿಸಿಕೊಂಡಿದ್ದೇನೆ! ಇದೇ ಸ್ಥಳದಲ್ಲಿ ಕುಳಿತು

ನಾನೆಷ್ಟು ಕತೆಗಳನ್ನು ಬರೆದಿದ್ದೇನೆ! ದೋಣಿಯನ್ನು ತೆಗೆದುಕೊಂಡು ಕೆರೆಯಲ್ಲಿ ಸುತ್ತುತ್ತಾ ಎಷ್ಟು ಕವನಗಳನ್ನು ಕಟ್ಟಿ ಹಾಡಿಕೊಂಡಿದ್ದೇನೆ! ನನ್ನ ದುಃಖಗಳನ್ನೆಷ್ಟು ಇಲ್ಲಿನ ಈ ಜಲದಲ್ಲಿ ಹುದುಗಿಸಿಟ್ಟಿದ್ದೇನೆ!

ಹೊರಗಿನಿಂದ ಬೆಂಗಳೂರಿಗೆ ನನ್ನ ಸ್ನೇಹಿತರಾದಾದರೂ ಬಂದರೆ ಅವರನ್ನು ಮೊದಲು ಇಲ್ಲಿಗೆ ಕರೆದೊಯ್ಯುವೆ. ಇಲ್ಲಿ ದೋಣಿಯಲ್ಲಿ ಕೂಡಿಸಿ ದ್ವೀಪಗಳಿಗೆ ಕರೆದೊಯ್ದು ಅಲ್ಲಿ ಅವರಿಗೆ ಆತಿಥ್ಯವನ್ನಿತ್ತರೆ ಆಗ ನನ್ನ ಮನಸ್ಸಿಗೆ ತೃಪ್ತಿ. ಒಬ್ಬ ನನ್ನ ಸ್ನೇಹಿತ ಯುರೋಪನ್ನೆಲ್ಲಾ ಸುತ್ತಿದ್ದಾನೆ. ಅವನು ಹಿಂದುಸ್ಥಾನದ ಸರ್ಕಾರದಲ್ಲಿ ದೊಡ್ಡ ಹುದ್ದೆಯಲ್ಲಿರುವುದರಿಂದ ಹಿಂದೂ ದೇಶದಲ್ಲಿ ಅವನು ನೋಡದೆ ಇರುವ ಸ್ಥಳಗಳೇ ಇಲ್ಲ. ಅವನನ್ನು ನಾನು ಇಲ್ಲಿಗೆ ಕರೆದುಕೊಂಡು ಬಂದಾಗ ಇಲ್ಲಿನ ಪ್ರಕೃತಿ ಸೌಂದರ್ಯ ಮತ್ತು ಆವರಣವನ್ನು ನೋಡಿ ಮುಗ್ಧನಾಗಿ ದ್ವೀಪದಲ್ಲಿದ್ದ ಒಂದು ಮರದ ಬುಡದಲ್ಲಿ ಕುಳಿತು 'ಓಂ ಶಾಂತಿಃ ಶಾಂತಿಃ' ಎಂದು ಹೇಳುತ್ತಾ ಪರವಶನಾಗಿಬಿಟ್ಟಿದ್ದ. ಅವನು ಬೆಂಗಳೂರನ್ನು ಬಿಟ್ಟು ತೆರಳುವಾಗ ನನಗೆ ಹೇಳಿದ ಕೊನೆಯ ಮಾತುಗಳಿವು: 'ಗೋಪಾಲ್, ನೀನು ನಿಶ್ಚಯವಾಗಿಯೂ ಅದೃಷ್ಟವಂತ. ಕೆನ್‌ಸಿಂಗ್‌ಟನ್ ಪಾರ್ಕಿನ ಸ್ನೇಹ ನಿನಗೆ ದೊರೆತಿರುವುದು ನಿನ್ನ ಸುಕೃತ. ನಾನೆಂದಿಗೂ ನಿನ್ನ ಪಾರ್ಕನ್ನು ಮರೆಯುವ ಹಾಗಿಲ್ಲ' ಇನ್ನು ಈ ಪಾರ್ಕಿಗೆ ಬರುವ ಕೆಲವು ವ್ಯಕ್ತಿಗಳ ಪರಿಚಯ ನಾನು ತಮಗೆ ಮಾಡಿಕೊಡಬೇಕೆಂದೆನಿಸುತ್ತದೆ. ಈ ಫಾರ್ಕಿಗೆ ಅನೇಕ ಜನರೇನೂ ಬರುವುದಿಲ್ಲ. ಇಲ್ಲಿಗೆ ಪ್ರತಿನಿತ್ಯವೂ ಬರುವವರೆಂದರೆ ಒಬ್ಬ ಮೌಲ್ವಿ, ಕೆಲವು ಕ್ರಿಶ್ಚಿಯನ್ ಪಾದ್ರಿಗಳು, ರಾಮಕೃಷ್ಣ ಮಠದ ಕೆಲವು ಭಕ್ತರು (ಅವರೆಲ್ಲರೂ ವೃದ್ಧರು; ಪೆನ್‌ಷನ್ ದಾರರು). ಆಗಾಗ ಕೆಲವು ಆಂಗ್ಲ ದಂಪತಿಗಳು.

ಮೌಲ್ವಿಯು ಯಾವಾಗಲೂ ಕುರಾನನ್ನು ಪಠಿಸುತ್ತಾ ಪಾರ್ಕಿನಲ್ಲಿ ತಿರುಗುತ್ತಿರುತ್ತಾನೆ. ಮೂರುವರ್ಷಗಳಿಂದಲೂ ನಾನು ಅವನನ್ನು ನೋಡುತ್ತಿದ್ದೇನೆ. ಅವನು ನನ್ನನ್ನು ನೋಡುತ್ತಿದ್ದಾನೆ. ಆದರೆ ಒಂದು ದಿನವೂ ಒಬ್ಬರೊಡನೊಬ್ಬರು ಮಾತನಾಡಿಸಿಲ್ಲ. ಆ ಆಂಗ್ಲ ಪಾದ್ರಿಗಳು

ಕೆಲವು ಸಲ ನನ್ನೊಡನೆ ಯೋಗಕ್ಷೇಮ ಮಾತನಾಡಿದ್ದಾರೆ. ರಾಮಕೃಷ್ಣ ಮಠದವರು ಅನೇಕ ವೇಳೆ ನನ್ನೊಡನೆ ವೇದಾಂತ ವಿಚಾರ ಮಾತನಾಡಿದ್ದಾರೆ. ಮೌಲ್ವಿಗೆ ತಾನಾಯಿತು; ಅವನಾಯಿತು. ಪಾದ್ರಿಗಳೋ ಅವರವರಲ್ಲಿಯೇ ಗುಸುಗುಸು ಮಾತನಾಡುತ್ತಿರುತ್ತಾರೆ. ರಾಮಕೃಷ್ಣ ಮಠದವರ ವಾದವಿವಾದಕ್ಕೆ ಕಡೆಯೇ ಇಲ್ಲ. ಇವರನ್ನೆಲ್ಲಾ ಕಂಡಾಗ ನನಗೆ ಶ್ರೀ ರಾಮಕೃಷ್ಣಪರಮಹಂಸರು ಹೇಳಿದ ಒಂದು ಕತೆ ನೆನಪಿಗೆ ಬರುತ್ತದೆ. ಸೊಗಸಾದ ಹಣ್ಣು ಹೂ ಒಳಗೊಂಡ ಮರಗಳಿರುವ ಉದ್ಯಾನದಲ್ಲಿ ಕೆಲವರು ಕುಳಿತು ಬರೀ ಹಣ್ಣುಗಳು ಎಷ್ಟಿವೆ, ಹೂವುಗಳು ಎಷ್ಟಿವೆ ಎಂದು ಎಣಿಸುವುದರಲ್ಲೇ ಕಾಲವನ್ನು ಕಳೆದುಬಿಡುತ್ತಾರೆ. ಬುದ್ಧಿವಂತನು ಒಂದು ಮಾತನ್ನು ಆಡದೆ ಹಣ್ಣುಗಳನ್ನು ಸವಿದು ಸುಖ ಪಡುತ್ತಿರುತ್ತಾನೆ.

ಈ ವರ್ಷದ ಜನವರಿಯ ಮೊದಲನೆಯ ದಿನ; (ಕ್ರಿಸ್ತರ ಹೊಸ ವರ್ಷದ ಆರಂಭ) ಆ ದಿನ ರಜವಿದ್ದುದರಿಂದ ನಾನು ಬೆಳಗ್ಗೇನೆ ಪಾರ್ಕಿಗೆ ಬಂದು ಅಲ್ಲಿ ಜೆ. ಯಂ. ಬ್ಯಾರಿಯ 'ಪೀಟರ್ ಪ್ಯಾನ'ನನ್ನು ಓದುತ್ತ ಕುಳಿತಿದ್ದೆ. ಎಂ. ಹಡ್ಸನ್ ಎಂಬ ಐರಿಷಿನವನೊಬ್ಬ ನಾನಿದ್ದೆಡೆಗೆ ಬಂದು ಹೊಸ ವರ್ಷದಲ್ಲಿ ಶುಭವಾಗಲೆಂದು ಹಾರೈಸಿ ಮಾತನಾಡುತ್ತ ಕುಳಿತುಕೊಂಡ. ಆ ದಿನವೇ ಮೊದಲು ಸಲ ನಾನವನನ್ನು ಕಂಡಿದ್ದು; ಅವನೊಡನೆ ಮಾತನಾಡಿದ್ದು. ಆ ದಿನ ನಾನು ದಟ್ಟಿ ಪಂಜೆಯನ್ನುಟ್ಟು ಷರಟಿನ ಮೇಲೆ ಬರಿ ಕೋಟೊಂದನ್ನು ತಗಲಿಸಿಕೊಂಡಿದ್ದೆ. ತಲೆಯ ಕೂದಲು ಕೆದರಿತ್ತು. ಬೆಳಿಗ್ಗೆ ತಾನೆ ಎಣ್ಣೆಹಚ್ಚಿ ಎರೆದುಕೊಂಡಿದ್ದರಿಂದ ತಲೆಯ ಕೂದಲು ನನ್ನ ಹದ್ದಿಗೆ ಸಿಕ್ಕಿಬಿದ್ದಿರಲಿಲ್ಲ. ನನ್ನ ರೂಪವನ್ನು ನೋಡಿ ಅವನು ನನ್ನನ್ನು ಅಲ್ಲಿ ಹತ್ತಿರದಲ್ಲಿಯೇ ಇದ್ದ ಸಿಗರೇಟು ಕಾರ್ಖಾನೆಯ ಕೂಲಿಗಾನೆಂದು ತಿಳಿದುಕೊಂಡನೇನೋ. 'ಇಂದು ಶುಭದಿನ ಕ್ರಿಸ್ತನ ಪುಣ್ಯ ದಿನ. ನೀನು ಮನೆಗೆ ಹೋಗಿ ಬೈಬಲಿನ ಇಷ್ಟನೇ ಪುಟವನ್ನು ತೆರೆದು ಈ ಈ ಭಾಗಗಳನ್ನು ಪಠಿಸು. ನಿನ್ನ ಆತ್ಮೋದ್ಧಾರವಾಗಲೆಂದು ಕ್ರಿಸ್ತನ ಮೂಲಕ ದೇವರಲ್ಲಿ ಪ್ರಾರ್ಥನೆಯಿಡು. ಕ್ರಿಸ್ತನೊಬ್ಬನೆ

ನನ್ನನ್ನು ಉದ್ಧರಿಸಬಲ್ಲನು' ಎಂದು ಹೇಳತೊಡಗಿದ. ಅವನು ಅವರ ಯುಗಾದಿಯ ದಿನ ಪುಣ್ಯ ಕೆಲಸ ಮಾಡುತ್ತಿದ್ದೇನೆಂದು ನಂಬಿ ನನಗೆ ಅಷ್ಟು ಶ್ರದ್ಧೆಯಿಂದ ಹೇಳುತ್ತಿದ್ದ. ಅವನ ಉತ್ಸಾಹಕ್ಕೆ ಭಂಗ ತರಬಾರದೆಂದು ನಾನು ಸುಮ್ಮನೆ ಕೇಳುತ್ತಿದ್ದೆ. ಅವನಿಗೆ ಮತ್ತೆ ನಾನು ದೇಶಿ ಕ್ರಿಸ್ತನಲ್ಲವೆಂದು ಹೇಗೋ ತೋರಿತೆಂದು ಕಾಣುತ್ತೆ. 'ನಿನ್ನಲ್ಲಿ ಬೈಬಲಿಲ್ಲದಿದ್ದರೆ ನಾನು ನಿನಗೊಂದು ದಾನಮಾಡುತ್ತೇನೆ. ಅದು ವೇದಗ್ರಂಥ. ನಿನಗೆ ನಿಮ್ಮ ವೇದ ಓದಿ ತಿಳಿದುಕೊಳ್ಳಲಾಗುವುದಿಲ್ಲ. ನಮ್ಮ ವೇದವನ್ನು ಓದು. ನಿಮ್ಮ ಮತ....' ಹೀಗೆ ಹೇಳುತ್ತ ಹೇಳುತ್ತ ಹಿಂದೂ ಮತ, ಇಸ್ಲಾಂ ಮತ ಎಲ್ಲವನ್ನೂ ಖಂಡಿಸುವುದಕ್ಕೇ ಹೊರಟ; ಅಷ್ಟೇ ಅಲ್ಲ, ಅವುಗಳ ದೂಷಣೆಗೆ ಆರಂಭಿಸಿದ. ನಾನಿನ್ನು ಸುಮ್ಮನೆ ಇರುವುದು ಸರಿಯಲ್ಲವೆಂದು ತೋರಿತು. ಅವನಿಗೆ ಆಗ ಹೇಳತೊಡಗಿದೆ. ನಾನೂ ಬೈಬಲನ್ನು ಶ್ರದ್ಧೆಯಿಂದ ಓದಿದ್ದೇನೆ. ಕೂರಾನಿನ ಆಂಗ್ಲ ಭಾಷಾಂತರವನ್ನೂ ಓದಿದ್ದೇನೆ. ನಮ್ಮ ಮತಗ್ರಂಥಗಳಷ್ಟೇ ಅಲ್ಲ. ಇತರ ಮತಗ್ರಂಥಗಳನ್ನೂ ಓದಿ ತಿಳಿದುಕೊಳ್ಳಲು ಪ್ರಯತ್ನಪಟ್ಟಿದ್ದೇನೆ. ಎಲ್ಲದರಲ್ಲಿಯೂ ಸಿದ್ಧಿ ಒಂದೇ. ದಾರಿ ಬೇರೆ. ಆಯಾ ದೇಶ ಕಾಲ ಅವುಗಳಿಗನುಗುಣವಾಗಿ ಆಯಾ ಮತದ ವಿಭೂತಿಗಳು ದಾರಿ ಹಾಕಿ ಕೊಟ್ಟಿದ್ದಾರೆ. ಯಾವ ಮತ ಹೇಗಾದರೂ ಇರಲಿ. ನಾನು ಹಿಡಿದಿರುವ ಹಾದಿ ಇದು. ಸಾಧ್ಯವಾದ ಮಟ್ಟಿಗೂ ನಾನು ಇತರರಿಗೆ 'ಹೊರೆ' ಆಗದಂತೆ ಜೀವನವನ್ನು ತಳ್ಳುವುದು. ನನ್ನ ಮಾತಿನಲ್ಲಾಗಲಿ ಆಚರಣೆಯಲ್ಲಾಗಲಿ ಇತರರ ಮನಸ್ಸಿಗೆ ನೋವುಂಟಾಗದಂತೆ ಎಚ್ಚರಿಕೆಯಿಂದ ವರ್ತಿಸುವುದು. ಇವೆರಡು ಧ್ಯೇಯಗಳೇ ಸಾಕು ನನಗೆ. ನನ್ನಂತಹ ಸಾಮಾನ್ಯರೆಲ್ಲರಿಗೂ ಇಷ್ಟೇ ಸಾಕೆಂದು ಕಾಣುತ್ತದೆ. ಅವರು ಇತರರಿಗೆ ಸಹಾಯ ಮಾಡಲು ಶಕ್ತಿಯಿದ್ದರೆ ಸಹಾಯ ಮಾಡಲಿ. ತನ್ನ ಶಕ್ತಿ ಮೀರಿ ಸಹಾಯ ಮಾಡಲು ಹೋಗಿ ತಾನು ತೊಂದರೆಯಲ್ಲಿ ಸಿಕ್ಕಿಹಾಕಿಕೊಳ್ಳಬಾರದು. ಅದರಿಂದ ಇತರರಿಗೂ ತೊಂದರೆಯೇ....' ಅವನು ನನಗೆ ಬೋಧಿಸಲು ಪ್ರಾರಂಭವಾದದ್ದು ನಾನೇ ಅವನಿಗೆ ಭಾಷಣ ಕೊಡುವಂತಾಯಿತು. ನನಗೇ ಅನ್ನಿಸಿತು,

ನನ್ನ ಎಲ್ಲೆ ಮೀರಿ ಹೋಗುತ್ತಿದ್ದೇನೆಂದು. ನಾನು ಪುನಃ ಅವನನ್ನು ಕಾಣುವೆನೆಂದು ಹೇಳಿ ಅಲ್ಲಿಂದ ಹೊರಟುಬಿಟ್ಟೆ. ಈಚೆಗೆ ಅವನನ್ನು ಆಗಾಗ ಕಾಣುತ್ತಿರುತ್ತೇನೆ. ಅವನೂ ಬಹಳ ಗೌರವದಿಂದ ಹತ್ತಿರ ಬಂದು ಅರ್ಧ ಗಂಟೆಯಾದರೂ ಆ ಈ ವಿಷಯ ಮಾತನಾಡಿಕೊಂಡು ಹೋಗುತ್ತಾನೆ.

ಪಾರ್ಕಿಗೆ ಒಬ್ಬ ಆಂಗ್ಲ ವೃದ್ಧೆ ಬರುತ್ತಾಳೆ. ನಾನಲ್ಲಿ ಏಕಾಂಗಿಯಾಗಿ ಕುಳಿತು ಓದುತ್ತಿರುವುದನ್ನು ಕಂಡು ಹತ್ತಿರಕ್ಕೆ ಬಂದು 'ಏನು ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದೀರೋ?' ಎಂದು ಕೇಳುತ್ತಾಳೆ 'ಇಲ್ಲ' ಎಂದರೆ 'ಯಾವ ಪುಸ್ತಕ ತಾವು ಓದುತ್ತಿರುವುದು?' ಎಂದ ಕೇಳುತ್ತಾಳೆ. 'ಇಂತಹದು' ಎಂದು ಹೇಳಿದರೆ 'ಕಾದಂಬರಿಯೇ? ಎಂದು ಕೇಳುತ್ತಾಳೆ. 'ನಾಟಕ' ಎಂದು ತಿಳಿಸಿದರೆ 'ಓಹೋ ತಾವು ನಾಟಕ ಓದುತ್ತಿದ್ದೀರಿ, ಕಾದಂಬರಿ ಅಲ್ಲ, ಪರೀಕ್ಷೆಗೆ ತಾವು ಓದುತ್ತಿಲ್ಲ' ಎಂದು ಹೇಳಿಕೊಂಡು ಹೊರಟು ಹೋಗುತ್ತಾಳೆ. ಮತ್ತೆ ತಿರುಗಿ ಅವಳನ್ನು ಅಲ್ಲಿ ಕಾಣುತ್ತೇನೆ. ಆಗಲೂ ಅವಳದು ಅದೇ ಪ್ರಶ್ನೆ. 'ಪರೀಕ್ಷೆಗೆ ನೀವು ಓದುತ್ತಿದ್ದೀರಾ? ಕಾವ್ಯವೇ....' ಸುಮಾರು ಇಲ್ಲಿಗೆ ಇಪ್ಪತ್ತು ಸಲ ಆವಳನಲ್ಲಿ ಕಂಡಿದ್ದೇನೆ. ಯಾವಾಗಲೂ ಅವಳು ಹಾಕುತ್ತಿದ್ದ ಪ್ರಶ್ನೆಗಳು ಅವೇ. ಅವಳಿಗೆ ಮಕ್ಕಳುಗಳಿದ್ದರೇ. .ಯಾವನಾದರೂ ಪರೀಕ್ಷೆಗೆ ಓದಿ ಓದಿ ಕೊನೆಗೆ ಅದರಲ್ಲಿಯೇ ಮೃತ್ಯು ಹೊಂದಿದನೇ. . ಒಂದು ದಿನ ಅವಳನ್ನು ಕೇಳಿ ತಿಳಿದುಕೊಳ್ಳಬೇಕು. ಅವಳ ಹೃದಯದ ಅಂತರಾಳದಲ್ಲಿ ಯಾವ ಹುದುಗು ಇದೆಯೋ! ಯಾರ ಯಾರ ಜೀವನ ಹೇಗೆ ಹೇಗೆ ಇರುತ್ತದೆಯೋ!

ಒಬ್ಬ ಸೇಟು ಪಾರ್ಕಿಗೆ ಬರುತ್ತಾನೆ. ಅವನ ಬಟ್ಟೆ ಬರೆ, ಅವನ ಒಡವು, ಮೋಟರು ಇವುಗಳನ್ನು ನೋಡಿದರೆ ಅವನು ದೊಡ್ಡ ಮನೆತನದವನೆಂದು ಧಾರಾಳವಾಗಿ ಹೇಳಬಹುದು. ಆಗಾಗ ಅವನ ಪತ್ನಿಯೂ ಅವನೊಂದಿಗೆ ಬಂದಿದ್ದಾಳೆ. ರೇಷ್ಮೆಯ ಪಾಜಾಮ, ಅದರ ಮೇಲೆ ತಿಳಿ ನೀಲಿವರ್ಣದ ಇಳಿಬಿದ್ದ ಷರಟು. ತಲೆಯ ಮೇಲೆ ಜರಿಕಿ ಕೆಲಸ

ಮಾಡಿರುವ ಹಗುರವಾದ ರೇಷ್ಮೆಯ ವಲ್ಲಿ. ಅವಕುಂಟನ. ಅವಳ ಕಾಲಿನಲ್ಲಿ ಮೆಟ್ಟಿರುವ ಮುಕಮಲ್ಲಿನ ಮೇಲೆ ಚಿನ್ನದ ಜನಿಕಿ ಕೆಲಸ ಮಾಡಿರುವ ಮೆಟ್ಟುಗಳನ್ನು ನೋಡಿದರೆ ಉಮರಖಯಾಮನ ಸಾಕಿ ನೆನಪಿಗೆ ಬರುವಳು. ಅವಳು ಅವಕುಂಟಣವತಿಯಾಗಿದ್ದರೂ ಒಂದೆರಡು ಸಲ ಅವಳ ಮುಖವನ್ನು ನೋಡುವ ಭಾಗ್ಯ ನನಗೆ ದೊರತಿದೆ. ಏನು ಸೌಂದರ್ಯ ನಿಧಿಯಂತೀರಿ, ಅಮೃತ ಶಿಲೆಯ ಪುತ್ತಳಿಯಂತಿದ್ದಾಳೆ. ಆದರೆ ಆ ಸೇಟಿಗೆ ಏಕಾಂತ ಸ್ಥಳಗಳಲ್ಲಿ ಆಂಗ್ಲ ದಂಪತಿಗಳು ಕುಳಿತು ಸರಸಸಲ್ಲಾಪವಾಡು ತ್ತಿದರೆ ಪೊದೆಯ ಹಿಂದೆ ಅವಿತುನಿಂತು ಅವರನ್ನೇ ನೋಡುವ ಒಂದು ಕಯಾಲು. ಎಷ್ಟೋ ಸಲ ಆ ದಂಪತಿಗಳು ಅವನನ್ನು ಬೈದಿದ್ದಾರೆ; ಹಾಸ್ಯಮಾಡಿದ್ದಾರೆ, ಆದರೆ ಅವನಿಗೆ ನಾಚಿಕೆಯೆನ್ನುವುದೇ ಇಲ್ಲ. ಎಷ್ಟು ಐಶ್ವರ್ಯವಿದ್ದರೇನು ? ರತಿಯಂತಹ ಪತ್ನಿಯಿದ್ದರೇನು ? ಅವನ ಚಾಳಿ ! ಅದರಲ್ಲಿಯೇ ಅವನಿಗೆ ಪರಮಸುಖವಿದೆಯೇನೋ.

ಒಂದು ದಿನ ಇಲ್ಲಿ ಒಂದು ಸಂಗತಿ ನಡೆಯಿತು. ಅಲ್ಲಿಗೆ ಒಬ್ಬನು ಕಡಳೆಕಾಯನ್ನು ಮಾರಲು ತಂದಿದ್ದ. ನಾನು ಕಡಳೆಕಾಯಿ ತಿಂದು ಬಹಳ ವರ್ಷಗಳಾಗಿತ್ತು. ಅವನಿಂದ ಒಂದು ಪಾವು ಕಾಯಿನ್ನು ಅಳಸಿ ತೆಗೆದು ಕೊಂಡು ತಿನ್ನುತ್ತಾ ಕುಳಿತುಕೊಂಡೆ. ನನ್ನ ಎಳೆಯದಿನಗಳು ಜ್ಞಾಪಕಕ್ಕೆ ಬಂದಿತು. ಕಡಳೆಕಾಯಿಯ ಪರಷೆಯ ದಿನ ಶಾಲೆಯ ಗೆಳೆಯರನ್ನೊಡ ಗೂಡಿ ಬಸವನಗುಡಿಗೆ ಹೋಗಿ ಎರಡೋ ಮೂರೋ ಸೇರುಗಳು ಕಡಳೆಯ ಕಾಯನ್ನು ಕಟ್ಟಿಸಿಕೊಂಡು ಬಂಡೆಯ ಮೇಲೆ ಕುಳಿತು ಪಂದ್ಯ ಕಟ್ಟಿ ಕೊಂಡು ತಿನ್ನುತ್ತಿದ್ದಿದು. ಆ ಹೊತ್ತಿಗೆ ಸರಿಯಾಗಿ ಅಲ್ಲೊಂದು ಮಗು ನಾನು ಕುಳಿತಿದ್ದೆಡೆಗೆ ಬಂತು. ಅದಕ್ಕೆ ಐದಾರು ವರ್ಷಗಳಿರಬಹುದು. ಬಹಳ ಮುದ್ದಾಗಿತ್ತು. ಅದನ್ನು ಮಾತನಾಡಿಸಿ ಅದಕ್ಕೆ ಎರಡು ಕಾಯಿ ಗಳನ್ನು ಸುಲಿದುಕೊಟ್ಟೆ. ಅಷ್ಟು ಹೊತ್ತಿಗೆ ಅದರ ತಾಯಿ ಎಲ್ಲಿದ್ದಳೋ 'ಸಾರಾ, ಸಾರಾ,' ಎಂದು ಅವಳ ಹೆಸರನ್ನು ಹಿಡಿದು ಕರೆಯುತ್ತಾ ನಾವಿದ್ದೆಡೆಗೆ ಬಂದಳು. ಮಗುವನ್ನೊಡನೆ ಹತ್ತಿರಕ್ಕೆ ಎಳೆದುಕೊಂಡು ಅದನ್ನು ಬಯ್ದು, ಅದರ ಕೈಯಲ್ಲಿದ್ದ ಬೀಜಗಳನ್ನು ಕಿತ್ತುಕೊಂಡಳು.

ನನಗೆ ಆಗ ಮೈ ಉರಿದುಹೋಯಿತು. ಮಗುವಿನೊಂದಿಗೆ ಹಿಂತಿರುಗಿದಳು. ಮಗುವು ನನ್ನ ಕಡೆಯೇ ನೋಡುತ್ತಿತ್ತು. ಅವಳು ಮಗುವಿನಿಂದ ಕಿತ್ತುಕೊಂಡ ಬೀಜಗಳನ್ನು ಬಾಯಿಗೆ ಹಾಕಿಕೊಂಡಿದ್ದನ್ನು ನೋಡಿದೆ. ಆಗ ಒಂದು ಹಿಕಮತ್ತು ಮಾಡಿದೆ. ನನ್ನಲ್ಲಿ ಉಳಿದಿದ್ದ ಕಡಳೆಯ ಕಾಯೆಲ್ಲವನ್ನೂ ಒಂದು ಕಾಗದದಲ್ಲಿ ಪಟ್ಟಣ ಕಟ್ಟಿ ಆ ಮಗುವಿಗೆ ಸನ್ನೆ ಮಾಡಿ ಹತ್ತಿರಕ್ಕೆ ಕರೆದು ಅದರ ಕೈಗೆಕೊಟ್ಟು ಆ ಜಾಗಾದಿಂದ ಹೊರಟು ಬಿಟ್ಟೆ. ಆಕೆ ಹಿಂತಿರುಗಿ ನನ್ನನ್ನೇ ದುರುದುರನೆ ನೋಡುತ್ತಾ ನಿಂತಿದ್ದಳು. ಆಕೆಯೇ ಆ ಕಡಳೆಯಕಾಯಿಯೆಲ್ಲವನ್ನೂ ತಿಂದಳೊ, ಮಗುವಿಗೆ ಸ್ವಲ್ಪವಾದರೂ ಕೊಟ್ಟಳೋ ನನಗದು ತಿಳಿಯದು. ಆದರೆ ಈಚೆಗೆ ಅವಳನ್ನಾವಾಗಲಾದರೂ ಪಾರ್ಕಿನಲ್ಲಿ ಸಂಧಿಸಿದಾಗ ಅವಳ ಮುಖದ ಮೇಲೆ ಮುಗುಳುನಗೆ ಮೂಡುತ್ತದೆ. ನನಗೂ ನಗು ಬರುತ್ತದೆ; ಅವಳ ಸೋಗಿಗೆ.

ಈ ಪಾರ್ಕಿನಲ್ಲಿ ನನಗೆ ಗೆಳೆಯರಾದವರು ಒಬ್ಬರೇ ಒಬ್ಬರು. ಅವರ ಹೆಸರು ಎಂ. ಮಿಡಲ್‌ಟನ್ ಎಂದು. ಆತನಿಗೆ ಎಪ್ಪತ್ತು ವರ್ಷಗಳು. ಜಹಜಿನಲ್ಲಿ ಇಂಜಿನಿಯರಾಗಿದ್ದು ತನ್ನ ಜೀವಮಾನವನ್ನೆಲ್ಲಾ ಸಮುದ್ರದ ಮೇಲೆ ಕಳೆದಿದ್ದಾನೆ. ಕೆಲಸದಿಂದ ನಿವೃತ್ತನಾದ ಮೇಲೆ ಕನಡಾದಲ್ಲಿ ಜಮೀನು ತೆಗೆದುಕೊಂಡು ಅಲ್ಲಿ ನೆಲಯಿಸಿದ್ದನಂತೆ. ಅಲ್ಲಿ ದೇಶೀಯರ ಕಾಟ ಜಾಸ್ತಿಯಾಗಲು ಭೂಮಿಕಾಣಿಯನ್ನು ಮಾರಿಕೊಂಡು ಬೆಂಗಳೂರಿಗೆ ಬಂದು ನೆಲಯಿಸಿದ್ದಾನೆ. ಅವನ ಪರಿಚಯವಾದದ್ದು ಹೀಗೆ. ನನ್ನ ಮಿತ್ರರೊಬ್ಬರು ಇಂಜಿನಿಯರು ಬೆಂಗಳೂರಿನಲ್ಲಿಯೇ ಇದ್ದರು. ಪ್ರತಿನಿತ್ಯವೂ ಸಂಜೆಯಾಗುತ್ತಲೇ ನನ್ನ ಕಚೇರಿಗೆ ಬರುತ್ತಿದ್ದರು. ಒಡನೆ ಇಬ್ಬರೂ ಕೂಡಿ ಪಾರ್ಕಿಗೆ ಬರುತ್ತಿದ್ದೆವು. ಅವರು ಒಂದು ವರ್ಷದ ನಂತರ ಬೆಂಗಳೂರನ್ನು ಬಿಟ್ಟು ಹೊರಟುಹೋದರು. ನಾನೊಬ್ಬನೇ ಆದೆ. ಮೊದಲು ಪಾರ್ಕಿಗೆ ನಾನೊಬ್ಬನೇ ಹೋಗಿ ಕುಳಿತುಕೊಳ್ಳುತ್ತಿದ್ದೆ. ನಡುವೆ ಅವರು ಬಂದರು. ಹೊರಟುಹೋದರು. ಕೊನೆಗೆ ನನಗೆ ನಾನೇ ಆದೆ. ಪಾರ್ಕಿನಲ್ಲಿ ಅದೇ ಜಾಗದಲ್ಲಿ ಏಕಾಂಗಿಯಾಗಿ ಕುಳಿತಿರುತ್ತಿದೆ. ಎಂ. ಮಿಡಲ್‌ಟನ್ನ ತನ್ನ ಸ್ನೇಹಿತರೊಂದಿಗೆ ಬಂದು ಮತ್ತೊಂದು

ಕಲ್ಲು ಬೆಂಚಿನ ಮೇಲೆ ಪ್ರತಿನಿತ್ಯವೂ ಕುಳಿತುಕೊಳ್ಳುತ್ತಿದ್ದರು. ಅಂದು ಆವನ ಗೆಳೆಯರೂ ಅವನ ಕೈಬಿಟ್ಟಿದ್ದರು. ಆವನೂ ಒಬ್ಬನೇ ಇದ್ದ. ನಾನೂ ಒಬ್ಬನೇ ಕುಳಿತಿದ್ದೇನೆ. ಒಂದೆರಡು ಸಲ ಒಬ್ಬರನ್ನೊಬ್ಬರು ನೋಡಿದೆವು. ಮೊದಲು ತನ್ನ ಜಾಗ ಬಿಟ್ಟು ಇನ್ನೊಬ್ಬನು ಇದ್ದಲ್ಲಿಗೆ ಹೋಗಿ ಅವನೊಡನೆ ಮಾತನಾಡಿಸುವುದಕ್ಕೆ ಇಬ್ಬರಿಗೂ ಬಿಗುಮಾನ. ಆದರೆ ಮಾತನಾಡಿಸಬೇಕೆಂದು ಆಸೆ. ಕೊನೆಗೆ ಆತನೇ ಎದ್ದು ನಾನಿದ್ದ ಲ್ಲಿಗೆ ಬಂದು ಮಾತಿಗೆ ಆರಂಭಿಸಿದ.

'ನಿಮ್ಮ ಸ್ನೇಹಿತರೆಲ್ಲಿ?'

'ನಿಮ್ಮ ಸ್ನೇಹಿತರೆಲ್ಲಿ?'

ಮಾತಿಗೆ ಮೊಲಾಯಿತು. ಸ್ನೇಹ ಬೆಳೆಯಿತು. ಅವನು ಸಮುದ್ರದ ಮೇಲಿನ ಅನೇಕ ಕತೆಗಳನ್ನು ಹೇಳಿದ್ದಾನೆ. ಅವನ ಚರಿತ್ರೆ ಅದ್ಭುತ ವಾಗಿದೆ. ಅವನೇ ಆರೂವರೆ ಅಡಿ ಎತ್ತರವಿದ್ದಾನೆ. ಎಪ್ಪತ್ತು ವರ್ಷ ವಯಸ್ಸಾಗಿದ್ದರೂ ಸ್ವಲ್ಪವೂ ಬೆನ್ನು ಬಗ್ಗಿಲ್ಲ. ಅವನ ಸಾಹಸ ಕೃತ್ಯ ಗಳನ್ನು ಅವನೇ ವರ್ಣಿಸಬೇಕು. ಕೈಲಿದ್ದ ಕೋಲನ್ನು ನೆಲಕ್ಕೂರಿ ಅದರ ಮೇಲೆ ಆತು ನಿಂತು ಸಿಗಾರನ್ನು ಸೇದುತ್ತಾ ಕತೆಗೆ ಮೊದಲುಮಾಡ ಬೇಕು. ಕೋಲರಿಡ್ಜಿನ 'ಎನ್‌ಷಂಟ್‌ಮುರಿನರ'ಂತೆ ನನ್ನನ್ನು ಆಕರ್ಷಿಸಿ ಬಿಟ್ಟಿದ್ದಾನೆ. ಅವನು ಹೇಳಿರುವ ಕತೆಗಳ ಪೈಕಿ ಕೆಲವನ್ನಾದರೂ ನಾನು ಇಲ್ಲಿ ಹೇಳಲಿ ಎಂದು ತಾವು ಅಪೇಕ್ಷಿಸಬಹುದು. ನನಗೂ ಆಸೆಯಿದೆ. ಆದರೆ ನಾನು ಹೇಳುವುದಕ್ಕಿಂತ ಅವರಿಂದಲೇ ಹೇಳಿಸಿದರೆ ನಾನಿಲ್ಲಿ ಅವರ ಬಗ್ಗೆ ಬರೆದ ಮಾತು ಮನದಟ್ಟಾಗಬಹುದೆಂದೆಣಿಸಿ ಕೈ ತಡೆದಿದ್ದೇನೆ. ನೀವು ಬೆಂಗಳೂರಿಗೆ ಬನ್ನಿ. ನಿಮ್ಮನ್ನು ನಾನು ಕೆನ್‌ಸಿಂಗ್‌ಟನ್ ಪಾರ್ಕಿಗೆ ಕರೆತಂದು ಮಿ. ಮಿಡಲ ಟನ್ನಿನ ಪರಿಚಯ ಮಾಡಿಕೊಡುತ್ತೇನೆ. ಅವನ ಚಿತ್ರಮಯ ಜೀವನವನ್ನು ಅವನ ಬಾಯಿಯಲ್ಲಿಯೇ ಕೇಳುವಿರಂತೆ. ಇನ್ನು ಈ ಪ್ರಬಂಧವನ್ನು ಮುಗಿಸಿಬಿಡುತ್ತೇನೆ. ಆ ಪಾರ್ಕಿನ ವಿಷಯ ಇಷ್ಟು ಹೇಳಿ ಪಾರ್ಕಿನ ಕಾವಲುಗಾರನ ವಿಚಾರ ಹೇಳದೆ ಹೋಗು ತ್ತಿದ್ದೆನಲ್ಲಾ! ಅಗೋ ಅಲ್ಲಿ ಅವನು ಬರುತ್ತಿದ್ದಾನೆ. ಪಾರ್ಕಿಗೆ ನಾನು

ಬೆಳಿಗ್ಗೆ ಬರಲಿ, ಸಂಜೆ ಬರಲಿ ಅವನು ನಾನಿದ್ದೆಡೆಗೆ ಬಂದು ಮಿಲಟರಿ ಸಲಾಂ ಹೊಡೆದು ಹೋಗುವುದು ವಾಡಿಕೆ—ಅಲ್ಲ ಅವನು ನನಗೆ ಕೊಡುತ್ತಿದ್ದ ಗೌರವ. ಅವನು ಸೈನ್ಯದಲ್ಲಿದ್ದು ಮಹಾಯುದ್ಧದಲ್ಲಿ ಭಾಗವಹಿಸಿ ನಿವೃತ್ತನಾಗಿರುವ ಸೇನಾಳು. ಮುದಕ ಆದರೂ ಕಟ್ಟಾಳು. ಅವನ ಹೆಸರು ರಣಧೀರಸಿಂಗ್! ಓ ಹತ್ತಿರಕ್ಕೇ ಬಂದ. ಹೊಡೆದ ಮಿಲಿಟರಿ ಸಲಾಂ.

'ಸಲಾಂ ಸಾಹೇಬ'

'ಸಲಾಂ'



# ಮುಗಿಲುಗಳು

ಎಂ. ವಿ. ಸೀತಾರಾಮಯ್ಯ

ಮುಗಿಲಿಲ್ಲದ, ತಿಳಿಯಾದ, ಆಳವಾದ ನೀಲಿಯ ಆಕಾಶವನ್ನು ನೋಡಿ ಮೂಕನಾಗಿ ಹೋಗಿದ್ದೇನೆ. ಆ ನೀಲಿಯ ಆಕಾಶವು ಅಪಾರವಾದುದು, ಅದರ ವಿಸ್ತಾರವನ್ನು ಕಂಡವರಾರೂ ಇಲ್ಲ. ಅದರ ಆಳವಂತೂ ನಮ್ಮ ಬಗೆಗೆ ನಿಲುಕದು; ನಮ್ಮ ಕಣ್ಣು ಹರಿಯುವಷ್ಟೂ ಆ ನೀಲಿಯ ಆಳ ಹೆಚ್ಚುತ್ತ ಹೋಗುತ್ತದೆ. ಎಷ್ಟೋ ವೇಳೆ ನಾನು ಆ ನೀಲಿಮೆಯ ಆಳದಲ್ಲಿ ಮುಳುಗಿರುವೆನಾದರೂ ಅಲ್ಲಿಂದ ಎದ್ದು ತೇಲಿಕೊಂಡು ಬಂದ ಮೇಲೆ ಮುಳುಗಿದ್ದ ಅರಿವು ಮಾತ್ರ ಇರುತ್ತದೆಯೇ ಹೊರತು ಆ ಆಳದ ಅರಿವಿರುವುದಿಲ್ಲ. ಕಲ್ಪನಾತೀತವಾದ ಇಂಥ ವಿಶಾಲ ನೀಲಗಗನವನ್ನು ನೋಡಿದಾಗಲೆಲ್ಲ ಮೂಕಭಾವದಿಂದಿರುತ್ತೇನೆ; ಅದೇ ಆಕಾಶದಲ್ಲಿ ಮುಗಿಲಿನ ತಂಡವೊಂದನ್ನು ಕಂಡೊಡನೆಯೇ ನನ್ನ ಕಲ್ಪನೆ ಕುದುರುತ್ತದೆ, ಬಗೆ ಗರಿಗೂಡಿ ಬಾನಿಗೇರುತ್ತದೆ. ಇದು ಇಂದಿನ ಮಾತಲ್ಲ, ಬಲು ಹಿಂದಿನ ಮಾತು: ನನ್ನ ಬಾಲ್ಯದ ಮಾತು. ಬಾಲ್ಯದಲ್ಲಿ ನಾನು ಚಂಡಿ ಹಿಡಿದಾಗ ನನ್ನ ತಾಯಿ ಬೀದಿಯ ಬಾಗಿಲಿಗೆ ನನ್ನನ್ನು ಕರೆದುಕೊಂಡು ಹೋಗಿ ಚಂದ್ರನನ್ನು ತೋರಿಸುತ್ತಿದ್ದರಂತೆ. ಚಂದ್ರನನ್ನು ತೋರಿಸಿದ ಮೇಲೂ ನಾನು ರಗಳೆಬಿಡುತ್ತಿರಲಿಲ್ಲವಂತೆ. ಅಂದೇ ನನಗೆ ಚಂದ್ರನ ಕೆಳೆಯಾದುದು. ನಾನು ಸ್ವಲ್ಪ ದೊಡ್ಡವನಾದ ಮೇಲೆ, ನನಗೆ ನಾಲ್ಕೈದು ವರ್ಷವಿದ್ದಾಗ, ನನ್ನ ತಾಯಿ ನನ್ನನ್ನು ಸಂತೈಸುತ್ತಿದ್ದಂತೆಯೇ ನನ್ನ ತಂಗಿಗೂ ಚಂದ್ರನನ್ನು ತೋರಿಸಿ ಸಂತೈಸುತ್ತಿದ್ದರು. ನನ್ನ ತಂಗಿ ಎಷ್ಟೋ ವೇಳೆ ಆ ಬಾಲಚಂದ್ರನನ್ನು ನೋಡಿ ಅಳು ನಿಲ್ಲಿಸುತ್ತಿದ್ದಳು; ತಾನು ಹಾಲು ಕುಡಿಯುತ್ತಿದ್ದ ಬೆಳ್ಳಿ ಬಳಲೆಯನ್ನು ನೆನೆದು ಅಳುತ್ತಿದ್ದಳೇನೋ !-

ನಾನು ಕಾಣೆ. ಅಂತೂ ಚಂದ್ರನನ್ನು ನೋಡಿ ಮಕ್ಕಳು ನಲಿದು ಹಿಗ್ಗು ವುದು ಸಾಮಾನ್ಯವಾದ ವಿಷಯ, ಆಶ್ಚರ್ಯವಲ್ಲ. ಒಂದು ದಿನ, ಹಾಗೆ ಚಂದ್ರನನ್ನು ನೋಡುತ್ತಿದ್ದಾಗ ಒಂದೆರಡು ಬಿಳಿಮುಗಿಲುಗಳು ಚಂದ್ರನ ಮೇಲೆ ತೇಲಿ ಹೋದುವು; ತುಸುಹೊತ್ತಿನ ಮೇಲೆ ಕಣ್ಮರೆಯಾದುವು. ನನ್ನ ಮನವೂ ಆ ಮುಗಿಲುಗಳ ಜೊತೆಯಲ್ಲಿಯೇ ತೇಲಿಹೋಯಿತು. ಅಂದೇ ನನಗೆ ಮುಗಿಲುಗಳ ಕೆಳೆಯಾದುದು, ಅವುಗಳ ವಿಷಯ ವಾಗಿ ಒಂದು ವಿಧವಾದ ಕುತೂಹಲವುಂಟಾದುದು. ಆ ಮುಗಿಲುಗಳು ಎಲ್ಲಿಂದಲೋ ಬಂದುವು, ಎಲ್ಲಿಗೋ ಹೋದುವು.

ಅಂದಿನಿಂದಲೂ ಮುಗಿಲುಗಳನ್ನು ನೋಡುತ್ತಿರುವುದೇ ನನ ಗೊಂದು ಹುಚ್ಚಾಗಿಹೋಗಿದೆ. ಎಷ್ಟೊ ಮುಗಿಲುಗಳು ಎಲ್ಲಿಂದಲೋ ಬಂದು ಎಲ್ಲಿಗೋ ಹೋಗಿವೆ. ನಾವು ಎಲ್ಲಿಂದ ಬಂದೆವು—ಎಲ್ಲಿಗೆ ಹೋಗು ತ್ತೇವೆ ಎಂಬ ತತ್ತ್ವವಿಚಾರ ಎಷ್ಟು ಗಹನವಾದುದೋ ಮುಗಿಲುಗಳು ಎಲ್ಲಿಂದ ಬಂದು ಎಲ್ಲಿಗೆ ಹೋಗುತ್ತವೆ ಎಂಬ ಸಾಮಾನ್ಯವಿಚಾರ ಕೂಡ ಅಷ್ಟೇ ಗಹನವಾದುದೆಂದು ನನ್ನ ಭಾವನೆ. ಅವು ಎಲ್ಲಿಂದಲಾದರೂ ಬರಲಿ, ಎಲ್ಲಿಗಾದರೂ ಹೋಗಲಿ, ಅವು ನನ್ನ ಒಂದೊಂದು ಗಳಿಗೆಯ ಗೆಳೆಯರಾಗಿ, ಬಯಕೆಯ ಬಿಂಬಗಳಾಗಿ ಕರಗಿ ಹೋಗಿವೆ. ಅವುಗಳಿಗಾಗಿ ನಾನು ನಿಜವಾಗಿಯೂ ಕೊರಗಿದ್ದೇನೆ. ಆದರೆ ಒಂದು ಸಮಾಧಾನ: ನಾನು ಬದುಕಿರುವವರೆಗೂ ಇನ್ನೂ ಎಷ್ಟೋ ಲೆಕ್ಕವಿಲ್ಲದಷ್ಟು ಮುಗಿಲುಗಳನ್ನು— ನನ್ನ ಬಯಕೆಯ ಬಿಂಬಗಳನ್ನು—ಕಾಣಬಹುದು ಎಂದು.

ಇದೇನು ಮುಗಿಲುಗಳ ಮೇಲೆ ಇಷ್ಟು ಮಮತೆ? ಎಂದು ಕೇಳ ಬಹುದು. ಹೌದು, ನನಗೆ ಮುಗಿಲುಗಳ ಮೇಲೆ ಮಮತೆ ಬಹಳ. ಈ ಮಮತೆ ಹಿಂದಿನಿಂದ ಬಂದುದು. ನನ್ನ ಎಳೆತನದಲ್ಲಿ ನನಗೆ ಬೇಸರವಾದಾಗ ಒಮ್ಮೊಮ್ಮೆ ಹುಡುಗರೊಡನೆ ಆಟವಾಡಲೆಳಸಿ ಆಟಕ್ಕೆ ಹೋಗುತ್ತಿದ್ದೆ ಒಮ್ಮೊಮ್ಮೆ ಅಮ್ಮನನ್ನು ಕಥೆ ಹೇಳೆಂದು ಪೀಡಿಸುತ್ತಿದ್ದೆ. ಆಟಕ್ಕೆ ಹುಡುಗರೂ ಸಿಕ್ಕದೆ,—(ಅನೇಕ ವೇಳೆ ಸಿಕ್ಕುತ್ತಿರಲಿಲ್ಲ; ಅವರು ಶಾಲೆಗೆ ಹೋಗಿರುತ್ತಿದ್ದರು. ನಾನು ಮಾತ್ರ ಶಾಲೆಗೆ ತಪ್ಪಿಸಿಕೊಂಡು

ಮನೆಯಲ್ಲಿಯೇ ಇರುತ್ತಿದ್ದೆ),ಅಮ್ಮ ಕಥೆ ಹೇಳದಿರಲು ಕೋಪಿಸಿಕೊಂಡು ನಮ್ಮ ಮನೆ ಮಹಡಿಯ ಬಿಸಿಲುಮಚ್ಚಿನ ಮೇಲೆ ಹೋಗಿ ಒಬ್ಬನೇ ನಿಲ್ಲುತ್ತಿದ್ದೆ. ಬಿಸಿಲುಮಚ್ಚಿನ ಮೇಲೆ ನಿಂತು ದಿಟ್ಟಿಸಿ ನೋಡುತ್ತ ನೋಡುತ್ತ ಕೋಪವೆಲ್ಲ ಕರಗಿ ಎಲ್ಲೋ ಮಾಯವಾಗುತ್ತಿತ್ತು. ಎದುರಿನಲ್ಲಿ ಗುಂಪುಗುಂಪಾಗಿ ತೆಂಗಿನ ಮರಗಳು; ದೂರದಲ್ಲಿ ಚಾಮುಂಡಿ ಬೆಟ್ಟದ ಮೇಲ್ಭಾಗ; ಅವುಗಳ ಮೇಲೆ ನಾನಾತೆರನಾಗಿ ತೇಲಿಹೋಗುತ್ತಿದ್ದ ಬಿಳಿಮುಗಿಲಿನ ಮಾಲೆ. ಎಂದು ನೋಡಿದರೂ ಅದೇ ತೆಂಗಿನ ತೋಪು, ಅದೇ ಬೆಟ್ಟದ ನೆತ್ತಿ; ಇಂದಿಗೂ ಅದೇ, ಸ್ವಲ್ಪವೂ ವ್ಯತ್ಯಾಸವಿಲ್ಲ. ಈ ಮುಗಿಲುಗಳಾದರೋ ಒಂದು ದಿವಸವಿದ್ದಂತೆ ಮತ್ತೊಂದು ದಿನವಿಲ್ಲ, ಒಂದು ನಿಮಿಷವಿದ್ದಂತೆ ಮತ್ತೊಂದು ನಿಮಿಷವಿಲ್ಲ. ಆ ಮುಗಿಲುಗಳನ್ನು ನೋಡುತ್ತ ನೋಡುತ್ತ ಅವುಗಳ ಮಾರ್ಪಾಟವನ್ನನುಸರಿಸಿ ನನ್ನ ಕಲ್ಪನೆ ಭಾವನೆಗಳೂ ಬದಲಾಯಿಸುತ್ತಿದ್ದುವು. ಒಮ್ಮೆ ಅವು ಹತ್ತಿಯ ರಾಶಿಯಂತೆ ಕಾಣುತ್ತಿದ್ದುವು: ಹತ್ತಿಯ ಬೆಳೆಯನ್ನೇಕೆ ಬೆಳೆಯಬೇಕು, ಗಾಳಿಗೆ ತೂರಿಕೊಂಡು ಹೋಗುವ ಈ ಹತ್ತಿಯನ್ನು ಹಿಡಿದೊಟ್ಟಿ, ನೂಲು ಮಾಡಿ ನೇದರೆ ಪ್ರಪಂಚಕ್ಕೆ ಬಟ್ಟೆಯ ಬರವೇ ಇರುವುದಿಲ್ಲ, ಬರಿಬತ್ತಲೆ ಸಾಯುತ್ತಿರುವ ಬಡಬಗ್ಗರಿಗೆ ಬಿಟ್ಟಿ ಬಟ್ಟೆಯನ್ನು ಉದಾರವಾಗಿ ದಾನ ಮಾಡಬಹುದಲ್ಲ ಎನಿಸುತ್ತಿತ್ತು; ಒಮ್ಮೊಮ್ಮೆ ಅವು ಮೃಗಗಳ ಆಕಾರ ತಳೆಯುತ್ತಿದ್ದುವು: ಎಷ್ಟೋ ಸಲ ಅವು ಹಾರುವ ಬೆಳ್ಗುದುರೆಗಳಂತೆ ಕಂಡಿವೆ; ನಮ್ಮ ತಾಯಿ ಹೇಳುತ್ತಿದ್ದ ಕಥೆಗಳಲ್ಲಿ ಬರುವ ರೆಕ್ಕೆಗಳುಳ್ಳ ಶ್ವೇತಾಶ್ವಗಳು ಇವೇ ಇರಬೇಕೆಂದು ಅನ್ನಿಸುತ್ತಿತ್ತು. ನಾನೊಬ್ಬ ರಾಜಕುಮಾರನಾಗಿದ್ದರೆ, ಆ ಕುದುರೆಗಳಲ್ಲೊಂದನ್ನು ಹಿಡಿದು ತಂದು, ಅದನ್ನೇರಿ, ಎಲ್ಲಿಗೆಂದರೆ ಅಲ್ಲಿಗೆ ಹೋಗಬಹುದಾಗಿತ್ತು. ರಾಜಕುಮಾರನಾಗದೆಯೇ ನಾನು ಮುಗಿಲ್ಗುದುರೆಯೊಂದರ ಮೇಲೆ ಕುಳಿತು ಪ್ರಪಂಚವನ್ನೆಲ್ಲಾ ಸುತ್ತಿದವನಂತೆ ಬಗೆದಿದ್ದೇನೆ. ನಾನು ಯಾವ ಮುಗಿಲನ್ನು ರೆಕ್ಕೆಯ ಕುದುರೆಯೆಂದು ಬಗೆಯುತ್ತಿದ್ದೆನೋ ಅದು ಕಣ್ಮರೆಯಾದಾಗ ಮಾತ್ರ ನನ್ನ ಕಲ್ಪನೆಯೂ ರೆಕ್ಕೆಮುರಿದು ಕೆಡೆದು ಬೀಳುತ್ತಿತ್ತು. ಆಗ

ಸ್ವಲ್ಪ ಕೊರಗುತ್ತಿದ್ದೆ; ಒಮ್ಮೊಮ್ಮೆ ಸನ್ನಲ್ಲಿ ನಾನು ಅತ್ತಿದ್ದೇನೆಂದರೆ ಯಾರೂ ನಂಬದಿರಬಹುದು. ಆದರೆ ನನ್ನ ಬಾಲ್ಯದ ಬಂಧುಗಳಾದ ಮುಗಿಲುಗಳು ನನ್ನ ಮನೋವ್ಯಥೆಯನ್ನು ಸಹಿಸಲಾರದವಾಗಿದ್ದು ವೇನೋ! ಕೂಡಲೆ ಮತ್ತೊಂದು ಪೆಮ್ಮುಗಿಲು ಎಲ್ಲಿಂದಲೋ ಬಾಂದಳ ದಿಂದ ಬಿರುಸಾಗಿ ಬಂದು, ಗಾಳಿ ನಿಲ್ಲಲು, ನನ್ನ ಮುಂದೆ ಒಯ್ಯನೊಯ್ಯನೆ ನಡೆದು ಹೋಗುತ್ತಿತ್ತು. ಅದು ಪೆಮ್ಮುಗಿಲಲ್ಲ; ನನ್ನ ಭಾಗದ ಐರಾವತ. ಅದನ್ನು ನೋಡಿ ಸಮಾಧಾನಹೊಂದುತ್ತಿದ್ದೆ; ಸಂತೋಷಗೊಳ್ಳುತ್ತಿದ್ದೆ. ರೆಕ್ಕೆಯ ಕುದುರೆ ಹೋದರೆ ಹೋಯಿತು. ಇಷ್ಟಕ್ಕೂ ಅದರ ಸಹವಾಸ ವೇಕೆ? ಅದು ಎಲ್ಲಿಯಾದರೂ ನನ್ನನ್ನು ತೆಗೆದುಕೊಂಡು ಹೋಗಿ ಕೆಡವಿ ಬಿಟ್ಟರೆ? ನನಗೆ ಈ ಐರಾವತನೇ ಸಾಕು. ಎಷ್ಟು ಬಿಳುಪು, ಎಷ್ಟು ಭಾರಿ ಯೊಡಲು! ಹಾಲುಗಲ್ಲಿನ ಗುಡ್ಡವೊಂದನ್ನೇ ಕಡೆದಿಟ್ಟಂತಿದೆ! ಎಷ್ಟು ನೀಳವಾದ ಸೊಂಡಿಲು! ಬೆನ್ನಿನ ಮೇಲೆ ಬೆಳ್ಳಿಯ ಅಂಬಾರಿ ಬೇರೆ! ಸೊಂಡಿ ಲಿನಲ್ಲಿ ಬಿಳಿ ಹೂಮಾಲೆಯನ್ನು ಎತ್ತಿ ಹಿಡಿದು ಸನಗಾಗಿ ಕಾದಿದೆ!.... ನಮ್ಮ ಮನೆಯ ಹತ್ತಿರ ಐರಾವತವನ್ನೇರಿ ನಿಧಾನವಾಗಿ ಹೊಗುತ್ತಿದ್ದೆ.. ಆ ಗಜಾರೋಹಣವಿಹಾರವನ್ನು ವರ್ಣಿಸಲು ನನಗೆ ಮಾತುಗಳು ಸಾಲವು. ಆ ವಿಹಾರವು ಚಾಮುಂಡಿಯ ಬೆಟ್ಟದ ಶಿಖರದಲ್ಲಿ ಕೊನೆಗಾಣುತ್ತಿದ್ದಿತು. ಅಲ್ಲಿ ಐರಾವತವನ್ನಿಳಿಯುತ್ತಿದ್ದೆ; ಕೂಡಲೇ ಅದು ಎಲ್ಲೊ ಕಣ್ಮರೆಯಾಗು ತ್ತಿತ್ತು. ಅದು ಕಣ್ಮರೆಯಾದ ದುಃಖಕ್ಕಿಂತಲೂ ಚಾಮುಂಡಿಯ ಬೆಟ್ಟದ ಶಿಖರದಿಂದ ಹಿಂದಿರುಗಿ ಬರುವುದು ಹೇಗೆ ಎಂಬ ಚಿಂತೆ ಹೆಚ್ಚಾಗುತ್ತಿತ್ತು. ಹಾಗೇ ಚಿಂತಿಸುತ್ತಿರಲಾಗಿ ಇದ್ದೆಡೆಯಲ್ಲಿಯೇ ಇರುತ್ತಿದ್ದೆ!

ಕಾರ್ಗಾಲದಲ್ಲಿ ಕಾಳಮೇಘಪರಂಪರೆಗಳು ಬಾನ್ಬಟ್ಟೆಯಲ್ಲಿ ಹಾಯ್ದು ಹೋಗುತ್ತಿದ್ದುವು; ಅವುಗಳೊಡನೆ ವಿಹರಿಸುವ ಕೆಚ್ಚು ನನ ಗಿರಲಿಲ್ಲ. ನಮ್ಮ ಮನೆಯ ಬಿಸಿಲುಮಚ್ಚಿನಿಂದಲೇ ಗಜಶಾಲೆಯಲ್ಲಿ ಕಟ್ಟಿದ್ದ ಗಜಪಂಕ್ತಿಯನ್ನು ನೋಡಬಹುದಾಗಿತ್ತು, ಈಗಲೂ ನೋಡ ಬಹುದು. ಈ ನೆಲದಾನೆಗಳೆಲ್ಲಿ, ಆ ಬಾನಿನಾನೆಗಳೆಲ್ಲಿ! ಸರಪಳಿಗಳಿಂದ ಬಿಗಿಸಿಕೊಂಡು ಜೊಂಡು ತಿನ್ನುತ್ತ ನಿಶ್ಚಲವಾಗಿ ನಿಂತಿರುವ ಆನೆಗಳೆಲ್ಲಿ,

ವಿಶೃಂಖಲ ವಿಹಾರೋನ್ಮತ್ತ ಗಜಗಳು ಅವೆಲ್ಲಿ! ಅವು ಮೇಲಿರುವುದೇ ಮೇಲು, ಕೆಳಗಿಳಿದರೆ ನಮಗೆ ಉಳಿಗಾಲವಿಲ್ಲವೆಂದುಕೊಳ್ಳುತ್ತಿದ್ದೆ. ಆದರೂ ಪಳಗಿಸಿದರೆ ಬಹಳ ಉಪಯೋಗಕರ; ಇಂಥಾ ನೂರು ಆನೆಗಳಿದ್ದರೆ ಸಾಕು, ಪ್ರಪಂಚವನ್ನೇ ಜಯಿಸಿಬಿಡಬಹುದು, ಎಂದು ಬಗೆಯುತ್ತಿದ್ದೆ.

ಒಮ್ಮೊಮ್ಮೆ ಈ ಕರಿಮೋಡಗಳ ತಂಡ ನನಗೆ ಬಹಳ ಭಯಂಕರವಾಗಿ ಕಾಣುತ್ತಿದ್ದುವು. ನನ್ನ ತಾಯಿ ನನಗೆ ಎಷ್ಟೋ ದಿವಸ ಪಿಶಾಚಿ, ದೆವ್ವ, ಭೂತಗಳ ಕಥೆ ಹೇಳುತ್ತಿದ್ದರು; ಆ ಕಥೆಗಳನ್ನು ಕೇಳುತ್ತಿದ್ದರೆ ಭಯಮಿಶ್ರವಾದುದೊಂದು ಕುತೂಹಲ. ಕಥಾಪ್ರಪಂಚಕ್ಕೆ ಸೇರಿದ ಆ ಪಿಶಾಚಿ ಭೂತಗಳು ಈ ಕರಿ ಮೋಡಗಳಲ್ಲಿ ಮೂರ್ತಿವೆತ್ತಂತಿದ್ದು, ವಾಸ್ತವ ಪ್ರಪಂಚದಲ್ಲಿ ಕಂಡಾಗ ಬೆದರಿ ಒಳಗೆ ಓಡಿಹೋಗಿದ್ದೇನೆ. ಕಥೆಯ ಪಿಶಾಚಿಗಳಂತೆ ಇವೂ ಬಾಧೆ ಮಾಡುವುದಿಲ್ಲವೆಂದು ಬಹಳ ಕಾಲದ ಮೇಲೆ ಅರಿತೆ. ಆ ಹೊತ್ತಿಗೆ ನನ್ನ ಭಾವನೆಯ ದೃಷ್ಟಿಯೂ ಕೊಂಚ ಬದಲಾಗಿತ್ತು. ನನಗೆ ರಾಮಾಯಣದ ಕಥೆ ಗೊತ್ತಿತ್ತು: ನಮ್ಮ ತಂದೆ ಒಬ್ಬರಿಂದ ಪಾರಾಯಣ ಮಾಡಿಸುತ್ತಿದ್ದರು. ಅವರು ಪ್ರತಿನಿತ್ಯವೂ ಬೆಳಗ್ಗೆ ಬಂದು ಪಾರಾಯಣಮಾಡಿ ಹೋಗುತ್ತಿದ್ದರು. ನನ್ನ ತಂದೆ ಸದಾ ನಶ್ಯ ತೀಡುತ್ತಾ, ಏರಿಸುತ್ತಾ ಕೇಳುವಷ್ಟು ಕೇಳುತ್ತಿದ್ದರು. ನಮ್ಮ ತಾಯಿಗಂತೂ ಒಳಗಿನಿಂದ ಹೊರಕ್ಕೆ, ಹೊರಗಿನಿಂದ ಒಳಕ್ಕೆ ಸುತ್ತಾಟ, ಅಡುಗೆಯ ಕೆಲಸ. ಅವರೂ ಪೂರ್ತ ಕೇಳುವುದಕ್ಕಾಗುತ್ತಿರಲಿಲ್ಲ. ನಾನೊಬ್ಬನೇ ಮೊದಲಿನಿಂದ ಕೊನೆಯ ವರೆಗೆ ಆನಂದದಿಂದ ಆಲಿಸಿ ಕೇಳುತ್ತಿದ್ದೆ. ಆದ್ದರಿಂದ ನನಗೆ ರಾಮಾಯಣದ ಕಥೆ ತಕ್ಕಮಟ್ಟಿಗೆ ಚೆನ್ನಾಗಿಯೇ ಗೊತ್ತಿತ್ತು. ಎಷ್ಟೋ ಸಲ ಆ ಕಾರ್ಮೋಡಗಳ ತಂಡವನ್ನು ನೋಡಿ ಲಂಕೆಗೆ ದಂಡೆತ್ತಿ ಹೋಗುತ್ತಿರುವ ವಾನರ ಸೈನ್ಯವೆಂದು ತಿಳಿಯುತ್ತಿದ್ದೆ. ಆ ಉದ್ದದಿಂದ ಈ ಉದ್ದಕ್ಕೆ ಅಗೋಚರವಾಗಿ ತೇಲಿ ಹೋಗುತ್ತಿದ್ದ ದೊಡ್ಡದೊಂದು ಕಾರ್ಮುಗಿಲನ್ನು ನೋಡಿ ನಿದ್ರಿಸುತ್ತಿರುವ ಕುಂಭಕರ್ಣನೆಂದು ಬಗೆಯುತ್ತಿದ್ದೆ. ಮಳೆಗಾಳಿ ಜೋರಾಗಿ

ಮೋಡಗಳೆಲ್ಲಾ ಚೆದರಿ ಒಂದರೊಡನೊಂದು ಸೆಣಸುತ್ತಿರುವಂತೆ ಕಂಡಾಗ ರಾಮಾಯಣದ ಯುದ್ಧವೇ ಕಣ್ಣಿಗೆ ಕಟ್ಟಿದಂತಾಗುತ್ತಿತ್ತು.

ಇದಿಷ್ಟೂ ನನ್ನ ಬಾಲ್ಯದ ಮಾತಾಯಿತು. ಈಗಲೂ ಮುಗಿಲುಗಳು ನನ್ನ ಮನಸನ್ನು ಆಕ್ರಮಿಸಿ ಆಳದೆ ಇಲ್ಲ. ಬೀದಿಯಲ್ಲಿ ನಡೆಯುವಾಗ ಮುಗಿಲುಗಳ ಮೇಲೆಯೇ ನನ್ನ ದಿಟ್ಟಿ ನಟ್ಟುಹೋಗಿರುತ್ತದೆ; ಮುಗಿಲ್ದೆರೆಯ ಹಾಸು-ಹೊಕ್ಕುಗಳಲ್ಲಿ ನನ್ನ ಮನಸ್ಸೂ ಎಡೆಬಿಡದೆ ಸೇರಿ ಹೋಗುತ್ತದೆ. ಅವುಗಳನ್ನು ನೋಡುತ್ತ ನೋಡುತ್ತ ಅನೇಕ ವೇಳೆ ಎಡವಿರುವುದೂ ಉಂಟು; ಒಂದೆರಡು ಸಲ ಎಡವಿ ಬಿದ್ದಿರುವುದೂ ಉಂಟು.

ಯಾವನೋ ಒಬ್ಬ ಚಿತ್ರಗಾರನು ಹೊತ್ತುಕಳೆಯುವುದಕ್ಕಾಗಿ ಹಾಕಿದ ಗೆರೆಬರೆಗಳ ಗೊಂದಲದಿಂದ ಒಮ್ಮೊಮ್ಮೆ ಮೂಡಿಬರುವ ಅಸಾಧಾರಣವಾದ ಭಾವಪೂರಿತವಾದ ಚಿತ್ರಗಳಂತೆ ಕಾಣುತ್ತವೆ ಕೆಲವು ಮುಗಿಲುಗಳು. ಎಷ್ಟೋ ಮುಗಿಲುಗಳ ಮುಖಮುದ್ರೆಯಲ್ಲಿ ಕೋಪದ ಕಿಡಿಯನ್ನು ಕಂಡಿದ್ದೇನೆ; ಅಧೋವದನವುಳ್ಳವಾಗಿ ಅಳುವ ಮುಗಿಲುಗಳನ್ನು ಕಂಡು, ಪ್ರಕೃತಿಗೂ ಈ ಗತಿಯೇ! ಎಂದು ಚಕಿತಚಿತ್ತನಾಗಿದ್ದೇನೆ; ನಗೆಮುಗಿಲುಗಳನ್ನು ಕಂಡು ನಲಿದಿದ್ದೇನೆ. ಸ್ವಭಾವತಃ ಮುಗಿಲುಗಳಿಗೆ ಈ ರೋಷ-ತೋಷ ಭಾವಗಳ ಅನುಭವವಿಲ್ಲದಿರಬಹುದು; ಇದೆಯೆಂದು ನನ್ನ ಭಾವನೆ. ಇರಲಿ ಇಲ್ಲದಿರಲಿ,—ಮುಗಿಲುಗಳು ನಾನು ನಕ್ಕಾಗ ನಕ್ಕು, ಅತ್ತಾಗ ಅತ್ತು, ನಾನು ಕಂಬನಿಗರೆದಾಗ ತಾವೂ ಅಶ್ರುಧಾರ ವರ್ಷವನ್ನು ಕರೆದು, ನಾನು ಕೋಪಗೊಂಡಾಗ ತಾವೂ ಕೋಪದ ಮಿಂಚನ್ನು ಎಸೆದು, ನಾನು ರೇಗಿದಾಗ ತಾವೂ ಆರ್ಭಟಿಸಿ, ನಾನು ಶಾಂತನಾದಾಗ ತಾವೂ ಶಾಂತರಾಗಿ, ನನ್ನೊಡನೆ ಸಹಾನುಭೂತಿಯನ್ನು ತೋರುತ್ತಿವೆಯೆಂದು ನನ್ನ ಭಾವನೆ. ಮಾನವನು ಮತ್ತೊಬ್ಬ ಮಾನವನಿಗೆ ಮಾಡಬಹುದಾದ ಮಹೋಪಕಾರಗಳಲ್ಲಿ ಸಹಾನುಭೂತಿ ತೋರುವುದೊಂದು. ಎಷ್ಟೋ ಮಾನವರಿಗಿಂತ ಮೇಲು ಈ ಮುಗಿಲುಗಳು. ಇವು ತೋರುವ ಸಹಾನುಭೂತಿಯನ್ನು ಸ್ವೀಕರಿಸಿ ಸಮಾಧಾನ

ಗೊಳ್ಳುವವರು ತಾನೇ ಎಷ್ಟು ಮಂದಿ ಇದ್ದಾರು ? ಬಹಳ ವಿರಳ; ನನ್ನಂಥ ವರು ಒಬ್ಬಿಬ್ಬರು ಹುಚ್ಚರನ್ನು ಬಿಟ್ಟರೆ ಇಲ್ಲವೆಂದೇ ಹೇಳಬೇಕು. ಹುಚ್ಚನ ಮಾತಿಗೆ ಅಡ್ಡಿಯೇನೂ ಇವಲ್ಲವಲ್ಲ ! ನಾನು ಹೇಳುವುದಿದು : ನೊಂದ ಹೃದಯವುಳ್ಳವರು ಸಹಾನುಭೂತಿಗಾಗಿ ಸುತ್ತ ನೋಡಬೇಡಿ, ಕತ್ತೆತ್ತಿ ಮೇಲೆ ನೋಡಿ.

ನಾನು ಇತರರಿಗೆ ಇಷ್ಟೇ ಹೇಳುವೆನಾದರೂ ನನ್ನದೇ ಒಂದು ಬಯಕೆಯಿದೆ: ನಾನೇ ಒಂದು ಮುಗಿಲಾದರೆ ! ಬೇಕುಬೇಕಾದೆಡೆಯಲ್ಲಿ ಸುತ್ತುತ್ತಿರಬಹುದು ! ನನ್ನನ್ನುಳಿದು ದೂರ ದೂರ ನೆಲೆಸಿರುವ ಹೃದಯ ಬಂಧುಗಳನ್ನು ಸ್ವಲ್ಪವೂ ಪ್ರಯಾಸವಿಲ್ಲದೆ ಬೇಕಾದಾಗ ಕಾಣುತ್ತಿರ ಬಹುದು ! ಒಂದೇ ಅವಲೋಕನದಿಂದ ವಿಶ್ವವೆಲ್ಲವನ್ನೂ ಒಮ್ಮೆಯೇ ನೋಡಿಬಿಡಬಹುದು ! ಸೂರ್ಯನನ್ನು ಸೇವಿಸಬಹುದು; ಚಂದ್ರನನ್ನು ಅಲಂಕರಿಸಬಹುದು. ಹರ್ಷವರ್ಷದ ಹನಿಗಳಾಗಿ ಉದಿರಿ, ಪಯಿರುಪಚ್ಚೆ ಗಳನ್ನು ನಗಿಸಿ, ಹೂವುಗಳನ್ನರಳಿಸಿ, ಇಳೆಯನ್ನು ತಣಿಸಿ, ಜನ್ಮ ಸಾರ್ಥಕ್ಯ ವನ್ನು ಪಡೆದು, ಮತ್ತೆ ಮುಗಿಲಾಗಿ ಹುಟ್ಟಿ ಎಂದಿನಂತೆ ನಾನೇ ನಾನಾಗಿ ಗಗನಸಾಮ್ರಾಜ್ಯ ಚಕ್ರವರ್ತಿಯಾಗಿ ಬಾಳಬಹುದು. ನಾನು ಮುಗಿ ಲಾದರೆ ಎಂದೆಂದಿಗೂ ಮುಗಿಲೇ. ರೂಪಭೇದ—ರೂಪಾಂತರಗಳನ್ನು ಬಿಟ್ಟರೆ ನಾನು ಅಮರನೇ ಸರಿ! ಅಂತೂ ಮುಗಿಲಾಗುವ ಬಯಕೆ ಬಹಳ ದಿನದಿಂದಿದೆ.

ಆದರೆ ಒಂದು ವಿಷಯ : ನಾನು ಮುಗಿಲಾಗಿಬಿಟ್ಟರೆ ಮುಗಿಲು ಗಳನ್ನು ಕೇಳುವವರಾರು ? ಆದ್ದರಿಂದ ಬದುಕಿರುವವರೆಗೂ ನಾನು ಮುಗಿಲಾಗಲೊಲ್ಲೆ ? ಮುಗಿಲುಗಳನ್ನು ನೋಡುತ್ತಿರುತ್ತೇನೆ, ಮಾನವರ ಪ್ರತಿನಿಧಿಯಾಗಿ ಅವುಗಳ ಜೊತೆಗಾರನಾಗಿರುತ್ತೇನೆ. ಇಲ್ಲಿನ ಬದುಕು ಮುಗಿದು ನಾನು ಮಡಿದ ಮೇಲೆ ಮುಗಿಲಾಗಿ ಅಮರನಾಗುತ್ತೇನೆ.

ಇದು ನಿಶ್ಚಯ : ಮುಗಿಲುಗಳು ನಿತ್ಯವೂ ನನ್ನನ್ನು ಕರೆಯುತ್ತಿವೆ.



# ಮಾವು

ವ್ಹಿ. ಜಿ. ಕುಲಕರ್ಣಿ

ಮಾವಿನ ಮರಗಳು ಈಗ ತಮ್ಮ ಸಂಪೂರ್ಣವೈಭವದಿಂದೊಡಗೂಡಿ ಮೆರೆಯುಹತ್ತಿವೆ. ಹೊಸ ತಳಿರು ಹೊಸ ಹೂಮಿಡಿಕಾಯಿಗಳನ್ನು ನೋಡಿ ಮನಸ್ಸು ಆಹ್ಲಾದಗೊಳ್ಳುತ್ತದೆ. ಕೆಂದಳಿರು ಬಿಳಿಹೂ ಹಸುರೆಲೆ ಹಸುರುಕಾಯಿ ಹೀಗೆ ವಿವಿಧವರ್ಣಗಳಿಂದ ಮಾವಿನ ಗಿಡಗಳು ಕಣ್ಣಿಗೆ ಉತ್ಸವವನ್ನು ಮಾಡುತ್ತವೆ. ಮರಗಳ ಕೆಳಗೆ ಹಾಯ್ದರೆ ಮೂಗಿಗೆ ಸೂಕ್ಷ್ಮವಾದ ಪರಿಮಳವು ತಾಗುತ್ತದೆ. ಈ ಊರಲ್ಲಿ ಕೆಲವು ರಸ್ತೆಗಳ ಎರಡೂ ಪಕ್ಕದಲ್ಲಿ ಮಾವಿನ ಮರಗಳು ಬೆಳೆದಿರುತ್ತವೆ. ಆದರೆ ಅವುಗಳನ್ನು ನೋಡಿ ಆನಂದಿಸುವ ಜನರು ಇದ್ದಂತೆ ನನಗೆ ಕಂಡುಬಂದಿಲ್ಲ. ನಾನಾದರೂ ಅವುಗಳನ್ನು ನೋಡಿ ಭ್ರಾಂತನಾಗಿ ದಾರಿಯಲ್ಲಿಯೇ ನಿಂತು ಬಿಡುತ್ತೇನೆಂದು ಹೇಳಲಾರೆ. ನಿಸರ್ಗಸೌಂದರ್ಯದ ಹುಚ್ಚು ಅಷ್ಟರ ಮಟ್ಟಿಗೆ ನನ್ನ ತಲೆಗೆ ಇನ್ನೂ ಏರಿಲ್ಲ. ಆದರೆ ಒಮ್ಮೊಮ್ಮೆ 'ತಳಿರ್ತ ಹೂತ ಕಾತ ಮಾಮರಗಳನ್ನು' ನೋಡಿ ಏನೋ ಒಂದು ಅನಿರ್ವಚನೀಯವಾದ ಸೌಂದರ್ಯಾನುಭೂತಿಯನ್ನು ಪಡೆದಿದ್ದೇನೆ; ಹೃದಯದಲ್ಲಿ ಏನೇನೋ ಕಾವ್ಯಮಯವಾದ ಭಾವನೆಗಳು ಉದ್ಭವಿಸಿವೆ. ಈ ನನ್ನ ಮಾಮರಗಳ ಪ್ರೇಮವನ್ನು ಸಂಸ್ಕೃತ ಹಾಗೂ ಕನ್ನಡ ಕಾವ್ಯಗಳನ್ನು ಓದಿ ಕಲಿತು ಕೊಂಡದ್ದಿದ್ದರೂ ಇದ್ದಿರಬಹುದು; ಸ್ವಭಾವಜನ್ಯನಾದ ನಿಸರ್ಗ ಪ್ರೀತಿಯು ನನ್ನಲ್ಲಿ ಇದ್ದಿರಲಿಕ್ಕಿಲ್ಲ.

ಕವಿಗಳು ಕೆಲವೊಂದು ಪ್ರಕೃತಿಯ ಸ್ವರೂಪಗಳನ್ನು ನೋಡಿ ಆನಂದಿಸಲಿಕ್ಕೆ ನನ್ನನ್ನು ಹಚ್ಚಿದ್ದಾರೆ. ಕವಿಗಳು 'Makers see' 'ಕಣ್ಣು ತೆರೆದು ನೋಡಲಿಕ್ಕೆ ಪ್ರಚೋದಿಸುವವರು.' ಎಂಬ ಮಾತನ್ನು ಕೆಲವು

ಅನುಭವಗಳಿಂದ ಮನಗಂಡಿದ್ದೇನೆ. ಉದಾಹರಣೆಗಾಗಿ ಒಂದು ಅನುಭವವನ್ನು ಹೇಳುತ್ತೇನೆ. ನಾನು ಚಿಕ್ಕಂದಿನಿಂದಲೂ ಹೊಸದಾಗಿ ಹರಗಿದ ಹೊಲಗಳಲ್ಲಿ ತಿರುಗಾಡಿದವನಾಗಿದ್ದೇನೆ. ಆದರೆ ಭೂಮಿಯನ್ನು ಹರಗಿದಾಗ ಒಂದು ಪ್ರಕಾರದ ಸೂಕ್ಷ್ಮ ಸುಗಂಧವು ಹೊರಹೊಮ್ಮುವುದೆಂದು ಕಾಲಿದಾಸನ ಎಣೆಯಿಲ್ಲದ ಮೇಘದೂತ ಕಾವ್ಯವನ್ನು ಓದುವವರೆಗೂ ಸ್ವಾನುಭವದಿಂದ ತಿಳಿದಿರಲಿಲ್ಲ. ಅಲ್ಲಿ ಆತನು ಹೇಳುವ 'ಸದ್ಯಃ ಸೀರೋತ್ಕರ್ಷಣ ಸುರಭಿಕ್ಷೇತ್ರ ಮಾರುಹ್ಯ ಮಾಲಂ' ಎಂಬ ಪದ್ಯವನ್ನು ಓದಿದ ಮೇಲೆ ಆ 'ಸೀರೋತ್ಕರ್ಷ ಸುರಭಿ'ಯನ್ನು ಮೊದಲಿಗೆ ಆಘ್ರಾಣಿಸಿದೆ; ಆನಂದಿಸಿದೆ. ನಾನು ಮೇಘದೂತವನ್ನು ಓದುವವರೆಗೂ ಹರಗಿದ ಹೊಲದಲ್ಲಿ ಸುರಭಿಯಿರಲಿಲ್ಲವೆಂದೂ ಈ ಪದ್ಯವನ್ನು ಓದಿದ ಕೂಡಲೆ ಏನೋ ಒಂದು ಮಂತ್ರಶಕ್ತಿಯಿಂದ ಸುರಭಿಯು ಭೂಮಿಯಿಂದ ಹೊರಡಹತ್ತಿತೆಂದೂ ಹೇಳಬಹುದೇ ? ಹೌದು; ಒಂದು ವಿಚಾರದಿಂದ ಹೀಗೆ ಹೇಳುವುದೂ ತಪ್ಪಾಗಲಿಕ್ಕಿಲ್ಲ. ನನ್ನ ಮಟ್ಟಿಗಾದರೂ ಕಾಲಿದಾಸನ ಪದ್ಯದ ಐಂದ್ರಜಾಲಿಕಶಕ್ತಿಯಿಂದಲೇ ಈ ಅನುಭವವುಂಟಾದುದು. ವಿಶ್ವದ ವಿವಿಧ ಅನುಭವಗಳನ್ನು ಗ್ರಹಿಸುವ ಶಕ್ತಿಯನ್ನೂ ಸೌಂದರ್ಯವನ್ನೂ ನೋಡುವ ಕಣ್ಣನ್ನೂ ಕವಿಗಳು ನಮಗೆ ಕೊಡುತ್ತಾರೆ.

ನಾನು ಸಂಸ್ಕೃತ ಕನ್ನಡ ಕಾವ್ಯಗಳನ್ನು ಓದದವನಾಗಿದ್ದರೆ ಬೇರೆ ಜನರಂತೆ ಮಾವಿನ ಮರಗಳನ್ನು ನೋಡಿ ನೋಡಿ ನೋಡದವನಂತೆ ಹೋಗಬಹುದಾಗಿತ್ತು; ಸಳಸಳಿಸುವ ಚಿಗುರಿನ ಬೆಡಗನ್ನೂ ಹಸುರೆಲೆಯ ಸೊಬಗನ್ನೂ ಹೂಗಳ ಚೆಲುವನ್ನೂ ಸವಿಯದಿರಬಹುದಾಗಿತ್ತು. ನಮ್ಮ ಕವಿಗಳಿಗೆ ಮಾವೆಂದರೆ ಹುಚ್ಚು ಅಕ್ಕರೆ. ಕಾಲಿದಾಸನು ತನ್ನ ಕೃತಿಗಳಲ್ಲೆಲ್ಲ ಸಹಕಾರ ಪ್ರೇಮವನ್ನು ಸೂರೆಗೊಳಿಸಿದ್ದಾನೆ. ಕೋಮಲೆಯಾದ ಮಲ್ಲಿಕಾ ಕಾಮಿನಿಗೆ ಯೋಗ್ಯ ವರನೆಂದರೆ ಚೂತರಾಜನೇ. ಕನ್ನಡ ಕವಿಗಳು ಸಂಸ್ಕೃತ ಕವಿಗಳಿಗಿಂತಲೂ ಹೆಚ್ಚಾದ ಒಲುಮೆಯನ್ನು ಮಾಮರಗಳಲ್ಲಿ ತೋರುತ್ತಾರೆ. ನಮ್ಮ ಆದಿಕವಿಯೆನಿಸಿದ ಪಂಪನಂತೂ ಚೂತರಾಜನ ವಂದಿಮಾಗಧನಾಗಿಬಿಟ್ಟಿದ್ದಾನೆ. ಆತನ ಅಭಿಪ್ರಾಯದಲ್ಲಿ ಮಾಮರವು

ಭುವನಕ್ಕೆ ಆರಾಧ್ಯವಂತೆ; ಮಿಕ್ಕ ತರುಗಳು ಅದರಂತೆ ಚೆನ್ನಂಗಳಲ್ಲವಂತೆ. ನಾನು ನೀರಸವಾದ ಗದ್ಯದಲ್ಲಿ ಆತನ ಭಾವವನ್ನು ಹೇಳುವುದಕ್ಕಿಂತಲೂ ಆತನೇ ತನ್ನ ಅಪ್ರತಿಮಮಾರ್ಗದಲ್ಲಿ ಹೇಳಲಿ.

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀನೈ ಪುಷ್ಪ ಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತ ಪ
ಣ್ಗಳಿನೋವೋ ಪೆರತೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗ ಕೋ
ಕಿಳಕೀರ ಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ

ಕನ್ನಡ ಬಲ್ಲವರೆಲ್ಲರೂ ಮನನಮಾಡಬೇಕಾದ, ಸಂಗ್ರಹಿಸಬೇಕಾದ ಪದ್ಯವಿದು. ಈ ರೀತಿಯಾಗಿ ಕನ್ನಡ ಕವಿಗಳೂ ಸಂಸ್ಕೃತ ಕವಿಗಳೂ ಮಾಮರದ ಸೊಬಗನ್ನು ಸೊಬಗಿನ ನುಡಿಗಳಲ್ಲಿ ಹಾಡಿದ್ದಾರೆ. ಇಂತಹ ಸ್ತುತಿಪಾಠಗಳನ್ನು ಕೇಳಿ ಕೇಳಿ ಹೃದ್ಗತ ಮಾಡಿಕೊಂಡು ಮಾವಿನ ಗಿಡಗಳನ್ನು ನೋಡಿದ ಕೂಡಲೆ ಭಾವಾವೇಶವನ್ನು ಹೊಂದುವುದು ವಿಸ್ಮಯವಲ್ಲ. ಒಮ್ಮೊಮ್ಮೆ ಉಂಟಾಗುವ ಇಂಥ ಭಾವಾವೇಶವು ನೈಜವೊ ಕೃತಕವೊ ನಾನು ಹೇಳಲಾರೆ. ನನ್ನ ಮಟ್ಟಿಗೆ ಆ ಸಮಯಕ್ಕೆ ನೈಜವೆಂದೇ ಎನಿಸುತ್ತದೆ. ಕೃತಕವೆಂದು ಇಟ್ಟುಕೊಂಡರೂ ಎಂದಾದರೊಮ್ಮೆ ಈ ಭಾವತರಂಗಗಳನ್ನು ಪ್ರಬೋಧಿಸಿದ ಕವಿಗಳಿಗೆ ನಾನು ಎಂದಿಗೂ ಕೃತಜ್ಞನು. ಚೂತರಾಜನ ರಾಜವೈಭವವನ್ನು ನೋಡಿ ನಲಿಯದ ಮಾನವನು ಜಗತ್ತಿನ ಒಂದು ರಮಣೀಯತೆಗೆ ಕುರುಡನಾದಂತೆಯೆ.

ಮಾವು ನಮ್ಮ ದೃಷ್ಟಿಗಷ್ಟೇ ಅಲ್ಲದೆ ಹೊಟ್ಟೆಗೂ ಸುಖಸಮಾಧಾನಗಳನ್ನೀಯುತ್ತದೆ. ಮಾವಿನ ಹಣ್ಣುಗಳು ಸಿಕ್ಕುವುದು ವರ್ಷದಲ್ಲಿ ಎರಡು ಮೂರು ತಿಂಗಳು ಮಾತ್ರ. ಆದುದರಿಂದ ಅತಿಪರಿಚಯದಿಂದ ತಿರಸ್ಕಾರ ಉಂಟಾಗುವದಕ್ಕೆ ಅವಕಾಶವಿಲ್ಲ. ಎಂದಾದರೊಮ್ಮೆ ದರ್ಶನಕೊಡುವ ಅಧಿರಾಜನನ್ನು ಎದುರು ನೋಡುವ ಪ್ರಜೆಗಳಂತೆ ಮಾವಿನ ಸುಗ್ಗಿಯನ್ನು ಜನರು ದಾರಿ ಕಾಯುತ್ತಿರುತ್ತಾರೆ. ಆಮ್ರಫಲಗಳನ್ನು ಆಸ್ಥೆಯಿಂದ ಸವಿಯದ ಭಾರತೀಯನಾರು? ಮಾವಿನಹಣ್ಣುಗಳಲ್ಲಿ ಕೆಲವೊಂದು 'ವಿಟಾಮಿನ್' ದ್ರವ್ಯಗಳಿವೆಯೆಂದೂ ಅವು ದೇಹಕ್ಕೆ ಬಹಳ ಒಳ್ಳೆಯವೆಂದೂ

ವೈಜ್ಞಾನಿಕರು ಈಗೀಗ ಪ್ರಚಾರ ಮಾಡಹತ್ತಿದ್ದಾರೆ. ನಮ್ಮ ದೇಶದವರಿಗಂತೂ ಇಂಥ ಪ್ರಚಾರದ ಅವಶ್ಯಕತೆಯಿಲ್ಲ. ನಮ್ಮ ನಾಲಗೆಯುಂ, ಮಾವು ಒಳ್ಳೆಯದಾಗಿರಲೇಬೇಕೆಂದು ಎಂದೋ ನಿರ್ಧರಿಸಿಬಿಟ್ಟಿದೆ. ಹಣ್ಣಷ್ಟೆ ಏಕೆ, ಕಾಯಿಗಾದರೂ ರುಚಿ ಕಡಮೆಯಿಲ್ಲ. ಮಾವಿನಕಾಯಿ ಹೋಳು ಉಪ್ಪು ಖಾರದಪುಡಿ ಇವುಗಳನ್ನು ಒಂದರೆಕ್ಷಣ ನೆನೆಯಿರಿ; ಬಾಯಲ್ಲಿ ಜುಳು ಜುಳು ನೀರು ಬರುವುದಿಲ್ಲವೆಂದು ಬೇಕಾದವರು ಹೇಳಲಿ. ಚಿಕ್ಕಂದಿನಲ್ಲಿ ಉಪ್ಪುಖಾರ ತೆಗೆದುಕೊಂಡು ತೋಟತೋಟಗಳಲ್ಲಿ ತಿರುಗಾಡಿ ಕಲ್ಲೆಸೆದು ಮಾವಿನಕಾಯಿಗಳನ್ನು ತಿಂದ ಅನುಭವವು ಬಹಳ ಜನರಿಗೆ ಇರಬಹುದು; ಕಾಯಿಯ ಸೊನೆ ಹತ್ತಿ ತುಟಿಯ ಮೇಲೆ ಹುಣ್ಣಾಗಿ ಹಿರಿಯರಿಂದ ಬೈಸಿಕೊಂಡ ಅನುಭವವೂ ಇರಬಹುದು; ಹಲ್ಲು ಚಳಿತು ರೊಟ್ಟಿ ಮೊದಲಾದ ಬಿರುಸು ಪದಾರ್ಥಗಳನ್ನು ತಿನ್ನುವಾಗ ಮೈ ಜುಮ್ಮೆಂದ ಅನುಭವವೂ ಇರಬಹುದು. ಹಿಂದಿನಂತೆ ಮಾವಿನ ಗಿಡಗಳನ್ನು ಹುಡುಕಿ ಕಲ್ಲೊಗೆದು ಮಾವಿನಕಾಯನ್ನು ತಿನ್ನುವುದು ನನ್ನ ಗೌರವಕ್ಕೆ ಸಾಲದು—ಇಲ್ಲಿವೆ ಆ ಧೈರ್ಯವಿಲ್ಲವೆನ್ನಬಹುದು. ಆದರೆ ಮನೆಯಲ್ಲಿ ಮಾವಿನಕಾಯಿ ನೋಡಿದರೆ ತಿನ್ನದೆ ಬಿಡುವಷ್ಟು ಸಂಯಮ ನನಗಿಲ್ಲ. ಮಾವಿನ ಹಣ್ಣು ಹೆಚ್ಚು ರುಚಿಯೋ ಕಾಯಿ ಹೆಚ್ಚು ರುಚಿಯೊ? ಯಾರು ಹೇಳಬಲ್ಲರು. ?

ನಾವು ಪೇಟೆಯಲ್ಲಿ ಕೊಂಡು ತಿನ್ನುವ ಹಣ್ಣುಗಳು ಕತ್ತಲೆ ಕೋಣೆಯ ಹುಲ್ಲಿನ ಹಾಸಿನಲ್ಲಿ ಪಕ್ವಮಾಡಿದುವು. ಅವುಗಳಲ್ಲಿ ಒಳ್ಳೆಯ ಜಾತಿಯ ಹಣ್ಣುಗಳು ರುಚಿಯಾಗಿಯೇ ಇರುತ್ತವೆ. ಆದರೆ ನನಗೇನೋ ಗಿಡದಲ್ಲಿಯೇ ಪಕ್ವವಾದ ಪಾಡಿನ ರುಚಿ, ಅಡಿಗೆ ಹಾಕಿ ಹಣ್ಣಾದ ಫಲಗಳಲ್ಲಿರುವುದಿಲ್ಲವೆಂದು ಎನಿಸುತ್ತದೆ. ಒಳ್ಳೆಯ ಜಾತಿಯ ಮಾವಿನ ಗಿಡದ ಕೆಳಗೆ ತನಿರಸದ ಭಾರದಿಂದ ತಾವಾಗಿಯೇ ಬಿದ್ದ ಹಣ್ಣುಗಳನ್ನು ತಿಂದು ನೋಡಬೇಕು, ಮಾವಿನ ಮಾಧುರ್ಯವನ್ನು! ಎಷ್ಟಾದರೂ ಅವು ಪ್ರಕೃತಿದೇವಿಯ ಕೈಕೆಲಸದ ಫಲಗಳು; ಬಿಸಿಲುಗಾಳಿಯಿಂದ ಪಕ್ವವಾದವುಗಳು.

ಸೃಷ್ಟಿಯಲ್ಲಿ ನೈಸರ್ಗಿಕವಾಗಿ ಇರುವ ವಸ್ತುಗಳಿಂದಲೂ ಫಲಗಳಿಂದಲೂ ಮಾನವನಿಗೆ ತೃಪ್ತಿಯಿಲ್ಲ. ತನ್ನ ಉಪಯೋಗಕ್ಕಾಗಿ ನಿಸರ್ಗದಲ್ಲಿ ಕೂಡ ಕೆಲವು ಮಾರ್ಪಾಟುಗಳನ್ನು ಬುದ್ಧಿಬಲದಿಂದ ಮಾನವನು ಮಾಡಿಕೊಂಡಿದ್ದಾನೆ. ಮಾವಿನ ಗಿಡಗಳಿಗೂ ಈ ಬುದ್ಧಿಯು ಹೊಡೆತ ಬಿದ್ದಿದೆ. ಈಗ ನಾವು ತಿನ್ನುವ ರಸಾಲವಾದ ಕಸಿ (ಕಲಮಿ) ಮಾವಿನ ಹಣ್ಣುಗಳು ಮನುಷ್ಯನ ಚಿಕಿತ್ಸಾಬುದ್ಧಿಯ ಫಲ. ನಮ್ಮ ಪೂರ್ವಜರಿಗೆ ಇಷ್ಟು ಮಧುರವಾದ ಮಾವಿನ ಹಣ್ಣನ್ನು ತಿನ್ನುವ ಭಾಗ್ಯವಿರಲಿಲ್ಲ. ಕಸಿ ಮಾಡದ ಗಿಡಗಳಲ್ಲಿಯೂ ಕೆಲವು ಒಳ್ಳೆಯ ಹಣ್ಣುಗಳನ್ನು ಕೊಡುತ್ತವೆ. ಆದರೆ ಕಸಿಮಾವಿನ ಹಣ್ಣುಗಳಿಗೆ ಬೇರೆ ಎಷ್ಟೇ ಒಳ್ಳೆಯ ಜಾತಿಯ ಕಸಿಮಾಡದ ಹಣ್ಣುಗಳಲ್ಲಿ ಇರದ ಮಾಧುರ್ಯವಿದೆ. ಮಾವಿನ ಗಿಡಗಳಿಗೆ ಕಸಿಮಾಡುವ ವಿದ್ಯೆಯನ್ನು ಕಂಡು ಹಿಡಿದವರು ಪೋರ್ತುಗೀಜರಂತೆ. ಕಲಮೀಹಣ್ಣುಗಳನ್ನು ಕೊಳ್ಳುವಾಗಲೂ ತಿನ್ನುವಾಗಲೂ ನಾವು ಅವರನ್ನು–ನಮಗೆ ಗೊತ್ತಿಲ್ಲದಂತೆಯೇ ಆಗಲಿ–ಸ್ಮರಿಸುತ್ತಿರುತ್ತೇವೆ. 'ಆಪೂಸ' ಎಂಬ ಕಲಮಿಹಣ್ಣನ್ನೂ 'ಫರ್ನಾದಿ' ಎಂಬ ಹಣ್ಣನ್ನೂ ನಾವೆಲ್ಲರೂ ರುಚಿ ನೋಡಿದ್ದೇವೆ. 'ಆಪೂಸ' ಎಂಬ ಪದವು 'ಅಫೋನ್ಸೊ' (Afonso) ಎಂಬ ಪೋರ್ತುಗೀಜ ಗೃಹಸ್ಥನ ಹೆಸರು. ಆತನೇ ಮೊದಲು ಕಸಿಮಾಡಿ ಒಂದು ಹೊಸ ಜಾತಿಯ ಮಾವಿನ ಗಿಡವನ್ನು ಹುಟ್ಟಿಸಿದವನಿದ್ದಿರಬಹುದು. ಇದೇ ಬಗೆಯಾಗಿ ಫರ್ನಾಂಡೀಸ (Fernandes) ಎಂಬ ಹೆಸರಿನಿಂದ ಫರ್ನಾದಿಯಾಯಿತು. ಬಿಳಿ ಜನರ ಸಂಪರ್ಕದಿಂದ ನಮಗೆ ಎಷ್ಟೇ ಅನಿಷ್ಟವುಂಟಾಗಿದ್ದರೂ ಕೆಲ ವಿಚಾರಗಳಲ್ಲಿ ಒಳಿತೂ ಸಂಭವಿಸಿದೆಯೆಂದು ಒಪ್ಪಿಕೊಳ್ಳಲೇಬೇಕು. ಇವುಗಳಲ್ಲಿ ಕಸಿಮಾವಿನಗಿಡವೊಂದು.

ಕಲಮೀ ಗಿಡಗಳು ಬಹು ಮಧುರವಾದ ಫಲಗಳನ್ನಿತ್ತರೂ ನೋಡುವುದಕ್ಕೆ ಅಷ್ಟು ಅಂದವಾಗಿರುವುದಿಲ್ಲ–ಸುರೂಪಿಯಾದ ಮಕ್ಕಳನ್ನು ಹಡೆಯುವ ಕುರೂಪಿಣಿಯಾದ ಸ್ತ್ರೀಯಂತೆ. ಇವು ಎತ್ತರವಾಗಿ ಬೆಳೆಯುವುದಿಲ್ಲ; ಬೊಡ್ಡೆಯು ಬಡವಾಗಿಯೂ ಅಂಕುಡೊಂಕಾಗಿಯೂ ಇರುತ್ತದೆ; ಎಲೆಗಳು ಹೆಚ್ಚು ಕಪ್ಪಾಗಿಯೂ ವಿರಳವಾಗಿಯೂ ಇರುತ್ತವೆ.

ಇವು ಎಂದೂ ಮರಗಳಾಗಿ ಬೆಳೆಯುವುದಿಲ್ಲ; ಕೇವಲ ಗಿಡಗಳಾಗಿಯೇ ಉಳಿಯುತ್ತವೆ. ಒಟ್ಟಿನಲ್ಲಿ ನೋಡುವುದಕ್ಕೆ ಅಷ್ಟು ಮಂಗಳವಾಗಿರುವುದಿಲ್ಲ. ಅದೇ ನಮ್ಮ ಸನಾತನವಾದ ಅಕೃತ್ರಿಮ ಚೂತವೃಕ್ಷಗಳು ತಮ್ಮ ಭವ್ಯತೆಯಿಂದಲೂ ಚೆಲ್ವಿಕೆಯಿಂದಲೂ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತವೆ; ಕವಿಗಳ ಭಾವವನ್ನರಳಿಸುತ್ತವೆ. ಅದರಲ್ಲಿಯೂ ನದೀ ತೀರದಲ್ಲಿಯಾಗಲೀ ಬಹಳ ಮಳೆ ಬೀಳುವ ಪ್ರದೇಶದಲ್ಲಿಯಾಗಲೀ ಸ್ವಚ್ಛಂದವಾಗಿ ಬೆಳೆದ ಹೆಮ್ಮರಗಳನ್ನು ನೋಡಬೇಕು. ಅವುಗಳ ತುಂಗಾಕೃತಿ, ಕೊಬ್ಬಿ ನೆಟ್ಟನೆ ಮೇಲಕ್ಕೆದ್ದ ದುಂಡಾದ ಬೊಡ್ಡೆ, ಬೇರೆ ಬೇರೆ ಬಣ್ಣದ ನಿಬಿಡವಾದ ಪರ್ಣಸಮುದಾಯ ಇವೆಲ್ಲವುಗಳಿಂದ ಅವು ಶೋಭೆಪಡೆದು ಚೇತೋಹಾರಿಯಾಗಿರುತ್ತವೆ. ಇವುಗಳಿಗೂ ಅಷ್ಟಾವಕ್ರವಾದ ಕಲಮೀಗಿಡಗಳಿಗೂ ಮಹದಂತರ. ನಿಸರ್ಗಸೃಷ್ಟಿಯೆಲ್ಲವೂ ಸಹಜಸುಂದರವಾಗಿದೆಯೆಂದೂ ಮಾನವನು ತನ್ನ ಅಪವಿತ್ರವಾಸನೆಯಿಂದ ಆ ಸೃಷ್ಟಿಕಾರ್ಯದಲ್ಲಿ ಕೈಯಿಕ್ಕಿದರೆ ವಿಕಾರಸ್ವರೂಪವುಂಟಾಗುತ್ತದೆಂದೂ ಕೆಲವು ತತ್ತ್ವಜ್ಞಾನಿಗಳು ಹೇಳುವ ಮಾತು ಈ ವಿಷಯದಲ್ಲಿ ನಿಜವಾಗಿ ಪರಿಣಮಿಸಿರಬಹುದೆ? ಅಥವಾ ಉಪಯುಕ್ತತೆಯೂ ಸೌಂದರ್ಯವೂ ಒಂದನ್ನೊಂದು ಹೊಂದಿಕೊಂಡು ಇರಲಾರವೆ?

ಹಿಂದುಗಳಿಗೆ ಮಾವು ಒಂದು ಅತ್ಯಾವಶ್ಯಕವಾದ ವೃಕ್ಷ. ಶುಭಕಾರ್ಯಗಳಲ್ಲಿ ಮನೆಗಳನ್ನು ಮಾವಿನತಳಿರಿನಿಂದ ಅಲಂಕರಿಸಲೇಬೇಕು. ಗಾಂಧಿಯವರು ಹಿಂದುಗಳು ಹೋದಲ್ಲೆಲ್ಲ ಚೂತವೃಕ್ಷಗಳನ್ನು ತಮ್ಮ ಸಂಗಡ ಒಯ್ಯುತ್ತಾರೆಂದು ತಮ್ಮ 'ಆಫ್ರಿಕೆಯಲ್ಲಿ ಸತ್ಯಾಗ್ರಹ' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಆಫ್ರಿಕಾಖಂಡದಲ್ಲಿ ಭಾರತೀಯರು ಕಾಲಿಟ್ಟಂದಿನಿಂದ ಮಾವಿನ ಗಿಡಗಳು ಅಲ್ಲಿಯ ಜನರಿಗೆ ಪರಿಚಿತವಾದುವಂತೆ. ಉಳಿದ ದೇಶಗಳಿಗೂ ನಮ್ಮ ದೇಶದಿಂದಲೇ ಮಾವು ಹೋಗಿದ್ದಿರಬೇಕು. ಇಂಗ್ಲೀಷಿನಲ್ಲಿ ಮ್ಯಾಂಗೊ (Mango) ಎಂಬ ಶಬ್ದವು ನಮ್ಮ ದ್ರಾವಿಡಭಾಷೆಗಳ ಮಾನ್ ಇಲ್ಲವೆ ಮಾವು ಎಂಬ ಶಬ್ದದಿಂದ ಹುಟ್ಟಿದೆ. ಒಂದೇ ಮಾತಿನಲ್ಲಿ ಹೇಳುವದಾದರೆ—ಮಾವಿನ ತಳಿರು, ಕಾಯಿ ಹಣ್ಣು ಇವೆಲ್ಲ ಭಾರತೀಯರಿಗೆ

ಅತಿ ಪ್ರಿಯವಾದ ವಸ್ತು. ಮಾವಿನಗಿಡಗಳು ನಮ್ಮ ದೇಶದ ಬಹುತರ ಎಲ್ಲ ಪ್ರದೇಶಗಳಲ್ಲಿಯೂ ಬೆಳೆಯುತ್ತಿವೆ.

ಆದರೆ ಸೋಜಿಗದ ಒಂದು ಮಾತು: ಮಾವಿನ ಬಗ್ಗೆ ಇಷ್ಟು ಬರೆದ ನನ್ನ ಊರಲ್ಲಿಯೇ (ಎಂದರೆ, ನಮ್ಮ ಹೊಲಮನೆಯಿದ್ದ ಹಳ್ಳಿ; ಈಗ ವಾಸಮಾಡುತ್ತಿರುವ ಪಟ್ಟಣವಲ್ಲ.) ಒಂದೂ ಮಾವಿನಗಿಡವಿಲ್ಲ. ಸುತ್ತು ಮುತ್ತು ನಾಲ್ಕೈದು ಮೈಲು ಹುಡುಕಿದರೂ ಒಂದೂ ಮಾವಿನಗಿಡವು ಸಿಕ್ಕುವುದಿಲ್ಲ. ನಮ್ಮ ಹಳ್ಳಿ ಎರೆನಾಡಿನ ಹಳ್ಳಿ; ಅಲ್ಲಿ ಮಾವು ಬೆಳೆಯುವುದಿಲ್ಲವಂತೆ.ಹಬ್ಬ–ಹುಣ್ಣಿವೆ ಮದುವೆ–ಮುಂಜಿ ಮೊದಲಾದ ಉತ್ಸವಗಳಿಗೆ ಮಾವಿನ ತಳಿರು ಬೇಕಾದರೆ ಬೇರೆ ಊರಿಗೆ ಹೋಗಿ ತೆಗೆದುಕೊಂಡು ಬರಬೇಕು. ಒಮ್ಮೊಮ್ಮೆ ಮಾಂದಳಿರಿನಂತೆ ಕಾಣುವ ಬೇರೆ ಯಾವುದಾದರೊಂದು ಗಿಡದ ಎಲೆಗಳಿಂದಲೇ ಕೆಲಸವನ್ನು ಸಾಗಿಸಬೇಕಾಗುತ್ತದೆ. ನಮ್ಮ ಪೂರ್ವಜರಲ್ಲಿ ಹಲವರು ಒಂದಾದರೂ ಮಾವಿನಗಿಡವನ್ನು ನಮ್ಮ ಊರಲ್ಲಿ ಹಚ್ಚಿ ಬೆಳೆಯಿಸಲಿಕ್ಕೆ ಬಹಳ ಪ್ರಯತ್ನಪಟ್ಟರಂತೆ; ಅವರ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಅವರೆಲ್ಲರಿಗೆ ಮಾವೆಂದರೆ ಬಹಳ ಆಸ್ಥೆ. ಇಲ್ಲದುದಕ್ಕೆ ಹಾತೊರೆಯುವುದು ಮನುಷ್ಯಸ್ವಭಾವಕ್ಕೆ ಹತ್ತಿಕೊಂಡು ಬಂದುದು. ನಾಗಚಂದ್ರನು ಹೇಳಿದಂತೆ 'ಅಪ್ರಾಪ್ತಿ ರಸಂ ಬಡೆಗುಂ' ನಮ್ಮ ಪೂರ್ವಜರ ಅಪೂರ್ಣವಾದ ಇಚ್ಛೆ ನನ್ನ ರಕ್ತದಲ್ಲಿ ಬೆರೆತು ಮಾಮರಗಳ ಹಂಬಲವನ್ನು ನನ್ನಲ್ಲಿ ಹುಟ್ಟಿಸಿರಬಹುದು; ಈ ಹರಟೆಯನ್ನು ಬರೆಯಲಿಕ್ಕೂ ಹಚ್ಚಿರಬಹುದು.



## ಇಜಾರ ~ ~ ~ ಕೆ. ಸಂಪದ್ಗಿರಿರಾಯ

ಮಾನವನ ವಸ್ತ್ರದ ವೈಖರಿಯಲ್ಲಿ ಇಜಾರಿನಷ್ಟು ಸರ್ವವ್ಯಾಪಿ ಯಾದುದು ಬೇರೊಂದಿಲ್ಲ. ಹಿಂದುಳಿದ ಹಿಂದುಗಳೊಬ್ಬರನ್ನು ಬಿಡಿ ಪ್ರಪಂಚದ ಉಳಿದ ಎಲ್ಲ ಜನಾಂಗಗಳಲ್ಲಿಯೂ ಮಾನವನ ಅಧೋಭಾಗವ ಇಜಾರಿನಿಂದಲೇ ಆವರಿಸಲ್ಪಡುವುದು. ಪೂರ್ವಕಾಲದಲ್ಲಿ ಹೀಗಿರಲಿಲ್ಲ. ಆ ಕಾಲದಲ್ಲಿ ಹೊಲಿಗೆಯ ಬಟ್ಟೆಗಳು ಕಡಿಮೆಯೇ. ಪುರಾತನ ಗ್ರೀಕರೂ ರೋಮನರೂ ಉದ್ದವಾದ ವಸ್ತ್ರವನ್ನು ಮೈಗೆ ಸುತ್ತಿಕೊಳ್ಳುತ್ತಿದ್ದರು ಉಷ್ಣವಲಯದಲ್ಲಿದ್ದ ಇತರ ನಾಗರಿಕ ಜನಾಂಗಗಳಂತೂ ಸಾಮಾನ ವಾಗಿ ಬಟ್ಟೆಗಳಿಗೆ ಅಷ್ಟು ಮಹತ್ವವನ್ನೇ ಕೊಟ್ಟಿಲ್ಲ. (ಹೆಚ್ಚು ಬಟ್ಟೆಗಳನ್ನು ಹಾಕಿಕೊಳ್ಳುವವನೇ ಹೆಚ್ಚು ನಾಗರಿಕನೆಂಬ ಸಿದ್ಧಾಂತವು ಆ ಕಾಲದಲ್ಲಿ ರೂಢಿಯಲ್ಲಿರಲಿಲ್ಲ). ಆದರೆ ಈ ಆಧುನಿಕ ಕಾಲದಲ್ಲಿ ಇಜಾರನ್ನು ಧರಿಸ ಜನಾಂಗವೇ ಇಲ್ಲ. ಅಮೇರಿಕದ ತಾಮ್ರವರ್ಣದ ಇಂಡಿಯನ್ನರ ಮೊದಲ ಗೊಂಡು ಇಂಡಿಯದ ಇಂಡಿಯನ್ನರ ವರೆಗೂ ಚೀನಾದಿಂದ ಚಿಲಿದೇಶ ವರೆಗೂ ಸರ್ವರೂ ಇಜಾರನ್ನೇ ಉಪಯೋಗಿಸುವರು. ದಕ್ಷಿಣ ಹಿಂದ ಸ್ಥಾನದ ನಿವಾಸಿಗಳು ಇದಕ್ಕೆ ಅಪವಾದವೆನ್ನಬಹುದು. ಆದರೆ ಇನ್ನೆಷ್ಟೊ ಅಪವಾದಗಳನ್ನು ಇವರು ಹೊತ್ತಿರುವ ಜನರು. ನವನಾಗರಿಕತೆಯಿಂ ಶೋಭಿಸುವ ಈ ಯುಗಕ್ಕೆ ಇಜಾರಿನ ಯುಗವೆಂದೇ ಹೇಳಬಹುದಾಗಿದೆ

ದಕ್ಷಿಣ ದೇಶದಲ್ಲಿ ಇಜಾರಿನವರನ್ನು ಕಂಡರೆ 'ಇವನೇನು ಮುಸ ಲ್ಮಾನನೋ?' ಎಂದು ಕೇಳುವುದುಂಟು. ಈ ವೇಷ ಮುಸಲ್ಮಾನ ವಸ್ತ್ರ ವಿಶೇಷವೆಂದು ಒಂದು ಭಾವನೆಯಿದೆ. ಆದರೆ ಇಂದಿಗೂ ಮಕ್ಕಾ ಪಟ್ಟಣಕ್ಕೆ ಹೋಗುವ ಮುಸಲ್ಮಾನೀ ಯಾತ್ರಿಕರು ಧರಿಸುವ ಉಡುಪ

ಇಜಾರ ಅಲ್ಲ-ಕೇವಲ ಎರಡು ಲುಂಗಿ. ಆದರೂ ಮುಸಲ್ಮಾನ ಜನರೇನೋ ಇಜಾರಕ್ಕೆ ಒಂದು ಪ್ರಾಶಸ್ತ್ಯವನ್ನು ಕೊಟ್ಟು ಏಷಿಯಾಖಂಡದಲ್ಲಿ (ಫರಂಗಿಯವರೂ, ಅವರ ಪರಿವಾರದವರೂ ಪರಿಚಾರಕರೂ ಈ ದೇಶದಲ್ಲಿ ಕಾಲಿಡುವುದಕ್ಕೆ ಪೂರ್ವದಲ್ಲಿ) ಇದರ ಪ್ರಚಾರವನ್ನು ನಡೆಸಿರುವುದು ನಿಜ. ಇದಕ್ಕೆ ಕಾರಣವೇನಂದರೆ ಮುಹಮ್ಮದ ಪೈಗಂಬರರ ಮತವು ಅರಬ್ಬಿದೇಶದಿಂದ ಅನ್ಯದೇಶಗಳಿಗೆ ವೇಗವಾಗಿ ಹರಡುವ ಪ್ರಸಂಗ ಒದಗಿದಾಗ ತೀವ್ರಗಾಮಿಗಳಾಗಿ ನುಗ್ಗಬೇಕಾಗಿದ್ದ ಜನರು ತಮ್ಮ ಓಡಾಟಕ್ಕೆ ಅನುಕೂಲವಾಗುವುದೆಂದು ಈ ಇಜಾರನ್ನು ಮಾಡಿಕೊಂಡರು. ಹೆಚ್ಚಾದ ಬಟ್ಟೆಬರೆಗಳನ್ನು ತಲೆಗೆ ಬಿಗಿದು ಕಟ್ಟಿಕೊಂಡು ಮುಂದಕ್ಕೆ ನುಗ್ಗಿದರು. ಹಿಂದುಸ್ಥಾನದಲ್ಲಿಯೂ ಪೂರ್ವಕಾಲದಲ್ಲಿ ಉಡುವ ಪಂಚೆಯನ್ನು 'ವೀರ ಕಚ್ಚೆ'ಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೋಗುತ್ತಿದ್ದರಂತೆ. (ಇದಕ್ಕೆ ಈಗ ಸೈಕಲ್ ಕಚ್ಚೆಯೆನ್ನುವರು.) ಹೆಚ್ಚು ಓಡಾಟ ಒದಗಿದಾಗಲೂ, ಪ್ರವಾಸದಲ್ಲಿ ನಿತ್ಯವೂ ಒಗೆಯಲು ಅನುಕೂಲವಿಲ್ಲದಿರುವಾಗಲೂ, ಕುದುರೆ, ಕತ್ತೆ, ಹೇಸರಕತ್ತೆ, ಒಂಟೆ ಮುಂತಾದುವನ್ನು ಸವಾರಿ ಮಾಡುವಾಗಲೂ ಇಜಾರವೇ ಚೆನ್ನಾಗಿ ಒಗ್ಗುವುದೆಂಬುದನ್ನು ಬೇರೆ ಹೇಳಬೇಕಾದ್ದಿಲ್ಲ. ನಿತ್ಯ ಒಗೆದು ಉಡುವ ಧೋತ್ರಕ್ಕೂ, ಸುಮ್ಮನೆ ಝಾಡಿಸಿ ಮತ್ತೆ ಧರಿಸಬಹುದಾದ ಇಜಾರಕ್ಕೂ ಇರುವ ವ್ಯತ್ಯಾಸವನ್ನು ಊರೂರಿಗೆ ಪ್ರಯಾಣ ಮಾಡಿ ಸ್ನಾನಪಾನಾದಿಗಳಿಗಾದರೂ ಇಷ್ಟು ನೀರು ಸಿಕ್ಕಿದರೆ ಸಾಕೆಂದು ತವಕಪಟ್ಟವರಿಗೇ ಗೊತ್ತು. ಒಟ್ಟಿನಲ್ಲಿ ನೋಡುವುದಾದರೆ ವೇಗವಾಗಿ ನಡೆಸುವ ಜೀವನಕ್ಕೆ, ಚಟುವಟಿಕೆಯ ನಡವಳಿಕೆಗೆ ಇಜಾರು ಒಂದು ಚಿಹ್ನೆ ಮಾತ್ರವಲ್ಲ—ಅವಶ್ಯಕವಾದ ಸಾಧನೆ. ತ್ರಿಕಚ್ಚೆ, ಪಂಚಕಚ್ಚೆ, ಅಷ್ಟಕಚ್ಚೆಗಳು ಹೊಟ್ಟೆಯನ್ನು ಬೆಳೆಸಿಕೊಂಡು ಒಂದು ಕಡೆ ಕೂಡುವ ಸ್ಥಾವರ ಜೀವಿಗಳಿಗೆ ಸರಿಹೋಗಬಹುದೇ ಹೊರತು ಚೆನ್ನಾಗಿ ಕಾಲುಬೀಸಿ ಬದುಕುವವರಿಗೆ ಸಾಧ್ಯವಿಲ್ಲ.

ಚಟುವಟಿಕೆಯನ್ನು ಪ್ರೇರೇಪಿಸುವ ಶಕ್ತಿ ಇಜಾರಿನಲ್ಲಿಯೇ ಇರುವುದೋ, ಅಥವಾ ಇಂತಹ ಶಕ್ತಿಯುಳ್ಳ ಮನುಷ್ಯರೇ ವಸ್ತ್ರಗಳನ್ನು

ಒತ್ತುಟ್ಟಿಗಿಟ್ಟು ಇಜಾರನ್ನು ಹೊಲಿಸುವರೋ ಹೇಳುವುದು ಕಷ್ಟ. ಆದರೆ ಸದಾ ಪಂಚೆಯನ್ನುಟ್ಟ ಸಾಧು ಮನುಷ್ಯರು ಕೂಡ ಇಜಾರನ್ನು ಧರಿಸಿದ ಮೇಲೆ ಅವರ ಕಾಲುಗಳಲ್ಲಿ ಕಂಡು ಬರುವ ಹೊಸ ಹುರುಪನ್ನು ನೋಡಿದರೆ ಈ ವೇಷದಲ್ಲಿಯೇ ಏನೋ ವಿಶೇಷ ಮಹಿಮೆಯಿದೆ ಎಂದು ಊಹಿಸಬಹುದಾಗಿದೆ. ಇಜಾರನ್ನು ಹಾಕಿಕೊಂಡರೆ ಕಾಲುಗಳು ಸ್ವಲ್ಪವೂ ಅಡ್ಡಿ ಇಲ್ಲದೆ ಜೋರಿನಿಂದ ಹಾಯುತ್ತವೆ. ಕಾಲಿನ ಆಟವೂ, ಓಟವೂ ವೇಗಗೊಳ್ಳುತ್ತವೆ. ಕಾಲಿನ ಮಾಟವೂ ಹೊರಬೀಳುತ್ತದೆ. ಪಂಚೆಯನ್ನುಟ್ಟವರು ಕೋಪ ಬಂದಾಗ ಕೈಯ್ಯನ್ನು ಮಾತ್ರ ಉಪಯೋಗಿಸಬಲ್ಲರು. ಇಜಾರನ್ನುಟ್ಟವರು ಹಾಗಲ್ಲ. ಎರಡು ಕೈಗಳ ಬಲವು ಒಂದು ಕಾಲಿನಲ್ಲಿರುವುದು: ಎರಡು ಕಾಲುಗಳಿಂದ ಅವರು ದೇವತೆಗಳಂತೆ ಚತುರ್ಭುಜ ಬಲವನ್ನುಳ್ಳವರಾಗಿರುವರು. ದೇಹದ ಪೂರ್ಣ ವಿಕಾಸಕ್ಕೆ ಇಜಾರೇ | ಸಾಧನೆಯಾಗಿದೆ. ಆಟಪಾಟಗಳನ್ನಾಡುವವರನ್ನು ನೋಡಿ ಇಜಾರನ್ನೋ 'ನಿಕ್ಕರ'ನ್ನೋ ಧರಿಸುವರು. ನಿಕ್ಕರೆಂದರೇನು? ಇಜಾರಿನ ಮರಿ. ಇದಕ್ಕಾಗಿಯೇ ಪಂಚೆಯುನ್ನುಡುವವರೂ ಕೂಡ ಕೆಲಸಬಿದ್ದಾಗ ಪಂಚೆಯನ್ನೆತ್ತಿ ಕಟ್ಟುವರು—ಅಂದರೆ ಪಂಚೆಯನ್ನು ನಿಕ್ಕರಿನ ರೂಪಕ್ಕೆ ತರುವರು.

ಇಜಾರಿನಲ್ಲಿ ಅನೇಕ ವಿಧಗಳುಂಟು. ಎರಡು ಕಾಲುಗಳಿಗೂ ಎರಡು ಪ್ರತ್ಯೇಕವಾಗಿ ಇಳಿದು ಬಂದಿರುವುದು ಸರ್ವ ಸಾಮಾನ್ಯ ಲಕ್ಷಣ. ಇವುಗಳಲ್ಲಿ ಟ್ರೌಜರ್ಸ್, ಪೈಜಾಮಾ, ಪ್ಯಾಂಟ್ಸ್, ಬ್ರೀಚೆಸ್, ಸುರುವಾಲ್, ಪಠಾಣರ 'ದೊಗಳೆ' ಇತ್ಯಾದಿಯಾಗಿ ಪಾದಪರ್ಯಂತ ಇಳಿದು ಬರುವವುಗಳಲ್ಲಿ ಜಾತಿ ಭೇದಗಳುಂಟು. ಮೊಣಕಾಲಿಗೇ ನಿಲ್ಲುವವು ಬೇರೆ. ಅವಕ್ಕೆ ಷಾರ್ಟ್ಸ್, ನಿಕ್ಕರ್ಸ್, ಡ್ರಾಯರ್ಸ್, ಚಡ್ಡಿ, ಚಳ್ಣ ಮುಂತಾದ ಹೆಸರುಗಳು ಬಂದಿವೆ. ಈ ಸಂಕ್ಷೇಪ ರೂಪಗಳು ಸ್ವಯಂಭೂತವಾಗಿಯೂ ಆಗಬಹುದು. ಅಂದರೆ ಹಾಗೆಯೇ ಹೊಲಿಗೆಯವರಿಂದ ನಿರ್ಮಿಸಲ್ಪಡಬಹುದು. ಅಥವಾ ಬೃಹದ್ರೂಪದಿಂದ ಕಾಲಾನಂತರದಲ್ಲಿ ಕಾರಣಾಂತರಗಳಿಂದ ಜನ್ಯವಾಗಿರಬಹುದು. ಈ ಪ್ರಕರಣವನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿಲ್ಲ.

ಇವುಗಳನ್ನು ದೇಹಕ್ಕೆ ಬಿಗಿದು ನಿಲ್ಲಿಸುವುದಕ್ಕೆ ಅನೇಕ ಸಾಧನ ಸಾಮಗ್ರಿಗಳಿವೆ. ಗುಂಡಿ, ಲಾಡಿ, ಹಿಂದೆ ಕಟ್ಟುವುದು, ಭುಜಕ್ಕೆ ಎತ್ತಿ ನಿಲ್ಲಿಸುವುದು ಈ ರೀತಿಯಾಗಿ ಉಂಟು. ಆದರೆ ಈ ಬಂಧನ ವಿಶೇಷಗಳು ಅಂತರ್ಗಾಮಿಗಳಾಗಿರುವುದರಿಂದ ಯಾವ ನಿರ್ದಿಷ್ಟವಾದ ನಿಯಮಕ್ಕೂ ಒಳಪಡದೆ ಸಂದರ್ಭಾನುಸಾರ, ಶಕ್ತ್ಯಾನುಸಾರ ಇಜಾರುಗಳ 'ಸ್ಥಿತಿ'ಯ ಕೆಲಸವು ಜರುಗುವುದು.

ಇವುಗಳಲ್ಲಿ ಟ್ರೌಜರ್ಸ್ ಎನ್ನುವುದು ಉತ್ತಮ ಕುಲಕ್ಕೆ ಸೇರಿದ್ದೆಂದು ಹೇಳಬಹುದು. (ದೇಹದ ಮಧ್ಯಭಾಗದಿಂದ ಎರಡು ಶಾಖೆಯಾಗಿ ಹೊರಡುವುದರಿಂದ ಎಲ್ಲವೂ 'ದ್ವಿಜ' ಜಾತಿಯವಾದರೂ, ಸಾಂಪ್ರದಾಯಿಕವಾಗಿ ಟ್ರೌಜರ್ಸೇ ಅಗ್ರ ಮರ್ಯಾದೆಗೆ ಯೋಗ್ಯವಾಗಿದೆ.) ಇದರ ಉಪಯೋಗವು ಪಂಚೆಕಚ್ಚೆಯಂತೆಯೇ ವಿಧಾನಪೂರ್ವಕವಾಗಿದೆ. ವಿಶೇಷವಾದ ನಿಯಮವೇನೆಂದರೆ ಕೆಳಗಿನ ಭಾಗದ ಮುಂದಿರುವ ಮಡತೆಯು ಸದಾ ಗೋಚರವಾಗಿಯೂ, ಚೂಪಾಗಿಯೂ, ಪಾದದ ಮೇಲಿನ ಭಾಗದ ಸರಿಮಧ್ಯಕ್ಕೆ ಬಂದು ನಿಲ್ಲುವಂತೆಯೂ ಇರಬೇಕು. ಇದನ್ನು ಕಾಪಾಡಿಕೊಳ್ಳಲು ಯಂತ್ರಸಾಧನಗಳಿವೆ. ಈ ಯಂತ್ರವನ್ನು ಉಪಯೋಗಿಸಲಾಗದವರು ಬೇರೆ ಉಪಾಯಗಳನ್ನೂ ಮಾಡುವುದುಂಟು. ಮತ್ತು ಟ್ರೌಜರ್ಸಿನ ಸುತ್ತಳತೆಯ ವಿಷಯದಲ್ಲೂ (ಕಾಲಾನುಸಾರವಾದ) ನಿಯಮಗಳಿವೆ. ಕೆಲವು ವರ್ಷಗಳ ಹಿಂದೆ ಇಂಗ್ಲಂಡಿನಲ್ಲಿ ಬಟ್ಟೆಯ ಉತ್ಪತ್ತಿ ಹೆಚ್ಚಿದಾಗ ಈ ಸುತ್ತಳತೆಯು ಬಹಳ ಪ್ರಬಲಿಸಿತ್ತು. ಆಕ್ಸ್‌ಫರ್ಡ್ ಮಾದರಿಯೆಂದು ಹೆಸರುಗೊಂಡ ಇದರಲ್ಲಿ ನಾಯಿಮರಿಯನ್ನೇ ಬಚ್ಚಿಟ್ಟುಕೊಳ್ಳುವಷ್ಟು ಅವಕಾಶವಿದ್ದಿತು. ಅದನ್ನು ಧರಿಸುವವರ ಕಾಲುಗಳು ಆನೆಯ ಕಾಲುಗಳೇನೋ ಎಂಬಂತೆ ತೋರುತ್ತಿದ್ದವು. ಈಚೆಗೆ ಇದು ಸಂಕ್ಷೇಪಿಸಲ್ಪಟ್ಟಿದೆ.

ಸಮುದ್ರದ ಜಹಜುಗಳಲ್ಲಿ ಕೆಲಸ ಮಾಡುವ ನಾವಿಕರ ಇಜಾರ ಬೃಹದಾಕಾರದವು. ಕೆಳಭಾಗದಲ್ಲಿ ದೊಡ್ಡ ರುಂಡಾಕಾರವನ್ನು ತಾಳಿ, ಮಡತೆ ಎಂಬ ನಿಯಮಗಳಿಗೆ ಒಳಪಡದೆ ಕೇವಲ ಸ್ವೇಚ್ಛಾವೃತ್ತಗಳವು.

ಆದರೆ ಇಜಾರಿನ 'ವಿಶ್ವರೂಪ'ವನ್ನು ಕಾಣಬೇಕಾದರೆ ಪಠಾಣರು ಧರಿಸುವ 'ದೊಗಳೆ'ಯನ್ನು ನೋಡಬೇಕು. ದರ್ಜಿಯೇ ಒಂದು ಬಟ್ಟೆಯ ಥಾನನ್ನು ತೆಗೆದು ನಿಂತ ಮನುಷ್ಯರಿಗೆ ಹಾಗೆಯೇ ಹೊಲಿಯುವನೆಂದೂ, ಇದು ಪ್ರಳಯಕಾಲದಲ್ಲಿ ತಾನಾಗಿಯೇ ಕುಸಿದು ಬೀಳುವುದೆಂದೂ, ಈ ಮಧ್ಯೆ ಪಂಚಭೂತಗಳ ವಶಕ್ಕೆ ಸಿಕ್ಕದೆ ಆ ದೇಹವನ್ನು ಬಿಟ್ಟು ಕ್ಷಣಮಾತ್ರವೂ ಅಲುಗದಿರುವುದೆಂದೂ ಒಂದು ಪ್ರತೀತಿಯುಂಟು. ಪಠಾಣರು ನಡೆಯುವಾಗ ಕ್ಷೀರಾಬ್ಧಿಯ ತರಂಗಗಳನ್ನೇ ನಾವು ನೋಡುತ್ತಿರುವೆವೋ ಎನ್ನುವಷ್ಟು ಭ್ರಮೆ ಉಂಟಾಗುವುದು.

ಸಾಧಾರಣ ಜಾತಿಯ ಇಜಾರುಗಳು ಯಾವ ನಿಯಮಕ್ಕೂ ಒಳಪಟ್ಟವಲ್ಲ. ಚಪ್ಪರದವರೆ ಬಳ್ಳಿಯನ್ನು ಹಬ್ಬಿಸಲು ಹಾಕುವ ಹಂದರವು ಹೇಗೋ ಹಾಗೆ ಎರಡು ರುಂಡಾಕಾರದ ಭಾಗವನ್ನು ಮಾಡಿ ಪೈಜಾಮಾ ಎಂದು ಧರಿಸಬಹುದು. ಉತ್ತಮ ಜಾತಿಗೆ ಸೇರಿದ ಟೌಜರ್ರುಗಳೂ ಕೆಲವು ಕಾಲವಾದನಂತರ ಜಾತಿಭ್ರಷ್ಟವಾಗಿ ಇದೇ ದರ್ಜೆಗೆ ಬರುವವು. ಈ ಪೈಜಾಮಾಗಳು ಇಷ್ಟು ರೂಢಿಯಲ್ಲಿರುವುದಕ್ಕೆ ಕಾರಣವೇನೆಂದರೆ ಇದು ಅಗ್ಗವೂ ಹೌದು, ಬಾಳಿಕೆಗೂ ಹೆಚ್ಚು ಕಾಲವೂ ಬರುವುದು. ಸ್ವಲ್ಪ ಮಡಿಸಿದರೆ ಅಣ್ಣನದು ತಮ್ಮನಿಗಾಗಬಹುದು; ಅಜ್ಜನದು ಮೊಮ್ಮಗನಿಗಾಗಬಹುದು. ಒಂದು ಪಂಚೆಯ ಬೆಲೆಗೆ ಮೂರು ಪೈಜಾಮಾಗಳನ್ನು ಒದಗಿಸಿಕೊಳ್ಳಬಹುದು.

ಉತ್ತರ ಹಿಂದುಸ್ಥಾನದಲ್ಲಿ ಸುರುವಾಲೆನ್ನುವುದು ಉತ್ತಮ ವರ್ಗದ ಪೋಷಾಕು. ಇದರಲ್ಲಿ ಅಡಕವಾಗಿರುವ ಕೆಲವು ಮನುಷ್ಯರನ್ನು ಕಂಡರೆ ಅದರಲ್ಲಿ ಅವರು ಹೇಗೆ ಅವತರಿಸಿದರೆಂಬ ಪ್ರಬಲವಾದ ಶಂಕೆ ತೋರುವುದು. ಸುರುವಾಲನ್ನು ಹಾಕಿಕೊಳ್ಳುವುದೇ ಒಂದು ವಿಧವಾದ ವ್ಯಾಯಾಮ. ಹಾಗೆಯೇ ಅದರ ವಿಸರ್ಜನೆಯೂ. ಇಬ್ಬರು ಮೂವರು ಸಹಕರಿಸಿ ಈ ವ್ಯಾಯಾಮವನ್ನು ಮಾಡಬೇಕಾಗುವುದು. (ಧರಿಸುವವನು ಬ್ರಹ್ಮಚಾರಿಣನಾಗಿದ್ದರಂತೂ ದೇವರೇ ಗತಿ!) ಲುಂಗಿಯನ್ನು ಕ್ಷಣಮಾತ್ರದಲ್ಲಿ ಸುತ್ತಿಕೊಂಡು ಅರ್ಧ ಕ್ಷಣದಲ್ಲಿ ಕಳಚುವ

ವರಿಗೆ ಈ ಮರ್ಮವು ಅಭೇದ್ಯವೇ ಸರಿ. ಇದನ್ನು ಹೋಲುವ ಐರೋಪ್ಯರ ಬ್ರೀಚೆಸ್ ಇಷ್ಟು ಬಿಗಿಯಲ್ಲ. ಅಲ್ಲದೆ ಸಣ್ಣ ಶುಷ್ಕವಾದ ಕಾಲನ್ನುಳ್ಳವರು ಬ್ರೀಚೆಸ್ ಸಹಾಯದಿಂದ ಪುಷ್ಟವಾಗಿ ಕಾಣಲೂಬಹುದು—ನಡೆಯಲೂ ಬೇಕಾಗುವುದು. ಆದರೆ ಸುರುವಾಲುಗಳು ತೆಳ್ಳನಾದ ಬಟ್ಟೆಯಲ್ಲಿರುವುದರಿಂದ ಕಾಲಿನೊಂದಿಗೆ ತಾದಾತ್ಮ್ಯವನ್ನು ತಾಳಿ ತದ್ರೂಪವನ್ನು ನಿಷ್ಪಕ್ಷಪಾತವಾಗಿ ತೋರಿಸಿಕೊಡುವವು.

ದಕ್ಷಿಣ ಹಿಂದುಸ್ಥಾನದವರು ಮಾತ್ರವೇ ಇಜಾರಿನ ಬಲೆಗೆ ಬೀಳದ ಜನತೆ. ದೇಶದ ವಾಯುಗುಣವೂ, ಮತ್ತು ಮುಸಲ್ಮಾನೀ ರಾಜ್ಯಗಳು ದಕ್ಷಿಣದ ತುದಿಯ ವರೆಗೂ ವ್ಯಾಪಿಸದೇ ಹೋದುದೂ ಇದಕ್ಕೆ ಕಾರಣ. ಆದರೆ ಇತ್ತೀಚೆಗೆ ಇಜಾರಿನ ವ್ಯಾಪ್ತಿಯು ಇಲ್ಲಿಯೂ ಕಂಡು ಬರುತ್ತಿರುವುದು. ಇದು ಖರ್ಚಿಲ್ಲದ ವಿಷಯವೆಂದು ಜನತೆಗೆ ಚೆನ್ನಾಗಿ ಮನವರಿಕೆಯಾಗಲಿಲ್ಲ. ಈ ಅಂಶವು ಚೆನ್ನಾಗಿ ಪ್ರಚಾರವಾದಲ್ಲಿ ದಾಕ್ಷಿಣಾತ್ಯರೂ ನಿರ್ದಾಕ್ಷಿಣ್ಯರಾಗಿ ಇದನ್ನು ಕೈಕೊಳ್ಳ (ಕಾಲುಕೊಳ್ಳ) ಬಹುದು.



## ಕಾಯಿಲೆಗಳು ∽ ∽ ∽ ವಿ. ಸೀ.

ಕಾಯಿಲೆ ಎಂದರೆ ಸಾಮಾನ್ಯವಾಗಿ ಜನರಿಗೆ ಹೆದರಿಕೆ, ಯೋಚನೆ. ನನ್ನಂಥವರಿಗೆ ಹಾಗಲ್ಲ. ಕಾಯಿಲೆಯೆಂದರೆ ನಮಗೆ ಸಂತೋಷ. ನಾವು ಅದರಲ್ಲಿಯೆ ಹುಟ್ಟಿ ಬೆಳೆದವರು. ಕಾಯಿಲೆಗಳೂ ನಾವೂ ಬಾಲ್ಯಸ್ನೇಹಿತರು, ಒಡನಾಡಿಗಳು. ಅವುಗಳ ಸ್ವಭಾವ ನಮಗೆ ಚೆನ್ನಾಗಿ ಗೊತ್ತು; ನಮ್ಮ ಸ್ವಭಾವ ಅವಕ್ಕೆ ಸಂಪೂರ್ಣವಾಗಿ ತಿಳಿದಿದೆ. ಕೆಲವರ ಜೊತೆಯಲ್ಲಿ ನಮಗೆ ಭಯವೇ ಇಲ್ಲ. ನಾವು ಅವರನ್ನು ಸಡ್ಡೆ ಮಾಡೆವು. ನಮ್ಮ ಮನೆಯಲ್ಲಿಯೇ ಇರುವ ಜನರಂತೆ, ಅವರು: ಬಂದಾಗ ಬರುವರು, ಹೋದಾಗ ಹೋಗುವರು. ಯಾವಾಗ ಬರುವರು, ಯಾವಾಗ ಹೋಗುವರು ಎಂಬ ಲೆಕ್ಕವಿಲ್ಲ. ಇನ್ನು ಕೆಲವರು ನಮಗೆ ಪೂಜ್ಯರು, ಹಿರಿಯರು, ಅವರನ್ನು ಸ್ವಲ್ಪ ಮರ್ಯಾದೆಯಿಂದ ವಿಚಾರಿಸಿಕೊಳ್ಳುತ್ತೇವೆ. ಅವರ ಯೋಗ್ಯತೆಗೆ ತಕ್ಕಂತೆ ನಡೆಯುತ್ತ ಅವರ ಕೋಪ ಕೆರಳದಂತೆ ಧಾತೋಪಶಮನ ಮಾಡಿಕೊಂಡು ಹೋಗುತ್ತೇವೆ. ಅವರು ಏಕೆ ಕೆರಳಿರುವರೆಂಬುದು ಬಹುದಿನದ ಅನುಭವದಿಂದ ನಮಗೆ ಗೊತ್ತು. ನಾವು ಯಾವರೀತಿ ನಡೆದುಕೊಂಡರೆ ಅವರಿಗೆ ಸಮಾಧಾನವಾದೀತು ಎಂಬುದೂ ಗೊತ್ತು. ಇನ್ನು ಕೆಲವರ ಸ್ವಭಾವ ಹೀಗಲ್ಲ. ಅವರು ಆಗಾಗ ಬಂದು ನಾಲ್ಕು ದಿನ, ನಾಲ್ಕುವಾರ, ಇದ್ದು, ಇರುವಷ್ಟು ದಿನವೂ ಗದ್ದಲ ಮಾಡಿ, ಹಟಮಾಡಿ, ಮನೆಯವರೆಲ್ಲರ ಗಮನವನ್ನೂ ಆಕರ್ಷಿಸಿ, ಎಲ್ಲರಿಗೂ ಕಿರುಕುಳ ಕೊಟ್ಟು ಸಂಪೂರ್ಣ ಆಧಿಪತ್ಯ ಮಾಡಿ ಕಡೆಗೂ ನಮ್ಮ ಮೇಲೆಯೇ ಸೊಡ್ಡು ಹೊರಿಸಿ ಹೋಗುತ್ತಾರೆ. ಅಂಥವರು ಮನೆಗೆ ಬಂದರೆಂದರೆ ಮನೆಯ ಯಜಮಾನರ ಪ್ರಾಧಾನ್ಯ ಸೊನ್ನೆ. ಮೊದಲು

ಅವರು, ಉಳಿದವರು ಆ ಮೇಲೆ; ಮನೆಯಲ್ಲಿನ ಎಲ್ಲರೂ ಅವರಿಗೆ ಊಳಿಗ ದವರು. ಅಂಥವರ ಆತಿಥ್ಯ ಬಹು ನಯವಾಗಿ ಬಹು ಶ್ರದ್ಧೆಯಿಂದ ನಡೆಯ ಬೇಕು. ಇಲ್ಲವಾದರೆ ಬಂತು ಕಷ್ಟ, ಹಿಂಸೆ,—ಪ್ರಾಣಕ್ಕೇ ಅಪಾಯ. ಪ್ಲೇಗು, ಇನ್‌ಫ್ಲುಎನ್‌ಸಾ, ಟೈಫಾಯಿಡ್ ಜಾತಿಗಳಿಗೆ ಸೇರಿದವರು ಅವರು.

ಕಾಯಿಲೆಗಳಲ್ಲಿ ನಾನಾ ವಿಧಗಳುಂಟು ಎಂದು ಈ ವರೆಗೆ ಸೂಚಿಸಿ ಆಯಿತೇ ಹೊರತು ಇದರಿಂದ ಸಂತೋಷವೇನು ಎಂದು ಹೇಳಿದ ಹಾಗಾಗಲಿಲ್ಲವಲ್ಲವೆ? ನನಗೆ ಇದೇ ಒಗ್ಗಿ ಹೋಗಿದೆ, ಬಹುದಿನದ ಅಭ್ಯಾಸದಿಂದ. ಎಷ್ಟರ ಮಟ್ಟಿಗೆಂದರೆ,—ಒಂದುವೇಳೆ ಅಕಸ್ಮಾತ್ತಾಗಿ ಆರೋಗ್ಯದೆಸೆ ಇದ್ದರೆ, ಮುಂದೇನು ಬರುವುದೋ ಎಂಬ ಚಿಂತೆ. ಕಾಯಿಲೆ ಬಾರದಂತೆ ನೋಡಿಕೊಳ್ಳಬೇಕು ಎಂಬ ಚಿಂತೆ. ವೈದ್ಯರಲ್ಲಿಗೆ ಹೋಗ ಬೇಕು. ಅವರನ್ನು ಈವಿಚಾರ ಆವಿಚಾರ ಕೇಳಬೇಕೆಂಬ ಚಿಂತೆ. ವೈದ್ಯದ ಪುಸ್ತಕಗಳನ್ನು ನೋಡುವುದು, ಔಷಧಿಗಳ ಪ್ರಕಟನೆಯನ್ನು ಓದು ವುದು, ತಿಂಡಿ ಸ್ವಲ್ಪ ಹೆಚ್ಚಾದರೆ ಕಳವಳಗೊಳ್ಳುವುದು, ಹೊಟ್ಟೆ ನುಲಿ ಯುತ್ತೋ ಏನೊ, ಗಂಟಲು ಕೆರೆಯುತ್ತಿಲ್ಲವೆ, ಕೈಯಲ್ಲಿ ಐದೇ ಬೆರಳಿವೆಯಲ್ಲ ಏನುಗತಿ, ಇವನ್ನು ಹೀಗೆಯೆ ಬಿಟ್ಟರೆ ಯಾವುದು ಹೇಗೆ ಪ್ರಕೋಪಿತವಾಗುತ್ತೋ ಎಂದುಕೊಳ್ಳುವುದು. ಇಲ್ಲವಾದರೆ ವೈದ್ಯದ ಪುಸ್ತಕದಲ್ಲಿ ವರ್ಣಿತವಾದ ಎಲ್ಲ ರೋಗಗಳೂ ನನ್ನಲ್ಲಿಯೇ ಇವೆ ಎಂದು ಕೊಳ್ಳುವುದು. ಈ ರೀತಿಯಾಗಿ ಮನಸ್ಸು ಭ್ರಮಿಸಿ ಬಹು ತೊಂದರೆ ಪಡುತ್ತದೆ. ರೋಗಕ್ಕಿಂತ ರೋಗಭಯ ಹೆಚ್ಚು ಭಯಂಕರ. ಭಯ ದಿಂದಲೇ ಅನೇಕ ವೇಳೆ ರೋಗ ಬಂದೂ ಇದೆ. ಅದೇಕೆ ಹೀಗಾಗುವುದು ಎಂಬುದರ ವಿಚಾರವನ್ನು ಯಾರಾದರೂ ಶಾಸ್ತ್ರಜ್ಞರನ್ನು ಕೇಳಿ; ಹೇಳು ವರು. ಅವರಾರೂ ಹೇಳದಾದರೆ ನಾನೇ ಬೇರೊಂದು ಅವಕಾಶದಲ್ಲಿ ತಿಳಿಸುತ್ತೇನೆ. ಈಗ ಇಷ್ಟುಮಾತ್ರ ಹೇಳುತ್ತೇನೆ: ರೋಗದಿಂದ ಭಯ, ಭಯದಿಂದ ರೋಗ ಹೀಗಾಗುವುದು ಸರ್ವಸಾಮಾನ್ಯ. ನನ್ನ ಆರೋಗ್ಯ ಸ್ಥಿತಿ ಭಯಸ್ಥಿತಿ. ಯಾವುದೋ ಏನೋ, ಹೇಗೋ ಎಂದು ಮನಸ್ಸು

ಆಲೆಯುವುದಕ್ಕಿಂತ ಯಾವುದಾದರೂ ಒಂದು ಕಾಯಿಲೆ ಬಂದುಬಿಟ್ಟರೆ ನಿರ್ಭಯ; ಅದು ಬಂದ ದಿನ ಸುದಿನ. ಮನಸ್ಸಿನಲ್ಲಿ ಯಾವ ಸಂದೇಹವೂ ಅನಿಶ್ಚಯವೂ ಉಳಿಯದೆ ಇದು ಹೀಗೆಯೇ ಸರಿ ಎಂಬ ನಂಬಿಕೆಯೂ ದೃಢವೂ ಬಂದು ಬಿಡುತ್ತದೆ. ನಮ್ಮ ಸ್ಥಿತಿಯಲ್ಲಿ ಇದಕ್ಕಿಂತಲೂ ಹೆಚ್ಚಿನ ಶುಭವಿನ್ನೇನನ್ನು ಕೋರಲಾದೀತು? ಕಾಯಿಲೆ ಬಂದಿತು;—ಇರುವಷ್ಟು ದಿನವೂ ಅದನ್ನು ಅನುಭವಿಸಿಬಿಡುವುದು....

ಕಾಯಿಲೆಯ ಭಯವಿಲ್ಲದುದರಿಂದ ನನಗೆ ಸಾವಿನ ಭಯವೂ ಇಲ್ಲ ವೆನ್ನಬಹುದು. ನಾನೂ ಸಾವೂ ದಿನದಿನಕ್ಕೆ ಹೆಚ್ಚು ಪರಿಚಿತರಾಗುತ್ತ ಬಂದಿದ್ದೇವೆ. ಸರ್ವದಾ ಸಮೀಪವರ್ತಿಗಳಾಗುತ್ತಿದ್ದೇವೆ. ಪ್ರಪಂಚದಲ್ಲಿ ಸಾವಿಗೆ ಅಂಜುವವರಷ್ಟು ಹೇಡಿಗಳು ಮತ್ತಾರೂ ಇಲ್ಲ. ಈ ಅಂಶದಲ್ಲಿ ನನಗೆಇಷ್ಟು ಧೈರ್ಯತಂದು ನನ್ನ ಮನಸ್ಸಿಗೆ ಶಿಕ್ಷಣ ಕೊಟ್ಟಿರುವ ಕಾಯಿಲೆಗಳಿಗೆ ನಾನು ಎಷ್ಟು ಕೃತಜ್ಞನಾಗಿದ್ದರೆ ತೀರೀತು? ಎರಡನೆಯದು ಅವುಗಳ ಮೂಲಕ ಲೋಕಾನುಭವ ವಿಶೇಷವಾಗಿ ದೊರೆತಿದೆ. ಓದಿನಿಂದ, ದೇಶಸಂಚಾರದಿಂದ, ಸಜ್ಜನಸಹವಾಸದಿಂದ, ಸ್ವಂತ ಅನುಭವ ಪರೀಕ್ಷೆ ಗಳಿಂದ, ಚರ್ಚೆವಾದಗಳಿಂದ ಕಲಿಯಬೇಕಾಗಿರುವ ಲೋಕದ ಸ್ವಭಾ ವವೂ, ಮಾನವ ಹೃದಯದ ರಹಸ್ಯವೂ, ಜನರ ನಿಜವಾದ ಪ್ರೀತಿ ವಿಶ್ವಾಸ ಗಳ ಆಳವೂ, ಅವರ ಆಸೆ ಆಶಯಗಳ ಆಕಾಂಕ್ಷೆಯೂ ನನಗೆ ಕಾಯಿಲೆ ಕಾಲದಲ್ಲಿ ತಿಳಿದು ಬಂದಿರುವಷ್ಟು ಬೇರಾವ ಸಮಯದಲ್ಲಿಯೂ ತಿಳಿದು ಬಂದಿಲ್ಲ. ನಮ್ಮ ಕಾಯಿಲೆಯಿಂದ ಕೆಲವರಿಗೆ ಅಸಮಾಧಾನ; ಕೆಲವರಿಗೆ ತೊಂದರೆ; ಕೆಲವರಿಗೆ ವ್ಯಾಕುಲ; ಕೆಲವರಿಗೆ ನಷ್ಟ; ಕೆಲವರಿಗೆ ಇದೇನು ಪ್ರಾರಬ್ಧಬಂತಪ್ಪ ಎಂಬ ಜುಗುಪ್ಸೆ; ಕೆಲವರಿಗೆ ಇದೆಲ್ಲೋ ರೋಗದ 'ಗ್ಯಾಬೆ' ಎಂಬ ತಿರಸ್ಕಾರ; ಕೆಲವರಿಗೆ ಮುಂದೇನು ಗತಿಯೆಂಬ ಯೋಚನೆ; ಕೆಲವರಿಗೆ ಅಯ್ಯೋ ಪಾಪ ಎಂಬ ಕರುಣೆ; ಕೆಲವರಿಗೆ ಮಾಡಿ ಮಾಡಿ ಆಯಾಸ; ಕೆಲವರಿಗೆ ಸೋಂಕು ತಟ್ಟೀತೆಂಬ ಭೀತಿ. ಹೀಗೆ ನೂರಾರು ರೀತಿ ಜನರ ವೃತ್ತಿಪ್ರವೃತ್ತಿಗಳು, ಅವು ಕಾರ್ಯಕ್ಕೆ ತಿರುಗುವ ಬಗೆ, ಇವು ಸಂತತವಾಗಿ ಮನಗಾಣುವುವು. ಇವೆಲ್ಲವನ್ನೂ ನೋಡಿ, ಅಯ್ಯೋ ಪಾಪ,

ಅವರು ತಾನೆ ಏನು ಮಾಡಿಯಾರು, ನಾನು ಸತ್ತ ಹೆಣವಲ್ಲ, ಬದುಕಿರುವ ಜೀವವಲ್ಲ, ಎಂದು ಮನಸ್ಸಿನಲ್ಲಿ ಅಂದುಕೊಂಡು ಅವರ ಸಲುವಾಗಿ ಕನಿಕರಪಟ್ಟಿದ್ದೇನೆ. ಮನಸ್ಸಿಗೆ ಈ ಹದ ತಂದಿರುವ ಪ್ರಭಾವ ಕಮ್ಮಿಯದೆ? ಇಷ್ಟು ಉಪಕಾರ ಸಾಲದೆ? ಮೂರನೆಯದು ನನ್ನ ಸುತ್ತುಮುತ್ತಲವರೆಲ್ಲರಿಗೂ ನನ್ನಲ್ಲಿ ಎಷ್ಟರಮಟ್ಟಿನ ಪ್ರೀತಿಯಿದೆ ಎಂಬುದನ್ನು ನನ್ನ ಕಾಯಿಲೆ ತೋರಿಸಿಕೊಡುವುವು. ನನಗೆ ಕಾಯಿಲೆ ಬಂದಾಗ ಅವರು ತೋರುವ ವಿಶ್ವಾಸ ಬೆಂಕಿಗೆ ಹಾಕಿದ ಚಂದನದಂತೆ ಪರಿಮಳಿಸುವುದು. ಅವರೆಲ್ಲರಿಗೂ ನನ್ನಲ್ಲಿ ಅತಿಪ್ರೀತಿ. ಮನೆಗೆಲಸಗಳನ್ನು ಬೇಗ ಬೇಗ ಮುಗಿಸಿಕೊಂಡು, ಒಬ್ಬರಾದಮೇಲೊಬ್ಬರು, ಒಟ್ಟಿಗೆ ಇಬ್ಬರು ಮೂವರು, ಹೆಚ್ಚು ಆವಶ್ಯಕ ಬಿದ್ದಾಗ ಒಟ್ಟಿಗೆ ಎಲ್ಲರೂ ಸುತ್ತಲೂ ಕುಳಿತು ವಿಚಾರಿಸಿಕೊಳ್ಳುವರು. ಜ್ವರ ಇಳಿದಿದೆಯೊ ಇಲ್ಲವೊ, ತಲೆ ನೋವು ನಿಂತಿದೆಯೊ ಹೆಚ್ಚಾಯಿತೊ, ನಿದ್ರೆ ಸ್ವಲ್ಪವಾದರೂ ಬಂದಿತೇ, ಹಸಿವು ಬಾಯಾರಿಕೆ ಆಗುವುದೇನು, ಮೈ ಕೈ ನೋವು ಹೇಗಿದೆ, ಎಂದು ಕೇಳಿ ತಕ್ಕ ಚಿಕಿತ್ಸೆಗಳನ್ನು ಮಾಡಿಸುತ್ತಾರೆ. ಪಥ್ಯ ನಡಸುತ್ತಾರೆ. ಯಾರು ಯಾವ ಉಪಾಯವನ್ನು ಹೇಳಿದರೂ ಎಲ್ಲವನ್ನೂ ಮಾಡುತ್ತಾರೆ; ಯಂತ್ರ ಕಟ್ಟಿಸುವುದು, ಮಂತ್ರ ಹಾಕಿಸುವುದು, ಕಂಡ ದೇವರಿಗೆಲ್ಲ ಕೈಮುಗಿದು ಹರಸಿಕೊಳ್ಳುವುದು, ವಿಜಾಸಲು ತೆಗೆದಿಡುವುದು,—ಇದೇ ಕೆಲಸ ಅವರಿಗೆ. ಸಾಮಾನ್ಯಕಾಲಗಳಲ್ಲಿ ಯಾರಿಗೂ ನಡೆಯದ ಉಪಚಾರಗಳು ನಡೆಯುತ್ತವೆ. ಯಾರೂ ಗಟ್ಟಿಯಾಗಿ ಮಾತನಾಡರು; ಒಳಕ್ಕೆ ಬರುವವರು ನನ್ನ ನಿದ್ರೆಗೆ ಎಲ್ಲಿ ಭಂಗ ಬಂದೀತೊ ಎಂದು ಮೆಲ್ಲಗೆ ಬಾಗಿಲು ತೆಗೆದು ನೆಲಕ್ಕೆ ಕಾಲು ಸೋಕಿತೋ ಇಲ್ಲವೊ ಎಂಬಂತೆ ನಡೆದು ಬಂದು ಕೊಠಡಿಯನ್ನು ಅಣಿಮಾಡಿ ಹೋಗುವರು. ಹೊರಗೆ ಒಳಗೆ, ಅಡಿಗೆಯ ಮನೆ ಹಿತ್ತಲು, ಎಲ್ಲೆಡೆಯಲ್ಲಿಯೂ ಅವರಿಗೆ ನನ್ನ ಮಾತೇ, ನನ್ನ ಯೋಚನೆಯೇ; ಬೇರೊಂದು ಚಿಂತೆಗೆ ಎಳ್ಳಷ್ಟೂ ಎಡೆಗೊಡದೆ ಇರುತ್ತಾರೆ. ಕೆಲವರು ನನಗೆ ಸ್ವಲ್ಪ ಜೊಂಪು ಹತ್ತುವ ವರೆಗೂ ಬಳಿಯಲ್ಲಿಯೇ ಕುಳಿತಿದ್ದು ಹಾಗೆಯೆ ಏನೊ ಚಿಂತಿಸಿ ಹನಿಗೂಡುತ್ತಿರುವ

ಕಣ್ಣಿಂದ ನನ್ನ ಕಡೆ ನೋಡುತ್ತಿದ್ದು ಮೆಲ್ಲಗೆ ಬಿಡುವ ನಿಟ್ಟುಸಿರನ್ನು ತಡೆಯುತ್ತಾರೆ. ನನಗೆ ಎಚ್ಚರವಾಯಿತೆಂದು ತೋರಿದರೆ, ಯಾರನ್ನಾದರೂ ಕೂಗಿದಂತೆ ಕೂಗಿ ತಾವೇ ಆ ಕೆಲಸಕ್ಕೆದ್ದು ಹೋಗುತ್ತಾರೆ. ಹೆಚ್ಚು ಸದ್ದಾಗದಂತೆ ಏರ್ಪಾಡು ಮಾಡುವುದು, ಹೊಸಬಟ್ಟೆಗಳನ್ನು ಹಾಸಿಡುವುದು, ಕೈಗೆಟಕುವಂತೆ ನೀರಿನ ಪಾತ್ರೆಯನ್ನಿಡುವುದು, ದೀಪವನ್ನು ಸಣ್ಣಗೆ ಮಾಡಿ ಮರೆಯಲ್ಲಿಡುವುದು ಮುಂತಾದ ಹತ್ತಾರು ಸಣ್ಣ ಸಣ್ಣ ಕೆಲಸಗಳನ್ನು ಮಾಡುತ್ತ, ಇಷ್ಟು ಪ್ರೀತಿ ಸಾಧ್ಯವೇ ಎನ್ನಿಸುವಷ್ಟು ಪ್ರೀತಿ ತೋರಿಸುತ್ತಾರೆ. ಮನೆಯವರಿಗೆ ನಿಮ್ಮಲ್ಲಿ ಪ್ರೀತಿಯಿದೆಯೆ ಇಲ್ಲವೆ, ಎಂದು ನಿಮಗೆ ತಿಳಿಯಬೇಕಾದರೆ ಕಾಯಿಲೆ ಮಲಗಿಕೊಳ್ಳಿ, ತಿಳಿಯುವುದು. ಯಾರ ಯೋಗ್ಯತೆ ಎಷ್ಟು ಎಂಬುದು ಪತ್ತೆಯಾಗುವುದು. ಮನೆಗೆ ಬರುವವರು ಹಣ್ಣುಹಂಪಲ ತಂದು ಕೊಡುತ್ತಾರೆ. ನಮ್ಮಜ್ಜಿ ಹೇಳುವಂತೆ ತಲೆಯ ಕೆಳಗೆ ಒಂದು ರಾಶಿ ಹಣ್ಣು ಬಿದ್ದಿರುತ್ತದೆ. ನಮ್ಮ ದೇಶದಲ್ಲಿ ಶೇಕಡ ಎಷ್ಟು ಜನಕ್ಕೆ ಈ ಭಾಗ್ಯವುಂಟು? ಹತ್ತಿರದ ಸ್ನೇಹಿತರು ದಿನಕ್ಕೊಂದಾವರ್ತಿ ಎರಡಾವರ್ತಿ ಬಂದು ವಿಚಾರಿಸಿಕೊಳ್ಳುವರು. ಹತ್ತಿರ ಕುಳಿತು ಮಾತಾಡಿ ಹೋಗುವರು. ಕೊನೆಗೆ ನಮ್ಮೊಡನೆ ಪೈಪೋಟಿ ನಡಸುತ್ತಿದ್ದವರೂ ವೈರಿಗಳೂ ತೀರಿಹೋದನೊ ಇಲ್ಲವೊ ನೋಡಿಬರೋಣ ಎಂದು ಮನಸ್ಸಿನಲ್ಲಿದ್ದರೂ, ಎದುರಿಗೆ ಬಂದಾಗ ಎಷ್ಟು ಮೃದುವಾಗಿ ಎಷ್ಟು ಪ್ರೀತಿಯಿಂದ ಮಾತನಾಡಿಸುವರು! ಅವರ ಮನಸ್ಸಿನಲ್ಲಿ ಸಾವಿರವಿರಲೇಳಿ, ನಮಗೂ ಅದಕ್ಕೂ ಏನು ಸಂಬಂಧ? ಅವರುಂಟು, ಅವರ ಕರ್ಮವುಂಟು; ಅವರ ಭಾಗದ ದೇವರುಂಟು. ನಮ್ಮ ಪರವಾಗಿ ಅವರ ನಡತೆ ಚೆನ್ನಾಗಿದ್ದರೆ ನಮಗಷ್ಟೇ ಬೇಕಾದುದು. ಇಲ್ಲದ ಸಲ್ಲದ ಅರ್ಥಗಳನ್ನು ಮಾಡಿ, ಅವರ ಉದ್ದೇಶಗಳನ್ನು ಅಳೆಯುವುದಕ್ಕೇಕೆ ಹೋಗಬೇಕು? ನಾಲ್ಕು—ನನ್ನ ಮನಸ್ಸು ಗಟ್ಟಿಯಾಗಿ ನನಗೆ ಶಾಂತಿಯಿರುವುದರಿಂದ ಎಂಥ ಉಪದ್ರದಲ್ಲಿಯೂ ನನಗೆ ನಗುತ್ತಿರುವುದು ಅಭ್ಯಾಸವಾಗಿದೆ. ಇತರರು ಯಾರಾದರೂ ರೋಗಿಗಳು ಬಂದರೆ ಅವರಿಗೆ ಸಮಾಧಾನ ಹೇಳುವುದಕ್ಕೆ ಅಧಿಕಾರ ಬಂದಿದೆ. ತಮ್ಮ ಸ್ಥಿತಿಯನ್ನು

ನನ್ನದರೊಡನೆ ಹೋಲಿಸಿಕೊಂಡು ಸಮಾಧಾನಪಟ್ಟು ಅವರು ಭರವಸೆ ಹೊಂದುತ್ತಾರೆ. 'ದುಃಖೀ ದುಃಖಾಧಿಕಾನ್ ಪಶ್ಯೇತ್' ಎಂಬುದರಲ್ಲಿ ನಿಜವಿದ್ದರೆ 'ರೋಗೀ ರೋಗಾಧಿಕಾನ್ ಪಶ್ಯೇತ್' ಎಂಬುದರಲ್ಲಿಯೂ ಅತಿ ಕಡಿಮೆಯೆಂದರೆ ಅಷ್ಟೇ ಸತ್ಯವಾದರೂ ಇದೆಯೆಂದು ನಾನು ಹೇಳ ಬಲ್ಲೆ.

ಈ ವರೆಗೆ ಕಾಯಿಲೆಗಳ ಒಂದು ಮುಖ ದರ್ಶನವಾಯಿತು. ಅವಕ್ಕೆ ಇನ್ನೂ ಒಂದು ಮುಖವಿದೆ. ದೈವನಿರ್ಮಿತವಾದ ಈ ಪ್ರಪಂಚದಲ್ಲಿ ದುಃಖೋಪಶಮನವಸ್ತುಗಳೂ ಉಪಾಯ ಸಹಾಯಗಳೂ ಎಷ್ಟಿವೆ ಎಂಬುದೂ, ದೇವರ ಕರುಣೆ ಎಷ್ಟು ಎಂಬುದೂ ನಮಗೆ ಇಂಥ ಕಾಲ ಗಳಲ್ಲಿ ಗೊತ್ತಾಗುತ್ತದೆ. ಜನರಿಗೆ ತಿಳಿವಳಿಕೆ ಕಡಮೆ. ತಮಗೇ ಅತಿಯಾದ ದುಃಖಬಾಧೆ ಎಂದೂ ತಮ್ಮಷ್ಟು ನೋವು ಇನ್ನಾರಿಗೂ ಇಲ್ಲವೆಂದೂ, ಮೊದಲಿಸಿ ಕೊರಗಿ ಇತರರನ್ನೂ ಕೊರಗುವಂತೆ ಮಾಡುತ್ತಾರೆ. ಅತಿ ಯಾದ ಯಾತನೆಗಳು ತೋರದಂತೆ ದೇವರು ಮನುಷ್ಯನಿಗೆ ಅಂಥ ಸಮಯ ಗಳಲ್ಲಿ ತಿಳಿವು ತಪ್ಪಿಸುತ್ತಾನೆ. ಯಾತನೆಯನ್ನು ಮರೆಯಿಸುತ್ತಾನೆ; ಅಥವಾ ಕೊನೆಗಾಣಿಸುತ್ತಾನೆ. ಮಿತಿಮೀರುವ ಸ್ಥಿತಿಗೆ ಅವು ಬಂದಾಗ ನರಳುವವನಿಗೆ ತಿಳಿಯದಂತೆ ಕಾಪಾಡುತ್ತಾನೆ. ಸಣ್ಣ ನೋವುಗಳನ್ನೇ ನಾವು ಕಾಣುವುದು. ದೊಡ್ಡವು ನಮಗೆ ಕಾಣದಂತೆಯೇ ನಾವು ಅವನ್ನು ಕಡೆಹಾಯುವೆವು. ಜ್ವರ ನೂರಮೂರು, ನೂರನಾಲ್ಕು, ನೂರ ಆರು ಡಿಗ್ರಿಗಳಿಗೇರುತ್ತ ಏರುತ್ತ ನಮ್ಮ ಪ್ರಜ್ಞೆ ಹೋಗುವುದು. ನೀವು ಬುದ್ಧಿವಂತರಾಗಿ ಶಾಂತರಾಗಿದ್ದರೆ, ಅದು ಏರುತ್ತಿರುವ ಹಾಗೆಲ್ಲ ಕಣ್ಣೆದುರಿನ ವಸ್ತುಗಳು ಸ್ವಲ್ಪಸ್ವಲ್ಪವಾಗಿ ಮಸುಕಾಗುವುದನ್ನೂ ಆಗುತ್ತಾಗುತ್ತಾ ರೆಪ್ಪೆಗಳು ಕಣ್ಣು ಮುಚ್ಚುವುದನ್ನೂ ವಸ್ತುಗಳೂ ಮನಸ್ಸಿನ ಕಲ್ಪನೆಗಳೂ ಮಂಕಾದ ಹಾಗೆಲ್ಲ ವಿಧವಿಧವಾದ ಆಕಾರ ತಾಳಿ ಹೊಸ ರೀತಿಗಳಲ್ಲಿ ಸೇರಿಕೊಂಡು, ಚಿತ್ತಮೋಹಕವಾದ ರೂಪಗಳನ್ನು ತಾಳುವುದನ್ನೂ ಅನುಭವಿಸಬಹುದು. ಅವುಗಳಿಗೆ ಸ್ವಭಾವವಾಗಿ ಇರುವ ಸ್ಥೂಲತೆಯನ್ನೂ ದೇಹವನ್ನೂ ಉಳಿದು ಶುದ್ಧವಾದ ಆಕಾರವನ್ನೂ

ಆತ್ಮವನ್ನೂ ಅವು ತೋರತೊಡಗುವವು. ಆಕಾಶದ ಮೋಡಗಳಂತೆ ನಿಮಿಷ ನಿಮಿಷಕ್ಕೂ ಹೊಸ ಚಿತ್ರಗಳನ್ನೂ ಸೌಂದರ್ಯಗಳನ್ನೂ ನೇಯುವುವು. ನೋವಿನ ಬೇನೆಯನ್ನು ಮರೆಸುವ ಪ್ರಯತ್ನ ಮಾಡುವುವು. ಜ್ವರದ ಕಾವು ಇಳಿಯಿತೆನ್ನಿ, ದೇಹವೆಷ್ಟು ಲಘುವಾಗುವುದು ಬಲ್ಲಿರಾ? ನಿಶ್ಶಕ್ತಿ ಸ್ವಲ್ಪ ತೋರುವುದು ನಿಜ, ಆದರೆ ಮನಸ್ಸು ಬಹು ತಿಳಿಯಾಗಿರುತ್ತದೆ. ಅದನ್ನು ಅನುಭವಿಸಿರುವವರೇ ಬಲ್ಲರು. ಹಿಂದೆ ಹೊಳೆಯದಿದ್ದ ಎಷ್ಟೋ ಸಂಗತಿಗಳು ಹೊಳೆಯುವುವು. ಪ್ರತಿಭೆ ಜಾಗೃತವಾಗಿ ಅದರ ಓಟ ಹೆಚ್ಚುವುದು. ಬುದ್ಧಿ ವೈದ್ಯನ ಶಸ್ತ್ರದಂತೆ ಹರಿತವಾಗುವುದು. ಅನೇಕರು ನಿಗೂಢ ತತ್ವಗಳನ್ನು ಈ ಸ್ಥಿತಿಯಲ್ಲಿಯೇ ಅರಿತಿದ್ದಾರೆ. ಜ್ವರ ಏರಿರುವಾಗ ಬಂದ ಕವನದ ಉಕ್ಕು ಜ್ವರವಿಳಿದಾಗ ಇಳಿವ ಮನಸ್ಸಿನ ತಿಳಿಯೊಡನೆ ಸೇರಿಕೊಂಡು ಇಂಪಾದ ಗೀತಿಕೆಯಾಗುವುದು. ಕವಿಗಳನ್ನು ಕೇಳಿ, ಹೇಳುತ್ತಾರೆ. ಷೇಕ್ಸ್‌ಪಿಯರ್, ಷೆಲ್ಲೆ, ಸೋಫೊಕ್ಲೀಸ್ ಇವರು ಮಹಾ ಕಾವ್ಯಗಳನ್ನು ಇಂಥ ಸ್ಥಿತಿಯಲ್ಲಿಯೇ ಬರೆದಿರಬೇಕು. ಹೊಟ್ಟೆಯಲ್ಲಿ ಏನೂ ಇಲ್ಲದಿರುವ ಹಸಿವಿನ ಸ್ಥಿತಿಯಲ್ಲಿಯೂ ಜ್ವರದ ಕಾವಿನಲ್ಲಿಯೂ ಚಿಮ್ಮಿ ಎದ್ದು ಬರುವ ಕವಿತೆಯ ತೀವ್ರತೆಯೂ ತಿಳಿಯೂ ಅಲೌಕಿಕ ವಾದುವು. ಭಕ್ತಿ, ಕವನ ಇವುಗಳು ಪರಮ ಪದಕ್ಕೇರಬೇಕಾದರೆ, ಜ್ವರಸ್ಥಿತಿಯಲ್ಲಿಯೇ. ಯುರೋಪಿನಲ್ಲಿ ಮಧ್ಯಯುಗದ ಕಾಲದಲ್ಲಿ ಸನ್ಯಾಸಿ ಸನ್ಯಾಸಿನಿಯರು ಉಪವಾಸಗಳನ್ನು ಮಾಡಿ ಈ ತೆರನಾದ ಭಕ್ತಿಯ ಜ್ವರವನ್ನು ತಂದುಕೊಳ್ಳುತ್ತಿದ್ದರೆಂಬುದು ಪ್ರಖ್ಯಾತ ವಿಷಯ ವಲ್ಲವೆ! ಕವಿಗಳೂ ಹೀಗೆಯೇ. ಪ್ರತಿಭೆಯ ಆವೇಶ ಬಾರದಿರುವ ಕೆಲ ವರು ಕಾವ್ಯ ರಚಿಸಬೇಕೆಂಬ ಉನ್ಮಾದದಲ್ಲಿ ಒಂದು ತೆರನಾದ ಕೃತ್ರಿಮ ಜ್ವರವನ್ನು ಕೂಡ ಬರಿಸಿಕೊಳ್ಳುತ್ತಾರಂತೆ.

ಕಾಯಿಲೆಗಳಲ್ಲಿ ನರಳುವವರಿಗೆ ಇನ್ನೊಂದು ತೆರನಾದ ಧೈರ್ಯ. ಆರೋಗ ದೃಢಕಾಯರಾದವರಿಗೆ ಇರುವಂತೆ ಇವರಿಗೂ ಒಂದು ಕೆಚ್ಚು. ಏನನ್ನು ತಿಂದಾದರೂ ಅವರು ಜೀರ್ಣಿಸಿಕೊಳ್ಳಬಲ್ಲರು. ಏನನ್ನಾದರೂ ತಿಂದುಬಿಡಲು ಇವರು ಹಿಂದೆಗೆಯರು. ನಿತ್ಯವೂ ಸಾಯುವವರಿಗೆ

ಆಳುವವರು ಯಾರು? ಯೋಚನೆ ಮಾಡಬೇಡಿ, ತಂದುಕೊಡಿ, ತಿಂದು ಬಿಡೋಣ ಎಂದು ಬೇಕು ಬೇಕಾದುದನ್ನು ತಿಂದುಬಿಡುವರು. ಯಾರೂ ಕೊಡಲಿಲ್ಲ! ಮನೆಯವರು ಕಾಣದಂತೆ ಕದ್ದಾದರೂ ತಿನ್ನುವರು; ನಾನು ಇನ್ನೊಂದು ಉಪಾಯ ಕಂಡುಹಿಡಿದಿದ್ದೇನೆ. ವೈದ್ಯರ ಮನೆಗೆ ಹೋಗುವುದು; ಅವರು ಕೊಡುವ ಔಷಧವನ್ನು ತಂದು ಸ್ವಲ್ಪವೂ ಅಸಹ್ಯ ಮಾಡಿಕೊಳ್ಳದೆ ಸೇವಿಸುವುದು; ಇದರಿಂದ ನಮ್ಮ ವರ್ತನೆಯಲ್ಲಿ ಮನೆಯವರಿಗೆ ನಂಬಿಕೆ ಬರುವುದಲ್ಲ! ಆ ಮೇಲೆ ವೈದ್ಯರು ಏನೇ ಪಥ್ಯ ಮಾಡೆಂದು ವಿಧಿಸಿದ್ದರೂ ಈ ದಿನ ಇದನ್ನು ತಿನ್ನು ಎಂದರು, ಆ ದಿನ ಅದಾಗಬಹುದು, ವಿರೋಧವಿಲ್ಲ ಎಂದರು, ಎಂದು ಹೇಳುತ್ತ ದಿನಕ್ಕೆ ಒಂದೊಂದು ಹೊಸ ಪದಾರ್ಥವನ್ನು ಹೇಳಿ ನಮಗೆ ಬೇಕು ಬೇಕಾದುದನ್ನು ತರಿಸಿಕೊಂಡು ಮಾಡಿಸಿಕೊಂಡು ತಿಂದುಬಿಡುವುದು. ನಿಮಗೆ ತಂಟೆಯಿಲ್ಲ, ಅವರಿಗೆ ಅನುಮಾನವಿಲ್ಲ. ಔಷಧಕ್ಕೂ ಅಪಥ್ಯಕ್ಕೂ ಕೋಟಲೆ ಬಂದು ಒಂದರ ಸತ್ವವನ್ನು ಇನ್ನೊಂದು ಮುರಿದರೆ ರೋಗ ಉಳಿಯುವುದು ತಾನೇ. ಮತ್ತೂ ಅನುಕೂಲ, ಮೇಲೇ ಆಯಿತು. ಬೇಕಾದುದೇ ಅದು.

ಹಿಂದಿನ ಇನ್‌ಫ್ಲುಎನ್‌ಸಾ ಜ್ವರಗಳ ನೆನಪು ನಿಮ್ಮಲ್ಲಿ ಅನೇಕರಿಗಿರಬಹುದು. ದಿನವೊಂದಕ್ಕೆ ಐವತ್ತರಂತೆ ನೂರರಂತೆ ಪಟ್ಟಣಗಳಲ್ಲಿ ಜನರು ಸತ್ತರು. ದೇಶದಲ್ಲಿ ಒಟ್ಟು ಅರುವತ್ತು ಲಕ್ಷ ಜನ—ಯುರೋಪಿನ ಘೋರ ಯುದ್ಧದಲ್ಲಿ ಸತ್ತವರ ಸಂಖ್ಯೆಗೆ ಒಂದೂವರೆಯಷ್ಟು ಜನ—ಸತ್ತರಲ್ಲ! ಸಾವುಗಳನ್ನು ನೋಡದವರಿಗೆ ಅದು ಎದೆ ಒಡೆಯುವ ಸಮಾಚಾರ. ಸಾಯುವವರಿಗೆ? ಅತಿಯಾದ ಜ್ವರ ಬಂದಿದ್ದವರಿಗೆ ಯೋಚನೆಯೇ ಇಲ್ಲ. ಹೊರಗಿನವರು ಬಳಿಗೆ ಬಂದು ಸಾವುಗಳ ಸುದ್ದಿ ಹೇಳಿ ಇಲ್ಲದ ಭಯಗಳನ್ನು ಅವರ ಎದೆಯಲ್ಲಿ ಬಿತ್ತಿ ತೊಂದರೆಗೊಳಿಸಿದರೇ ಹೊರತಾಗಿ ಇಲ್ಲದಿದ್ದರೆ ಪ್ರಪಂಚದ ಗತಿ ಏನಾಗಿದೆ ಎಂದು ಕುತೂಹಲವಿಲ್ಲದೆ ನಿರ್ಲಕ್ಷ್ಯವಾಗಿ, ನಿರ್ವಿಲಿಪ್ತರಾಗಿ ತಮ್ಮ ಜ್ವರವನ್ನು ತಾವು ಅನುಭವಿಸಿದರು. ಕೆಲವರು ತಮ್ಮಂತೆ ಸಾವಿರಾರು ಜನರಿದ್ದಾರೆಂದು ಸಮಾಧಾನ

ಹೊಂದಿ ಯಾವ ಗತಿ ಬರಲಿ ಅನುಭವಿಸೋಣ ಎಂದು ಧೈರ್ಯಗೊಂಡರು. ಧೈರ್ಯ ಹೇಳುವ ವೇದಾಂತಕ್ಕೆಲ್ಲಾ ಅನೇಕ ವೇಳೆ ಇಂತಹ ಕಾಯಿಲೆಗಳೇ ಮೂಲ. ಜಿಪುಣರು ತಮ್ಮ ಲೋಭವನ್ನು ಬಿಟ್ಟು ಯಾವ ಸಮಯದಲ್ಲಿ ತೀರಿಹೋಗುವೆವೊ ಎಂದು ಧಾರಾಳವಾಗಿ ಖರ್ಚುಮಾಡಿ ಸುಖಪಟ್ಟರು. ಸುಖವಿಲ್ಲದೆ ಒಣಗಿ ಬಾಡಿಹೋಗಿದ್ದ ಅವರ ಮೈಗಳು ನಾಲ್ಕು ದಿನಕಾಲ ಹೊಸರಕ್ತವಿಟ್ಟುವು. ಯುವಕರು ಯಾವಾಗ ತಲೆ ಕೆಳಗಿಡಬೇಕಾಗುವುದೋ ಎಂದು ಬೇಕಾದ ಬಟ್ಟೆಬರೆ ನಗನಾಣ್ಯಗಳನ್ನು ಹಾಕಿಕೊಂಡು ಮೆರೆದರು. ಕೆಮ್ಮು ವಿಶೇಷವಾಗಿ ಬಂದಿತ್ತೆನ್ನಿ—ಮನೆಯಲ್ಲಿ ನಾಲ್ಕು ಹಾಸಿಗೆಗಳಿದ್ದರೆ ಎಲ್ಲರಿಗೂ ಸಮವಾಗಿ ಬರುತ್ತಿತ್ತು. ಒಬ್ಬರು ನಿಲ್ಲಿಸಿದರೆ ಇನ್ನೊಬ್ಬರಿಗೆ ಸರದಿ ನಡೆಯುವುದು. ಕ್ರಮ ಬಿಡದೆ ನಾಲ್ವರೂ ಕೆಮ್ಮನ್ನು ಹಂಚಿಕೊಂಡು ಪರಸ್ಪರ ಧೈರ್ಯಗೊಳ್ಳುತ್ತಿದ್ದರು. ಕಾಯಿಲೆ ಬೀಳದಿದ್ದವರದೇ ಕಾಟ;— ಕೀಳುಪಾಡು.

ಯಾವುದರ ಗುಣವನ್ನೇ ಆಗಲಿ ಅತ್ಯಂತ ವಿಷಮಕಾಲಗಳಲ್ಲಿ ಪರೀಕ್ಷಿಸಬೇಕು ಎಂದು ತಿಳಿದವರು ಹೇಳಿರುವರು. ಇನ್‌ಫ್ಲುಎನ್ಸಾ ಕಾಲದಲ್ಲಿ ಇಂಥ ಪರೀಕ್ಷೆ ನಡೆದು ಸಂಪೂರ್ಣವಾಗಿ ಕಾಯಿಲೆಗಳು ತೇರ್ಗಡೆ ಹೊಂದಿದುವೆಂದು ಧಾರಾಳವಾಗಿ ಹೇಳಬಹುದು.

ದೇವರು ಹಸಿವು ಬಾಯಾರಿಕೆ ನಿದ್ರೆ ಮುಂತಾದುವನ್ನು ಹೇಗೆ ನಿರ್ಮಿಸಿದ್ದಾನೆಯೊ ಹಾಗೆಯೇ ಕಾಯಿಲೆಗಳನ್ನೂ ಅದೇ ಉದ್ದೇಶದಿಂದಲೆ ನಿರ್ಮಿಸಿದ್ದಾನೆ. ದೇಹದ ಆರೋಗ್ಯಕ್ಕೆ ಅವೆಲ್ಲ ಎಷ್ಟು ಆವಶ್ಯಕವೋ ಇವೂ ಅಷ್ಟೇ ಆವಶ್ಯಕ. ಕಾಯಿಲೆ ಬಂದು ಜೀವದಿಂದ ಅನಾರೋಗ್ಯವನ್ನು ಅಟ್ಟಿಬಿಡುತ್ತದೆ. ದೇಹವನ್ನು ಪುನಃ ಆರೋಗ್ಯಕ್ಕೆ ತಂದಿರಿಸುತ್ತದೆ. ನೀವು ಆರೋಗ್ಯವಾಗಿರಬೇಕೆಂಬುದೇ ದೇವರ ಪರಮೇಚ್ಛೆಯಾದುದರಿಂದ ನಿಮಗೆ ಇವನ್ನು ತಂದೊಡ್ಡಿ ಜ್ಞಾನೋದಯವನ್ನು ಉಂಟು ಮಾಡಿಸುತ್ತಾನೆ. ನಿಮ್ಮ ನಡವಳಿಕೆಗಳನ್ನು ಮಾರ್ಪುಗೊಳಿಸುತ್ತಾನೆ. ನಿಮ್ಮ ಜವಾಬ್ದಾರಿಗಳನ್ನು ನಿಮಗೆ ತಿಳಿಸುತ್ತಾನೆ. ಒಬ್ಬರಿಗೊಂದು ಇನ್ನೊಬ್ಬರಿಗಿನ್ನೊಂದು ರೀತಿಯಲ್ಲಲ್ಲ. ಎಲ್ಲರಿಗೆ ಬರುವುದೂ

ಒಂದೇ ತೆರನಾಗಿಯೇ. ಸಾಹುಕಾರರಿಗೆ ಹೆಚ್ಚು ಜ್ವರ ಬಂದೀತು ಬಡವರಿಗೆ ಕಡಮೆ ಬಂದೀತು. ಅವರ ಐಶ್ವರ್ಯಕ್ಕೆ ತಕ್ಕಂತೆ ಹೆಚ್ಚು ಕಾಯಿಲೆಗಳು ಹೆಚ್ಚು ಸಲ ಬಂದಾವು, ನಿಮ್ಮ ಬಡತನಕ್ಕೆ ತಕ್ಕಂತೆ ಕಡಮೆಯವು ಅಪರೂಪಕ್ಕೆ ಆಗೊಂದು ಸಲ ಈಗೊಂದು ಸಲ ಬಂದಾವು. ಆದರೆ ಇಬ್ಬರ ಕಾಯಿಲೆಗಳೂ ಒಂದೇ ಸ್ವಭಾವದವು. ಹೀಗೆ ಕಾಯಿಲೆಗಳಿಗೆ ದೇವರಿಗಿರುವಂತೆ ಸರ್ವಸಮದೃಷ್ಟಿ. ದೇವರ ವಿಚಾರ ನಮಗೇನು ಗೊತ್ತು ಎಂದು ನೀವೆನ್ನುವಿರಾದರೆ ಸರ್ಕಾರಕ್ಕೆ ಪ್ರಜೆಗಳಮೇಲಿರುವ ದೃಷ್ಟಿಯಂತೆ ಎನ್ನೋಣವೆ? ಪ್ರಜೆಗಳ ವರಮಾನಕ್ಕೆ ತಕ್ಕಂತೆ ಅವರು ತೆರಿಗೆಯನ್ನು ಹಾಕುವಂತೆ ನ್ಯಾಯೈಕದೃಷ್ಟಿಯೆಂದು ಬೇಕಾದರೂ ಇಟ್ಟುಕೊಳ್ಳಿ. ದೇವರ ಪ್ರತಿನಿಧಿಯಾಗಿರುವುದು ಈಗ್ಗೆ ಜಗತ್ತಿನಲ್ಲಿ ಸರಕಾರ ಒಂದೇ.

ಎಲ್ಲಕ್ಕೂ ಮೇಲಾದ ಉಪಕಾರ ಕಾಯಿಲೆಯದು ಏನೆಂದರೆ: ನಿಮಗೆ ಸಂಸಾರದ ತಾಪತ್ರಯಗಳೂ ತೊಡಕುಗಳೂ ತಪ್ಪಿಹೋಗುವುವು. ನೀವು ಹಾಸಿಗೆಹಿಡಿದು ಮಲಗಿದ್ದರೆ ನಿಮ್ಮನ್ನು ಆಕ್ಷೇಪಣೆ ಮಾಡುವವರು ಯಾರು? ಮಾಡಿ ಏನು ಪ್ರಯೋಜನ? ಮಾಡುವುದು ಅನ್ಯಾಯವೆಂದು ಎಲ್ಲರೂ ಬಲ್ಲರು. ದುಡ್ಡು ಸಾಲದು—ಸಾಲವಾಯಿತು-ಉಪ್ಪಿಲ್ಲ,ಟೀ ಸೊಪ್ಪಿಲ್ಲ,ಅಕ್ಕಿಯಿಲ್ಲ,ಸೌದೆಯಿಲ್ಲ, ತುಪ್ಪವಿಲ್ಲ, ಸಕ್ಕರೆಯಿಲ್ಲ ಎಂಬ ಯೋಚನೆ ತಪ್ಪುವುದು. ಈ ಕಾಷ್ಟವ್ಯಸನಗಳನ್ನು ಅನುಭವಿಸಲಾರದ ಹೇಡಿಗಳು ಊರು ಬಿಟ್ಟು ಓಡಿಹೋಗುವರು.ಕಾಡಿಗೋಡಿ ಸಂನ್ಯಾಸ ಹಿಡಿಯುವರು. ಧೀರರಾಗಿ ಕಾಯಿಲೆ ಮಲಗಿ ಎರಡುದಿವಸ ಅನುಭವಿಸಬಾರದೆ? ದುಡುಕಿ ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು? ಕೈಯಲ್ಲಿರುವ ಹಣ ಸಾಲದಿರುವಾಗ ಸ್ವಾರ್ಥಪರತೆಯೂ ಕಲಹ ವೈಮನಸ್ಯಗಳೂ ಹೆಚ್ಚುವುವು. ಈ ಕ್ಲೇಶಗಳಿಂದ ರೋಗಿಗೆ ಸಂಪೂರ್ಣವಾದ ಬಿಡುಗಡೆ ಇರುತ್ತದೆ. ಕಾಯಿಲೆಗಳು ಹೀಗೆ ನಮ್ಮ ಸೌಜನ್ಯವನ್ನು ರಕ್ಷಿಸುವುವು. ಕಚೇರಿಗೆ ಹೋಗಿಯೊ ಕೂಲಿ ಮಾಡಿಯೊ ದುಡಿದು ಸಂಬಳ ತರುವ ಕಷ್ಟ ತಪ್ಪುವುದು. ಮನೆಯವರು ಹೊಟ್ಟೆ ಬಟ್ಟೆ ಕಟ್ಟಿ

ತಾವು ಎಷ್ಟೇ ಕಷ್ಟಪಡುತ್ತಿರಲಿ ನಾಲ್ಕು ದಿನ ಕಾಯಿಲೆ ಮಲಗಿರುವವರ ವಿಷಯದಲ್ಲಿ ಆದರ ತೋರಿಸುತ್ತಾರೆ. ತಮ್ಮ ಅಂತಃಕಲಹಗಳಿಂದ ನಿಮ್ಮ ಮನಸ್ಸು ನೋಯುವುದೆಂದು ಅರಿತು ನಿಮ್ಮೆದುರಿಗಾದರೂ ಹೊಂದಿಕೊಂಡು ಹೋಗುತ್ತಾರೆ. ನಾನು ನಿಮಗೆ ಹೇಳುವುದೇನೆಂದರೆ ಸರ್ವದಾ ರೋಗಿಗಳಾಗಿದ್ದರೆ ಪ್ರಯೋಜನವಿಲ್ಲ. ಎಲ್ಲರಿಗೂ ಜುಗುಪ್ಸೆ ಬಂದೀತು. ನಮ್ಮಂಥ ರತ್ನಗಳಾಗಿದ್ದರೇನೋ ಪರವಾ ಇಲ್ಲ. ಆದರೆ ಎಲ್ಲರಿಗೂ ಈ ಪ್ರೀತಿ, ಈ ಕರುಣೆಯ ಸನ್ನಿವೇಶವು ಹೇಗೆ ಸಿಕ್ಕೀತು? ಆಗ, ಈಗ, ನಿಮಗೆ ತುಂಬ ಬೇಸರವಾದಾಗ, ನಾಲ್ಕು ದಿನ ಆದರ ಅರೈಕೆಯ ಬಯಕೆ ಬಂದಾಗ, ಮನೆಯಲ್ಲಿನ ಅಂತಃಕಲಹಗಳು ಹೆಚ್ಚುತ್ತಿವೆಯೆಂದು ತಿಳಿದಾಗ, ದುಡಿತದಿಂದ ಕೆಲವು ದಿನ ವಿಶ್ರಾಂತಿ ಬೇಕೆನ್ನಿಸಿದಾಗ ಮಾತ್ರ ಖಾಲಿಮಾಡದೆ ನೀವು ಕಾಯಿಲೆಮಲಗಿಕೊಂಡು ನೋಡಿ,—ಅವುಗಳ ಮಹೋಪಕಾರಗಳೆಂಥವೆಂಬುದು ನಿಮ್ಮ ಅನುಭವಕ್ಕೇ ಬರುವುದು.



## ಇನ್ನೊಂದು ಪುರಾಣ ~ ~ 'ಜಡಭರತ'

ನಾನಿರೋದು 'ಆರ್ಕಿಯಾಲಾಜಿಕಲ್' ಇಲಾಖೆಯಲ್ಲಿ. ನಮ್ಮಲ್ಲಿ ಈ ಹುಡುಕಾಟದ (ಸಂಶೋಧನದ) ಗೋಳಾಟ ಬಹಳ. ಗೆದ್ದಲು ಹತ್ತಿ ದಂತೆ ಗ್ರಂಥಗಳನ್ನಿಟ್ಟು 'ನಾವು ಇದನ್ನು ಶೋಧಿಸಿದ್ದೇವೆ; ನಮಗಿದು ಭೂಗರ್ಭದೊಳಗಿಂದ ಸಿಕ್ಕಿದೆ; ಇದರ ಕಾಲ ವೇದಕಾಲಕ್ಕಿಂತ ಹಿಂದಿ ನದು; ಹಾಗೇ, ಹೀಗೆ;' ಎಂದು ಬಾಯಿತುಂಬ ಮಾತನಾಡುವವರೆಷ್ಟೋ ಜನ! ಅದರಲ್ಲಿಯೂ ಕಾಲನಿರ್ಣಯ, ಮತನಿರ್ಣಯ, ಜಾತಿ ನಿರ್ಣಯದ ವಿಷಯ ಬಂತೆಂದರೆ ತೀರಿತು, ಈ ಸಂಶೋಧಕರ ಬಾಯಿ ಹಿಡಿದವರೇ ಇಲ್ಲ. ಅದರ ಸಲುವಾಗಿ ತಮ್ಮ ತಮ್ಮೊಳಗೆ ಬಾಯಿಗೆ ಬಾಯಿ (ಅಲಂಕಾ ರಿಕವಾಗಿ) ಹಚ್ಚಿ ಬಡಿದಾಡುತ್ತಾರೆ. ಕೈಗೆ ಕೈ ಸಾಧ್ಯವಿಲ್ಲ; ಯಾಕಂ ದರೆ ಬರಿಯ ಬರೆಹದ ಬಡಿದಾಟ! ಒಮ್ಮೊಮ್ಮೆ– ಅಲ್ಲ ಬಹಳ ಸಲ– ಸಂಶೋಧಕರ ಜಾತಿ ಮತಗಳೇ, ಪಾಪ ಆ ಸಂಶೋಧ್ಯ ಅದೃಷ್ಟ ಅವ್ಯಕ್ತ ವ್ಯಕ್ತಿಗೆ ಅಂಟಿಕೊಳ್ಳುವ ಸಂಭವ ಹೆಚ್ಚು! ಅಭಿಮಾನ ಹೆಚ್ಚಿನದಲ್ಲವೆ? ನಮ್ಮ ಈ ಮಹನೀಯರು ತಮ್ಮ ಅಭಿಮಾನದ ಆವೇಶದಲ್ಲಿ ಇದ್ದವರ ಕಾಲನಿರ್ಣಯ ಮಾಡಿದರೂ ಮಾಡುವವರೇ!

ಮೊನ್ನೆಯೊಮ್ಮೆ ಒಂದು ಮೋಜಾಯಿತು. ಅದನ್ನು ಹೇಳ ಬೇಕೆಂದೇ ನಾನೀಗ ಹೊರಟದ್ದು. ಮೊದಲು ಸ್ವಲ್ಪ 'ಉಪೊದ್ಘಾತ' ಇಲ್ಲವೆ 'ಮುನ್ನುಡಿ' ಬರೆಯಬೇಕಲ್ಲ! ಹಾಗೆಯೆ ಈಗ ಬರೆದದ್ದಾಯಿತು. ಇನ್ನು ಮೇಲೆ ಕಥಾಪ್ರಾರಂಭ.

ಮೊನ್ನೆಯೊಮ್ಮೆ ನಾವೆಲ್ಲರೂ (ಅಂದರೆ ನಮ್ಮ ವರ್ಗದವರೇ) ಒಂದು ಸಂಶೋಧಕವಿಷಯವಿಮರ್ಶೆಗಾಗಿ ಕೂಡಿದ್ದೆವು. ಅಂದೇ

ನಾನು ನನ್ನೊಬ್ಬ ಮಿತ್ರರನ್ನು ಸಹಜವಾಗಿ ಈ ಕೂಟಕ್ಕೆ ಕರೆದುಕೊಂಡು ಹೋಗಿದ್ದೆ. ಪಾಪ, ಅವರು ಹೊಸಬರು. ನಮ್ಮ ಕಾದಾಟವನ್ನೆಲ್ಲ ಅವರು ಸುಮ್ಮನೆ ಕುಳಿತು ಕೇಳುತ್ತಿದ್ದರು. ನಾವು 'ಆದಿಪುರಾಣ'ದ ಪೂರ್ವದಲ್ಲಿ ಪುರಾಣಗಳಿದ್ದುವೇ? ಅಂತ್ಯ ಪುರಾಣವು ಸಿಕ್ಕಿದೆಯೇ? ಎಂಬುದನ್ನು ಒಳ್ಳೇ ಗಂಭೀರವಾಗಿ ವಿಚಾರಿಸುತ್ತಿದ್ದೆವು. ನಡುನಡುವೆ ಸುಂಟರ ಗಾಳಿಯಂತೆ ನಮ್ಮ ಚರ್ಚೆಯು ಯಾವುದೋ ಒಂದು ಸಣ್ಣ ವಿಷಯವನ್ನು ಸುತ್ತಿಕೊಂಡು ಭರ್‌ರ್ ಎಂದು ದೂಳಿಯೆಬ್ಬಿಸಿ ಅದರಲ್ಲಿ ಸಿಕ್ಕವರ ಕಣ್ಣುಗಳನ್ನು ಮುಚ್ಚಿಸುತ್ತಿದ್ದಿತು. ನನ್ನ ಮಿತ್ರರು ಇದನ್ನೆಲ್ಲ ಎಷ್ಟೋ ಹೊತ್ತಿನವರೆಗೆ ಸುಮ್ಮನೆ ಸಾಕ್ಷಿಯಾಗಿ ಕುಳಿತು ನೋಡುತ್ತಿದ್ದವರು ನಮ್ಮ ವಾದ ವಿವಾದದ ಕಾವು ತಗ್ಗಿದೊಡನೆಯೆ ಮುಂದೆ ಒಂದು ಒಮ್ಮೆಲೆ 'ನನಗೆ ಇನ್ನೊಂದು ಪುರಾಣ ಸಿಕ್ಕಿದೆ' ಎಂದರು.

ನಾವೆಲ್ಲರೂ 'ಆಂ!.. ಪುರಾಣ! ಇನ್ನೊಂದು? ಹೇಳಿರಿ! ಹೇಳಿರಿ! ಏನದು? ಎಲ್ಲಿ? ಹೇಗಿದೆ?' ಎಂದು ನಮ್ಮ ವಿಷಯ ಬಿಟ್ಟು ಆತುರದಿಂದ ಅವರನ್ನು ಕೇಳಿದೆವು.

ನನ್ನ ಮಿತ್ರರು ಶಾಂತವಾಗಿ ಗಂಭೀರವಾಗಿ ಸುರುವು ಮಾಡಿದರು.

"ಮೊನ್ನೆ ನಮ್ಮ ಹಳೆಯ ಮನೆ ಬಿಚ್ಚಿಸಿ ಹೊಸ ಮನೆ ಹಾಕಿಸುವಾಗ ಒಂದು ಹಳೆಯ ಗೋಡೆಯನ್ನು ಕೆಡವಿಸಬೇಕಾಯಿತು. ಆಗ ಅದರ ಥರದಲ್ಲಿ ಒಂದು ಸಣ್ಣ ಬೆತ್ತದ ಪೆಟ್ಟಿಗೆ ಸಿಕ್ಕಿತು. ಎಲ್ಲವೂ ಮುರಿದು ಹೋಗಿತ್ತು. ಆದರೂ ಅದನ್ನು ಜೋಪಾನದಿಂದ ತೆಗೆದು ನೋಡಿದೆ. ಅದರಲ್ಲಿ ತಾಳೆಯೊಲೆಗರಿಗಳುಳ್ಳ ಒಂದೆರಡು ಗ್ರಂಥಗಳಿದ್ದವು. ಅವನ್ನು ಹಾಗೆ ತೆಗೆದು ನೋಡಿದೆ. ಬಹಳ ಪುರಾತನದವಿರಬೇಕೆಂದು ನನಗೆನಿಸಿತು."

'ಈಗ ಅವು ನಿಮ್ಮಲ್ಲಿವೆಯೇ? ಎಷ್ಟು ವರ್ಷದ ಹಿಂದಿನವು?' ಎಂದು ಭುಜ ಹಾರಿಸುತ್ತ ಒಬ್ಬ ಸಂಶೋಧಕರು ಕೇಳಿದರು.

'ಓಹೋ, ಇವೆ. ಆದರೆ ಎಷ್ಟು ವರ್ಷದ ಹಿಂದಿನವೆಂಬುದು ನನಗೆ ತಿಳಿಯದು. ಆದರೆ ಎಲ್ಲವನ್ನೂ ಓದಿ ನೋಡಿದ್ದೇನೆ.'

'ನೀವೇ ಓದಿದಿರಾ? ಹಾಗಾದರೆ ನಿಮಗೂ ಈ ವಿಷಯದಲ್ಲಿ

'ಗತಿ' ಇದೆಯೆಂದಂತಾಯಿತು!' ಎಂದು ಒಕ್ಕಣ್ಣಿನ ಸಂಶೋಧಕರೊಬ್ಬರು ಆಶ್ಚರ್ಯದಿಂದ ಕೇಳಿದರು.

'ಬೇಕಾದರೆ ಅನ್ನಿರಿ' ಎಂದು ನನ್ನ ಮಿತ್ರರು ಗಂಭೀರವಾಗಿ ಉತ್ತರಕೊಟ್ಟು ಪುರಾಣ ಮುಂದೆ ಸಾಗಿಸುವಷ್ಟರಲ್ಲಿ ಇನ್ನೊಬ್ಬ ಸಂಶೋಧಕರು ಗುಕ್ಕುಕ್ಕತ್ತ ನಡುವೆಯೆ ಬಾಯಿ ಹಾಕಿ 'ಅಲ್ಲಾ, ಪ್ರಾರಂಭದಲ್ಲಿ ಯಾರ ಸ್ತೋತ್ರವಿದೆ?' ಎಂದು ಕೇಳಿದರು. ಅದಕ್ಕೆ ನನ್ನ ಮಿತ್ರರು 'ಅದಕ್ಕೆ ತುಂಬುರ ಸ್ತೋತ್ರವಿದೆ.' ಎಂದು ಉತ್ತರಕೊಟ್ಟರು.

'ಹಾಗಾದರೆ ಕಥಾವಸ್ತು ಯಾವುದು?' ಎಂದು ಸ್ವಲ್ಪ ಕುತೂಹಲ ಹುಟ್ಟಿ ನಾನೇ ಕೇಳಿದೆ.

'ಹಾಗಾದರೆ ಕಥಾಸಾರಾಂಶವನ್ನೇ ಹೇಳುತ್ತೇನೆ ಕೇಳಿರಿ' ಎಂದು ಅವರು ಪ್ರಾರಂಭಿಸುವಷ್ಟರಲ್ಲಿ ಭುಜ ಹಾರಿಸುವ ಸಂಶೋಧಕರು 'ಆ ಪುರಾಣದ ಹೆಸರೇನ್ರಿ?' ಎಂದು ಕೇಳಿದರು.

'ಪುರಾಣಕ್ಕಿಂತ ಹೆಸರೇ ಹೆಚ್ಚಾಯಿತೇ? ಮೊದಲು ಪುರಾಣದ ಪುರಾಣ ಕೇಳಿರಿ' ಎಂದು ನನ್ನ ಮಿತ್ರರು ಸ್ವಲ್ಪ ಗಟ್ಟಿ ದನಿಯಲ್ಲಿ ಹೇಳಿ ಪುರಾಣದ ಕಥೆಯನ್ನು ಪ್ರಾರಂಭಿಸಿದರು:

'ವಿಷ್ಣುವಿಗೆ ಮೇಲಿಂದ ಮೇಲೆ ಅವತಾರ, ತನಗೇಕಿಲ್ಲ? ಎಂದು ಇಂದ್ರನಿಗೆ ತಾನೂ ಕಲಿಯುಗದಲ್ಲಿ ಅವತಾರ ಮಾಡಬೇಕೆಂದು ಆಶೆಯಾಯಿತು. ಆದರೆ ಹಾಗೆ ಮಾಡಲು ಈಶನಾಜ್ಞೆ ಇದ್ದಿಲ್ಲ. ಅದಕ್ಕೆ ಇಂದ್ರನು ತಪಸ್ಸು ಮಾಡಿದ. ಇದ್ದಲ್ಲಿಂದ ಬ್ರಹ್ಮದೇವನು ಇಳಿದು ಬಂದು ಇಂದ್ರನಿಗೆ 'ಏನು ಬೇಕು?' ಎಂದು ಕೇಳಿದ. ಇಂದ್ರನು ಅವತಾರದ ತನ್ನ ಮನೋಗತವನ್ನು ತಿಳಿಸಲಾಗಿ ಅದಕ್ಕೆ ಬ್ರಹ್ಮದೇವನು ಒಂದು ಕ್ಷಣ ಯೋಚಿಸಿ 'ಕಲಿಯುಗದಲ್ಲಿ ನಾವಾರೂ ಹೀಗೇ ಇದೇ ರೂಪದಿಂದ ಹೋಗುವಂತಿಲ್ಲ. ಹೋದರೆ ಹೊತ್ತುಹೊತ್ತಿಗೆ ರೂಪ ಬದಲಾಯಿಸಬೇಕಾಗುತ್ತದೆ. ನಮ್ಮ ನಿಜರೂಪ ಅವರಿಗೆ ಗೊತ್ತಾಗಬಾರದು. ನೀನು ಹೇಗೆ ಹೋಗುವಿ? ಯಾವ ರೂಪದಿಂದ?' ಎಂದು ಕೇಳಿದನು. 'ಹೊತ್ತು ನೋಡಿ ರೂಪ ಬದಲಾಯಿಸುವ ವಿದ್ಯೆಯನ್ನು ನಾನೂ ಕಲಿ

ತಿದ್ದೇನೆ. ನಾನದನ್ನೆಲ್ಲ ನೋಡಿಕೊಳ್ಳುತ್ತೇನೆ. ತಾವು ಆಶೀರ್ವಾದ ಮಾಡಬೇಕು ಅಷ್ಟೆ' ಎಂದು ಇಂದ್ರನು ಮರುನುಡಿದನು. 'ತಥಾಸ್ತು' ಎಂದು ಹೇಳಿ ಬ್ರಹ್ಮದೇವನು ತನ್ನ ಲೋಕಕ್ಕೆ ಹೊರಟುಹೋದನು. (ಇಲ್ಲಿಗೆ ಮೊದಲನೆಯ ಸಂಧಿ ಮುಗಿದಿದೆ) ಅಲ್ಲಿಂದ ಇಂದ್ರನು ಮಂತ್ರಿ ಮೊದಲಾದವರನ್ನು ಕರೆಯಿಸಿ ಸಭೆ ಕೂಡಿಸಿ 'ಭೂಲೋಕಕ್ಕೆ ಯಾವ ರೂಪದಿಂದ ಹೋಗಬೇಕು?' ಎಂದು ಕೇಳಿದನು. ಯಾರು ಮನುಷ್ಯ ರೂಪವೆಂದು, ಯಾರು ಸ್ತ್ರೀರೂಪವೆಂದು, ಯಾರು ಹುಲಿಯೆಂದು, ಯಾರು ಪಕ್ಷಿಯೆಂದು ತಮತಮಗೆ ತಿಳಿದಂತೆ ಹೇಳಿದರು. ಇಂದ್ರನಿಗೆ ಇವಾವೂ ಮನಸ್ಸಿಗೆ ಬರಲಿಲ್ಲ. ಕೊನೆಗೆ 'ಭೂಲೋಕದಲ್ಲಿ ಹೋಗ ಬೇಕಾದರೆ ಸೂಕ್ಷ್ಮ ಶರೀರಿಗಳಾಗಿ ಹೋಗಬೇಕು. ಅವರ ಕಣ್ಣಿಗೆ ಬಿದ್ದಿರ ಬಾರದು; ನಮ್ಮ ಕಾರ್ಯ ಮಾತ್ರ ಸಾಧಿಸಿರಬೇಕು. ನಿಶ್ಚಯವಾಗಿ ಯಾವ ರೂಪ ಧರಿಸಬೇಕೆಂಬುದನ್ನು ಅಲ್ಲಿಯೆ ಹೋದಾಗ ನಿರ್ಧರಿ ಸೋಣ' ಎಂದು ತಾನೇ ವಿಚಾರಿಸಿ ಹೇಳಿ ಸಭೆ ಮುಗಿಸಿದನು. (ಇಲ್ಲಿ ಎರಡು ಮೂರು ಪಾನುಗಳು ಹರಿದಿವೆ. ಚೆನ್ನಾಗಿ ತಿಳಿಯಲಿಲ್ಲ. ಆದರೂ ಸಂದರ್ಭ ಕಂಡುಹಿಡಿದಿದ್ದೇನೆ.)

"ಏನು ಸ್ವಾಮಿ! ಎಂತಹ ಮಹಾಕಾರ್ಯ ಮಾಡಿದಿರಿ! ನಿಮ್ಮ ಉಪಕಾರವನ್ನು ನಾವು—ಅಲ್ಲ, ಇಡಿ ಕರ್ನಾಟಕವು—ಎಷ್ಟು ಮನ್ನಿಸಿದರೂ ಸಾಲದು! ನಿಮ್ಮಿಂದ ನಿಜವಾಗಿ 'ಪುರಾಣ ಜೀರ್ಣೋದ್ಧಾರವಾಯಿತು.' ಎಂದು ಒಕ್ಕಣ್ಣಿನ ಸಂಶೋಧಕರು ಇನ್ನೂ ಅದೆಷ್ಟೊ ಹೊಗಳು ವವರಿದ್ದರು. ಆದರೆ ಅಷ್ಟರಲ್ಲಿ ನನ್ನ ಮಿತ್ರರು ಮತ್ತೆ ಪ್ರಾರಂಭಿಸಿದರು..

'ಭಗವಂತನು ಇದನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದುಕೊಂಡು ಕೂಡಲೆ ಬ್ರಹ್ಮದೇವನನ್ನು ಕರೆಯಿಸಿ 'ಶುಕ್ರಾಚಾರ್ಯರನ್ನು ಕರೆಯಿಸು' ಎಂದು ಆಜ್ಞಾಪಿಸಿದನು....'

ಇದನ್ನು ಕೇಳಿ ನಮ್ಮ ಒಕ್ಕಣ್ಣಿನ ಸಂಶೋಧಕರು ಸ್ವಲ್ಪ ಗಾಬರಿ ಯಾಗಿ ತಮ್ಮ ಸುತ್ತುಮುತ್ತಲೂ ನೋಡಿದರು. ಎಲ್ಲರ ಲಕ್ಷ್ಯವೂ ನನ್ನ ಮಿತ್ರನ ಕಡೆಗಿತ್ತು. ಒಕ್ಕಣ್ಣಿನ ಸಂಶೋಧಕರು ಸಮಾಧಾನದಿಂದ ಮತ್ತೆ ಕೇಳಹತ್ತಿದರು.

'ಅದೇಕೆ ಭಗವಂತ?' ಎಂದು ಹೆದರುತ್ತ ಬ್ರಹ್ಮದೇವನು ಮರು ನುಡಿದನು. ಭಗವಂತನು ಮುಗುಳು ನಗೆ ನಕ್ಕು 'ಮಗೂ, ನೀನು ಲೋಕಗಳನ್ನು ಹುಟ್ಟಿಸಬಲ್ಲೆಯಾದರೂ ನಿನಗೆ ಆ ಲೋಕಗಳ ಅಂತರಂಗದ ಸೂತ್ರಗಳು ಗೊತ್ತಾಗವು. ನಿಮ್ಮವರ ನೆಲೆಯೇ ನಿನಗಿಲ್ಲ. ಇಂದ್ರನನ್ನು ಭೂಲೋಕಕ್ಕೆ ಏತಕ್ಕೆ ಬಿಟ್ಟೆ?' ಎಂದು ಕೇಳಿದನು. ಬ್ರಹ್ಮದೇವನು ಗಾಬರಿಯಾದನು. 'ಭಗವಂತ, ನನಗೆ ತಿಳಿಯಲಿಲ್ಲ. ಏನಾಯ್ತು ಈಗ?' ಎಂದನು. ಅದಕ್ಕೆ ಭಗವಂತನು ಹುಬ್ಬುಗಂಟಿಕ್ಕಿ 'ಆಗುವದೇನು? ಸಹುಸ್ರಾಕ್ಷನದೇನು ಗೊತ್ತಿಲ್ಲವೇ? ಅದಕ್ಕೇ ಈಗ '**ವೈದ್ಯಪಿತಾಮಹ**'ರಾದ ಶುಕ್ರಾಚಾರ್ಯರನ್ನು ಕರೆಯಿಸು' ಎಂದು ಉತ್ತರಕೊಟ್ಟನು. (ಇಲ್ಲಿಗೆ ಎರಡನೆಯ ಸಂಧಿ ಮುಗಿದಂತೆ ಕಾಣುತ್ತದೆ)

''ವೈದ್ಯಪಿತಾಮಹ' ಎಂದು ಅದರಲ್ಲಿ ಉಂಟೋ?' ಎಂದು ಭುಜ ಹಾರಿಸುತ್ತ ಒಬ್ಬರು ಕೇಳಿದರು. ಅದಕ್ಕೆ ನನ್ನ ಮಿತ್ರರು 'ಓಹೋ, ಇಷ್ಟೇ ಏಕೆ? **ಸಂಜೀವಿನಿಸೂತ್ರ** ಮೊದಲಾದ ವೈದ್ಯ ಗ್ರಂಥಗಳನ್ನು ಬರೆದವರು ಅವರೇ ಎಂದು ಸ್ಪಷ್ಟವಾಗಿ ಅದರಲ್ಲಿದೆ' ಎಂದು ಹೇಳಿದರು.

'ಹುಂ! ಹೊಸಮಾತು! ಇದರಿಂದ ಮಾನವ ಇತಿಹಾಸವೇ ಇನ್ನು ಬದಲಾಗುವ ಲಕ್ಷಣವಿದೆ; ನೋಡಬೇಕು. ಅಲ್ಲಿಂದೇನಾಯಿತು? ಶುಕ್ರಾಚಾರ್ಯರನ್ನು ಕರೆಯಿಸಿದ..' ಎಂದು ಇಷ್ಟೊತ್ತಿನ ವರೆಗೆ ಸುಮ್ಮನೆ ಕುಳಿತಿದ್ದ ಒಬ್ಬ ಚಾಳೀಸಿನ ಸಂಶೋಧಕರು ಆವೇಶದಿಂದ ಕೇಳಿದರು.

'ಅಲ್ಲಿಂದ ಶುಕ್ರಾಚಾರ್ಯರು ಬಂದು ಬಾಗಿ ನಮಿಸಿ 'ಏತಕ್ಕಾಗಿ ಕರೆಯಿಸೋಣವಾಯಿತು, ಪ್ರಭೋ? ನನ್ನಿಂದೇನಾಗಬೇಕಾಗಿದೆ?' ಎಂದು ಕೇಳಿದರು.

'ರಾಕ್ಷಸರ ಗುರುವಾದ ನಿನಗೆ ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳಲು ಈಗೊಂದು ಸುಸಮಯ ಒದಗಿದೆ. ನೀನು ಈಗಲೇ ನಿನ್ನ ರಾಕ್ಷಸ ಪರಿವಾರಸಹಿತ ಭೂಲೋಕಕ್ಕೆ ಹೋಗಬೇಕು.' ಎಂದು ಭಗವಂತನು ಅಪ್ಪಣೆ ಕೊಟ್ಟನು.

ಈ ತರಹದ ಮಾತುಗಳು ಯಾವ ಪುರಾಣಗಳಲ್ಲಿಯೂ ಸಿಕ್ಕುವುದಿಲ್ಲ. ಇದು ತೀರ ಹಳೆಯದಿರಬೇಕು.' ಎಂದು ಒಕ್ಕಣ್ಣಿನವರು 'ಶರಾ' ಹೊಡೆದರು.

'ಅಲ್ಲೇನು ಕಾರ್ಯ, ಪ್ರಭೋ?' ಎಂದು ಶುಕ್ರಾಚಾರ್ಯರು ಅರ್ಥವರಿಯದೆ ಪುನಃ ಕೇಳಿದರು. ಅದಕ್ಕೆ ಭಗವಂತನು 'ಹೆಚ್ಚು ಕೇಳಬಾರದು. ಇಂದ್ರನು ಭೂಲೋಕಕ್ಕೆ ಪರಿವಾರ ಸಹಿತ ಹೋಗಿದ್ದಾನೆ. ಸಂಗೀತವೂ ಸಂಗಡ ಇದೆ. ನೀನು ಹೋಗಿ ಅವನು ಅಲ್ಲಿ ಏನು ಮಾಡುತ್ತಾನೆಂಬುದನ್ನು ಪತ್ತೆ ಹಚ್ಚಿ ನನಗೆ ತಿಳಿಸಬೇಕು. ಭೂಲೋಕದ ನನ್ನ ಭಕ್ತರು ವ್ಯರ್ಥ ತೊಂದರೆಪಡಬಾರದು.' ಎಂದು ತಿಳಿಸಿಕೊಟ್ಟನು.

ಏಕದೃಷ್ಟಿಯಿಂದ ಧ್ಯಾನಿಸುತ್ತ 'ಅಪ್ಪಣೆ' ಎಂದು ನಮಿಸಿ ಶುಕ್ರಾಚಾರ್ಯರು ಹೊರಟು ಹೋದರು. (ಇಲ್ಲಿಗೊಂದು ಸಂಧಿ ಮುಗಿದಿದೆ.) ಮುಂದಿನ ಸಂಧಿಯಲ್ಲಿ ಇಂದ್ರನು ಅಪ್ಸರೆಯರ ಕೂಡ ಭೂಲೋಕಕ್ಕೆ ಹೇಗೆ ಹೋಗಬೇಕೆಂದು ವಿಚಾರ ಮಾಡುತ್ತಾನೆ. ಆಗ್ಗೆ ಒಬ್ಬ ಅಪ್ಸರೆಯು 'ಪ್ರಿಯಾ, ಈಗೇಕೆ ಭೂಲೋಕಕ್ಕೆ ಹೋಗುವದು?' ಎಂದು ಕೇಳುತ್ತಾಳೆ. ಅದಕ್ಕೆ 'ಏನೋ ಭೂಲೋಕದ ಜನರು ಬಹಳ ಚೆಲುವೆಯರಂತೆ. ನೋಡಿಬರಬೇಕೆಂದು ಆಶೆಯಾಯಿತು. ಅದಕ್ಕೇ ಈಗ ಹೋಗುವದು.' ಎಂದು ಮುಚ್ಚುಮರೆಯಿಲ್ಲದೆ ಇಂದ್ರನು ಉತ್ತರ ಕೊಡುತ್ತಾನೆ. 'ಯಾಕೆ, ಅಹಲ್ಯೆಯನ್ನು ಇನ್ನೂ . . . .' ಎಂದು ಬೆದರಿದ ಆ ಅಪ್ಸರೆಯು ತನ್ನ ಮಾತು ಮುಗಿಸುವಷ್ಟರಲ್ಲಿಯೆ ಇಂದ್ರನು 'ಪ್ರಿಯೆ, ಭೂಲೋಕದಲ್ಲಿ, ಈ ಕಲಿಯುಗದಲ್ಲಿ ಗೌತುಮರಾರೂ ಇಲ್ಲ. ಚಿಂತಿಸಬೇಡ.' ಎಂದು ಸಮಾಧಾನಪಡಿಸಿದನು.

ಅಲ್ಲಿಂದ ಎಲ್ಲರೂ ಭೂಲೋಕಕ್ಕೆ ಹೊರಟರು.

ಇದರ ಮುಂದಿನ ಸಂಧಿಯು 'ಸ್ತ್ರೀದರ್ಶನ ಸಂಧಿ.' ಅದರಲ್ಲಿಯ ವರ್ಣನೆಯಂತೂ ಅಪರೂಪವಾಗಿದೆ. ಸನ್ಯಾಸಿಗಳ ಬಾಯಲ್ಲಿಯೂ ನೀರು ಹುಟ್ಟಿಸುವಂತಿದೆ! ಅದರ ರೀತಿ, ಅದರ ಸೂಕ್ಷ್ಮ, ಅದರ ನಯ, ಅದರ ಮಾಧುರ್ಯ, ಅದೆಲ್ಲಿಂದ ಬರಬೇಕು ನನ್ನ ಒರಟು ನಾಲಿಗೆಗೆ? ಆದರೆ ಆ ಸಂದರ್ಭ ಮಾತ್ರ ಹೇಳಿ ಮುಂದೆ ಸಾಗುತ್ತೇನೆ.

ಹುಣ್ಣಿಮೆಯ ರಾತ್ರಿ. ನಿರಭ್ರವಾದ ಆಕಾಶ. ಗಿಡಬಳ್ಳಿಗಳು ಚಿಗಿತು ನಿಂತಿರುವ ಕಾಲ. ಸುಳಿ ಸುಳಿಯಾಗಿ ತಂಗಾಳಿಯು ಬೀಸುತ್ತಿದೆ. ಸ್ವಚ್ಛವಾದ ಸರೋವರವು ಸೃಷ್ಟಿದೇವಿಯ ಈ ಚೆಲುವಿಗೆ ಕನ್ನಡಿ ಹಿಡಿದಂತಿದೆ. ಇಂತಹ ಸಮಯದಲ್ಲಿ ಒಬ್ಬ ಯುವತಿಯು ಕಂಕುಳಲ್ಲಿ ಕೊಡವನ್ನಿಟ್ಟುಕೊಂಡು ಕಾಲಂದುಗೆಯ ಸವಿನಿನಾದದೊಂದಿಗೆ ಸರೋವರದತ್ತ ಹೊರಟಿದ್ದಳು. ಅವಳು ಬಲು ಚೆಲುವೆ! ಸರೋವರಕ್ಕೆ ಬಂದು, ಮೊಳಕಾಲ ವರೆಗೆ ನೀರಲ್ಲಿಳಿದು ಬಾಗಿ ಕೊಡವನ್ನು ತುಂಬಿಸುವಾಗ್ಗೆ ಹುಟ್ಟಿದ ಧ್ವನಿಯ ಪ್ರತಿಧ್ವನಿಯನ್ನು ಕೇಳಿಯೂ ನೀರಲ್ಲಿಯ ತನ್ನ ಬಿಂಬವನ್ನು ನೋಡಿಯೂ ಯಾವುದೋ ಒಂದು ಬಗೆಯ ಆನಂದದಿಂದ ನಕ್ಕಳು.'

"ಆಹಾ! ಏನು ಸುಂದರ ಅದರೀ ವರ್ಣನಾ!" ಎಂದು ಭುಜ ಹಾರಿಸುವ ಸಂಶೋಧಕರು ತಡೆಯಲಾರದೆ ನಡುವೆಯೆ ಬಾಯಿ ಹಾಕಿ ನುಡಿದರು. ನನ್ನ ಮಿತ್ರರು ಅತ್ತ ಲಕ್ಷ್ಯಕೊಡದೆ ಹಾಗೆಯೆ ಮುಂದೆ ಸಾಗಿಸಿದರು.

'ಇದೇ ಸಮಯಕ್ಕೆ ಆ ಸರೋವರದ ದಂಡೆಯ ಮೇಲೆಯೆ ತಳವೂರಿದ ಇಂದ್ರನು ಅವಳನ್ನು ನೋಡಿದ. ತೀರಿತು. ಇಂದ್ರನಿಗೆ ಇಂತಹದನ್ನು ನೋಡಿದರೆ ತಡೆಯುವದಾಗುತ್ತದೆಯೇ! ಮತ್ತೆ ಮತ್ತೆ ಅವಳನ್ನು ನೋಡಿದ. ನೋಡಿ ನೋಡಿದಂತೆ ಅವನ ಮೋಹವು ಹೆಚ್ಚಾಯಿತು. ಅವಳ ಹತ್ತಿರ ಹೋಗಬೇಕೆಂದು ಆಶೆಯಾಯಿತು. ಯೋಚಿಸಿದ. ಕಡೆಗೊಂದು ಯುಕ್ತಿ ಹೊಳೆಯಿತು. ಅಪ್ಸರೆಯರನ್ನೆಲ್ಲ ಕೂಗಿದ. ಕೂಡಲೆ ಅವರೂ ಬಂದರು. ಅವರಿಗೆಲ್ಲ ಹೇಳಿದ. ಏನೆಂದು? ರೂಪ ಬದಲಾಯಿಸಬೇಕೆಂದು. ತಾನು ಮಾತ್ರ ನೀರಿನಲ್ಲಿಯೇ ಅಡಗಿದ್ದು ಸಮಯ ಸಾಧಿಸಿ ಅವಳನ್ನು ಪ್ರವೇಶಿಸುವನಂತೆ. ಅಪ್ಸರೆಯರು ಆ ಯುವತಿಯ ಕೂಡ ಕಾಣದಂತೆ ಹೋಗಬೇಕು. ಸೂಕ್ಷ್ಮ ಶರೀರವನ್ನು ಧಾರಣ ಮಾಡಬೇಕು.'

'ಏನ್ರೀ, ಆ ಸೂಕ್ಷ್ಮರೂಪ ಹೇಗಿತ್ತು, ಏನು, ಎಂತು? ಏನಾದರೂ

ವರ್ಣನ ಮಾಡಿರುವರೇನು?' ಎಂದು ಒಕ್ಕಣ್ಣಾ ಸಂಶೋಧಕರು ಸಂಶೋಧಕ ದೃಷ್ಟಿಯಿಂದ ಕೇಳಿದರು.

'ಅದನ್ನೇ ಹೇಳುತ್ತಿದ್ದೇನೆ; ಸ್ವಲ್ಪ ತಾಳ್ಮೆಯಿರಲಿ. ರೂಪ ಯಾವುದೆಂದರೆ ಸೂಕ್ಷ್ಮ ತುಂಬುರ ರೂಪ—ಕುದುರೆಯ ಮುಖವನ್ನು ಹಾಕಿಕೊಳ್ಳಬೇಕು. ತಿಳಿಯಿತೇ ರೂಪ? ಅಲ್ಲಿಂದ ಅವಳ ಮನೆಗೆ ಹೋಗಿ ಅವಳ ಮೈಯಲ್ಲೆಲ್ಲಾ ಅಮೃತವನ್ನು ಹಾಡಿ ಹಾಡಿ ತುಂಬಿ ಅದನ್ನು ಇಂದ್ರನಿಗೆ ಪ್ರವೇಶಿಸಲು ಯೋಗ್ಯ ಸ್ಥಾನವನ್ನಾಗಿ ಮಾಡಬೇಕು. ಅಲ್ಲಿಂದ ಇಂದ್ರನು ನೀರಿನೊಳಗಿಂದ ಅವಳಲ್ಲಿ ಪ್ರವೇಶಿಸಬೇಕು. ಇಷ್ಟೆಲ್ಲ ಗೊತ್ತಾಯಿತು. ಯುವತಿ ಕೊಡವನ್ನೆತ್ತಿಕೊಂಡು ಮನೆಯ ಕಡೆಗೆ ಹೊರಟಳು. ಅವಳ ಹಿಂದೆಯೆ ಅಪ್ಸರೆಯರೂ (ಈಗ ಕುದುರೆ ಮುಖದವರಾಗಿ) ಹೋಗಿ ಅವಳಿಗೆ ಕಾಣದಂತೆ ಮನೆಯಲ್ಲೆಲ್ಲಾ ತುಂಬಿಕೊಂಡರು. ಯುವತಿಯು ಮನೆಗೆಲಸ ಮುಗಿಸಿಕೊಂಡು ಮುಸುಗು ಹಾಕಿ ಮಲಗಿಕೊಂಡಳು. **ಸೋಬಾನ** ಹಾಡುವಂತೆ ಕೇಳಿಸಿತು. ಯುವತಿ ಮುಸುಗು ತೆಗೆದು ನೋಡಿದಳು. ಯಾರೂ ಕಾಣಿಸಲಿಲ್ಲ. ತಿರುಗಿ ಮುಸುಗು ಹಾಕಿದಳು. ಅಪ್ಸರೆಯರು ಮತ್ತೆ ತಮ್ಮ ವಿರಹ ಗೀತೆಗಳನ್ನು ಹಾಡುತ್ತಾ ಬೆಳ್ಳಬೆಳಗು ಆ ಯುವತಿಯ ಮೈಯಲ್ಲಿ ಅಮೃತವನ್ನು ತುಂಬಿದರು.

ಮರುದಿನ ಮುಂಜಾನೆ ಯುವತಿಯು ಮತ್ತೆ ಸರೋವರಕ್ಕೆ ಹೋದಳು. ಇಂದ್ರನು ಅವಳಿಗಾಗಿ ಕಾದು ಕುಳಿತಿದ್ದ. ಕೊಡ ತುಂಬಿಸುವಾಗ ಕಾಣದಂತೆ ಅವಳ ಕೊಡದಲ್ಲಿ ಬಂದು ಕುಳಿತ. ಯುವತಿಯು ಮನೆಗೆ ಬಂದಳು. ಅಲ್ಲಿಂಧ ಇಂದ್ರನು ಕೊಡದಿಂದ ತಂಬಿಗ್ಗೆ ಹಾರಿದ. ತಂಬಿಗೆಯಿಂದ ವಾಟಗಕ್ಕೆ ಜಾರಿದ. ವಾಟಗದಿಂದ ಯುವತಿಯ ಗಂಟಲಕ್ಕೆ ನುಸುಳಿದ. (ಇಲ್ಲಿಗೊಂದು ಸಂಧಿ ಮುಗಿಯಿತು.)

ಮರುದಿನದಿಂದ ಯುವತಿಗೆ ನಡುಗು ಹಿಡಿಯಿತು. 'ಕಾಮಬಾಧೆ ಇರಬೇಕು. ಚಳಿ ಬಂದವರು ನಡುಗಿದಂತೆ ನಡುಗಿದಳು' ಎಂದು ಬಣ್ಣಿಸಿದ್ದಾನೆ. ಉಪಮೆ ಅಷ್ಟೇನು ಚೆನ್ನಾಗಿಲ್ಲ. ಅಲ್ಲವೇ? ಪಾಪ ಅವರ

ಮನೆಯವರು ವೈದ್ಯರನ್ನು ಕರೆಯಿಸಿದರು. ಶುಕ್ರಾಚಾರ್ಯರೇ ವೈದ್ಯರಾಗಿ ಬಂದರು. ಇಂದ್ರನನ್ನು ಅವಳ ಹೊಟ್ಟೆಯಲ್ಲಿ ನೋಡಿ ನಕ್ಕರು. '**ಕ್ವನಾನಾ ಚೂರ್ಣ**'ವನ್ನು ಕೊಟ್ಟರು. ಕ್ವನಾನಾ-ಚೂರ್ಣಕ್ಕೆ ನನಗೆ ಅರ್ಥವೇ ಹತ್ತಲಿಲ್ಲ.

'ಕಾಮಬಾಧೆ ಚಳಿಯಾದ ಮೇಲೆ, ಕ್ವನಾನಾ ಇದು ಕ್ವಿನಾಯಿನೋ ಮತ್ತೆ?' ಎಂದು ಚಾಳೀಸಿನ ಸಂಶೋಧಕರು ನಗೆಯಾಡಿದರು.

'ಪ್ರಾಕ್ತನ ವಿಮರ್ಶೆ ನಡೆದಾಗ ನಗೆಯೇ?' ಎಂದು ನನ್ನ ಮಿತ್ರರು ಸ್ವಲ್ಪ ಸಿಟ್ಟಿನಿಂದ ಗದ್ದರಿಸಿ ಮುಂದೆ ಸಾಗಿದರು. 'ಮುಂದೆ ಕೇಳಿ, ಅಲ್ಲಿಂದ ಇಂದ್ರನು ಒಳಗೇ ಸಿಕ್ಕನು! ಅವನನ್ನು ಮುಸುಕು ಹಾಕಿ ಕಟ್ಟಿದಂತಾಗಿತ್ತು. ಅಪ್ಸರೆಯರೆಲ್ಲ ಗಾಬರಿಯಾದರು. ವೈದ್ಯನು (ರಾಕ್ಷಸ ಗುರುವಲ್ಲವೇ!) ಸುಮ್ಮನೆ ಬಿಡುವನೇ! ಹಿಂದಿನ ಸುರಾಸುರ ಯುದ್ಧದ ಸೇಡನ್ನು ಈಗ ಈ ದ್ವಂದ್ವ ಯುದ್ಧದಲ್ಲಿ ತೀರಿಸಿಕೊಳ್ಳಬೇಕೆಂದು ಶುಕ್ರಾಚಾರ್ಯರು ಶಿಷ್ಯಸಹಿತ ಪ್ರಯತ್ನ ಪಟ್ಟರು. ಇಂದ್ರನು ಮಣಿಯಲಿಲ್ಲ. ದಿನದಿನಕ್ಕೆ ಬೆಳೆದು ಹೊಟ್ಟೆತುಂಬಾದನು. ಒಳಗೆ ಕುಳಿತು ಹೊರಗೆ ಹಾಡುವ ಅಪ್ಸರೆಯರ ಹಾಡುಗಳನ್ನು ಕೇಳುತ್ತಿದ್ದನು. ಗಾಬರಿಯಾಗಬೇಡಿರೆಂದು ಅಪ್ಸರೆಯರಿಗೆ ಹೇಳುತ್ತಿದ್ದನು. ಒಳಗೆ ಕುಳಿತಿದ್ದ ಇಂದ್ರನಿಗೆ ಅಪ್ಸರೆಯರು ಅಮೃತವನ್ನು ದಿನಾಲು ಯಾರಿಗೂ ಕಾಣದಂತೆ ಕುಡಿಯಲು ಕಳುಹುತ್ತಿದ್ದರು. ಕೊನೆಗೆ ದೇವಲೋಕದ ಅಮೃತದಿಂದ ಮಾನವ ಯುವತಿಯು ಅಮರಳಾದಳು. ಇಂದ್ರನೂ ಅವಳೂ ಕೂಡಿಯೇ ಸ್ವರ್ಗವಾಸಿಗಳಾದರು. (ಇಲ್ಲಿಗೆ ಸ್ವರ್ಗಗಮನ ಸಂಧಿ ಮುಗಿಯಿತು.)

ನನಗೆ ಸಿಕ್ಕದ್ದರಲ್ಲಿ ಇಷ್ಟೇ ಇದೆ. ಮುಂದೆ ಇನ್ನೂ ಇರಬಹುದೊ ಏನೋ! ಅದು ನನಗೆ ಸಿಕ್ಕಿಲ್ಲ. ಆಯಿತು, ಹೊತ್ತಾಯಿತು, ಇನ್ನು ಹೊರಡೋಣ' ಎಂದು ನನ್ನ ಮಿತ್ರರು ಎದ್ದರು. ಆಗ್ಗೆ 'ಈ ಪುರಾಣದ ದ ಹೆಸರೇನು? ಹೇಳಲೇ ಇಲ್ಲಲ್ಲ!' ಎಂದು ಭುಜಹಾರಿಸುವ ಸಂಶೋಧಕರು ಮತ್ತೊಮ್ಮೆ ಕೇಳಿಯೇ ಬಿಟ್ಟರು.

ನನ್ನ ಮಿತ್ರರು ಹೊರಗೆ ಹೋಗುತ್ತ "ಈ ಪುರಾಣದ ಹೆಸರೇ?

'**ಚಳಿಜ್ವರ ಪುರಾಣ!**' " ಎಂದು ಇನ್ನೂ ಗಂಭೀರವಾಗಿಯೆ ಉತ್ತರ ಕೊಟ್ಟರು.

'ಇದನ್ನು ಬರೆದವರು ಯಾರು? ಯಾವಾಗ?' ಎಂದು ಒಕ್ಕಣ್ಣಿನ ಸಂಶೋಧಕರು ಕಣ್ಣು ಮುಚ್ಚಿ ಕೇಳಿದರು.

ನನ್ನ ಮಿತ್ರರು ಗಡಿಬಿಡಿಯಿಂದ ನನ್ನನ್ನಗಲಿ ಇನ್ನೂ ಮುಂದೆ ಹೋಗಿ ನಮ್ಮ ಆಫೀಸಿನ ಹೊರಬಾಗಿಲದಾಚೆಗೆ ನಿಂತು '**ನಾನೇ ಈಗ**' ಎಂದು ನಗುತ್ತ ಮರೆಯಾದರು.

ಅವನ ಮುಖವರಳಿತು. ನಮ್ಮ ಪರದು ಕೆರಳಿತು.

ನಾನು ನಡುವೇ ನಿಂತೆ. ಎಲ್ಲರೂ ನನ್ನನ್ನು ನುಂಗುವಂತೆ ನೋಡಿದರು.

'ಹಾಗಾದರೆ **ಕ್ವಿನಾನಾಚೂರ್ಣವು** ಕ್ವಿನಾಯಿನೇ ಆಯಿತಲ್ಲ!' ನಾನೆಂದೆ.

'ಹಾಗಾದರೆ ಹಾಳು ಸೊಳ್ಳೆಗಳು ಅಪ್ಸರೆಯರೋ! ಸರಿ, ಒಳ್ಳೇ **ಪುರಾಣ!**' ಎಂದು ಶಾಂತ ಸ್ವಭಾವದ ಚಾಳೀಸಿನ ಸಂಶೋಧಕರು ತಲೆ ಹಾಕಿದರು.



## ಆತ್ಮಹತ್ಯಾಯೋಗ

ಅ. ನ. ಕೃಷ್ಣರಾಯ

ಸಾವಿನ ಹಿಂದೆ ದುಃಖ, ಕರುಣೆ, ವೇದನೆ, ಸಹಾನುಭೂತಿಗಳು ಸಾಮಾನ್ಯವಾಗಿರುತ್ತವೆ. ಈ ಭಾವಗಳ ಹೊಡೆತಕ್ಕೆ ಸಿಕ್ಕ ಸಾವಿಗೆ ಒಂದು ಪಟ್ಟವೂ ಸಿಕ್ಕಿಬಿಟ್ಟಿದೆ. ಯುದ್ಧದಲ್ಲಿ ಸತ್ತವರು ಅನೇಕರು ಬದುಕುತ್ತಾರೆ. ಅವರ ಹೆಸರಿನಲ್ಲಿ ನಾನಾ ಕೆಲಸಕಾರ್ಯಗಳಾಗುತ್ತವೆ. ಕೊನೆಗೆ ಮನೆಯಲ್ಲಿ ಆಯುಸ್ಸು ಮುಗಿದು ಸತ್ತವನು ಕೂಡ ವರ್ಷ ಕ್ಕೊಮ್ಮೆ ಸ್ಮರಿಸಲ್ಪಡುತ್ತಾನೆ. ಸಾವಿಗೆ ಬೇಕಾದ ಪರಿಕರಗಳು ಸಿದ್ಧ ಗೊಳಿಸಲ್ಪಟ್ಟಿವೆ. ಬದುಕಿದ ಮನುಷ್ಯ ಸತ್ತು ಹೆಣವಾದ ಕೂಡಲೆ ಅವನ ಮೇಲೆ ಅನೇಕಾನೇಕ ಕರ್ಮ ಸಂಸ್ಕಾರಗಳು ಜರುಗುತ್ತವೆ. ಬದುಕಿ ದಾಗ ಅನುಭವಿಸದಿದ್ದ ಅನೇಕ ಐಹಿಕ ಸುಖಗಳನ್ನು ಅವನು ಸತ್ತು ಅನುಭವಿಸುತ್ತಾನೆ. ಹೆಂಡತಿ-ಮಕ್ಕಳು, ಬಂಧು-ಬಳಗ, ಇಷ್ಟ-ಮಿತ್ರರು ದುಃಖಾವೇಗದಲ್ಲಿ ಆಡುವ ಮಾತುಗಳನ್ನು ಕೇಳಿದ ಸತ್ತ ಮನುಷ್ಯ ಎದ್ದು ಬಂದು ಇವರೆಲ್ಲರ ದುಃಖವನ್ನು ಉಪಶಮನ ಮಾಡಬೇಕೆಂದು ಬಯಸಿದರೆ ತಪ್ಪೇನ್ನಲಾಗುವುದಿಲ್ಲ. ಮುಸಲ್ಮಾನ, ಕ್ರೈಸ್ತರಲ್ಲಿ ಸತ್ತವನು ದೈವಾಂಶ ಸಂಭೂತನಾಗಿಬಿಡುತ್ತಾನೆ. ಅವನಿಗಾಗಿ ವಿಶೇಷ ಗೌರವ ಸಲ್ಲುತ್ತದೆ. ವೀರಶೈವರು ಸಾಯುವ ಧೈರ್ಯವನ್ನು ಕೊಡುವುದಕ್ಕೆ 'ಶರಣರನ್ನು ಮರಣದಲ್ಲಿ ನೋಡು' ಎಂಬ ಮಹಾ ಮಂತ್ರವನ್ನು ಉದ್ಘೋಷಿಸಿದ್ದಾರೆ. ವೇದ, ಕುರಾನ, ಬೈಬಲ್ಲುಗಳೆಲ್ಲದರಲ್ಲಿಯೂ 'ಸಾಯುವುದಕ್ಕೆ ಹೆದರಬೇಡಿ' ಎಂಬ 'ಅಭೀಃ' ಮಂತ್ರವು ಉಪದೇಶಿ ಸಲ್ಪಟ್ಟಿದೆ.

ಆದರೆ ಆ ಸಾವು ಕೆಲವು ರೀತಿಯಲ್ಲಿ ಮಾತ್ರ ಸಾಗಬೇಕು. ಕಾಹಿಲೆ ಬಿದ್ದು ಹಾಸಿಗೆಯ ಮೇಲೆ ನರಳುತ್ತ ಸಾಯಬಹುದು; ಮೋಟಾರಿನ

ಅಪಘಾತಕ್ಕೆ ಸಿಕ್ಕಿ ಸಾಯಬಹುದು; ಹೃದಯ ವಿಕಾರದಿಂದ ತಾಂಬೂಲವನ್ನು ಮೆಲ್ಲುತ್ತಾ 'ಬುಟ್ಟಿಯನ್ನು' ಒದೆಯಬಹುದು–ಆದರೆ ಆತ್ಮಹತ್ಯೆ ಮಾತ್ರ ಮಾಡಿಕೊಳ್ಳಕೂಡದು.

ದೇವಭಾಷೆಯಾದ ಸಂಸ್ಕೃತವೂ ಪರಿಪೂರ್ಣವಲ್ಲವೆನ್ನುವುದಕ್ಕೆ 'ಆತ್ಮಹತ್ಯ' ಪದವೇ ಸಾಕ್ಷಿ. ಸಾಕ್ಷಾತ್ ಗೀತಾನಾಯಕನೇ 'ನೈನಂ ಛಿಂದಂತಿ ಶಸ್ತ್ರಾಣಿ। ನೈನಂ ದಹತಿ ಪಾವಕಃ। ನ ಚೈನಂ ಕ್ಲೇದಯಂತ್ಯಾಪೊ ನ ಶೊಷಯತಿ ಮಾರುತಃ।' ಎಂದು ಹೇಳಿದನು. ಮಾಡಿದರೂ ಆತ್ಮ ಸಾಯುವುದಿಲ್ಲ ಎಂದು ಹೇಳಿದರೂ 'ಆತ್ಮಹತ್ಯ' ಪದ ಹೇಗೆ ಚಲಾವಣೆಗೆ ಬಂದುಬಿಟ್ಟಿದೆ. ಮನುಷ್ಯ ತನ್ನ ಕೈಯಿಂದ ತಾನೇ ಸತ್ತರೆ ಆತ್ಮಹತ್ಯವೆಂದು ಕರೆಯುತ್ತಾರೆ. ಇದು ಯಾವ ಸ್ವರೂಪವನ್ನು ಬೇಕಾದರೂ ತೆಗೆದುಕೊಳ್ಳಬಹುದು. ನೈಟ್ರಿಕ್ ಆಸಿಡ್, ಪೊಟಾಸಿಯಂ ಸೈನೇಡ್ ಮೊದಲಾದ ತಂಪಾದ ಪಾನೀಯಗಳನ್ನು ಸ್ವೀಕರಿಸಬಹುದು, ನೇಣು ಹಾಕಿಕೊಳ್ಳಬಹುದು, ಮೋಟಾರು ರೈಲುಗಳಿಗೆ ಸಿಕ್ಕಿಕೊಳ್ಳಬಹುದು, ಚಾಕು, ಚೂರಿ, ಪಿಸ್ತೂಲುಗಳನ್ನು ಉಪಯೋಗಿಸಬಹುದು, ಎತ್ತರದ ಮಹಡಿಯಿಂದ ಬೀಳಬಹುದು, ಕೆರೆ, ಭಾವಿ, ಸಮುದ್ರಗಳನ್ನು ಆಶ್ರಯಿಸಬಹುದು. ಗಮ್ಯ, ಯಾವದಾದರೂ ಗುರಿ ಒಂದೇ! ಎದೆಯಲ್ಲಿ ಅವಲಕ್ಕಿ ಕುಟ್ಟುವುದು ನಿಲ್ಲಬೇಕು; ಉಸಿರು ಸುಸ್ತಾಗಬೇಕು; ಕೈಕಾಲು ತಣ್ಣಗಾಗಬೇಕು; ಕಣ್ಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಳ್ಳಬೇಕು–ಆ ಪ್ರಾಣಿ ಸಂಪೂರ್ಣವಾಗಿ ಸಾಯಬೇಕು. ಈ ಪ್ರಯತ್ನಗಳನ್ನು ಮಾಡಿ ವಿಫಲನಾಗುವವನೂ ಯುದ್ಧರಂಗದಿಂದ ಹಿಮ್ಮೆಟ್ಟುವವನೂ ಒಂದೇ ತರಗತಿಗೆ ಸೇರುತ್ತಾರೆ. ಕೋರ್ಟು, ಕಛೇರಿ ಹತ್ತಬೇಕಾಗುತ್ತದೆ; ಜುಲ್ಮಾನೆ ಸಜಗಳನ್ನು ಅನುಭವಿಸಬೇಕಾಗುತ್ತದೆ. ಸಾಯಬೇಕೆಂಬ ನಿರ್ಧಾರಕ್ಕಿಂತಲೂ, ಅಕಸ್ಮಾತ್ತಾಗಿ ಬದುಕಿದರೆ ಆಗುವ ಅನುಭವಗಳಿಗೆ ಹೆದರಿ ಮನುಷ್ಯ ತನ್ನನ್ನು 'ಒಪ್ಪ' ಮಾಡಿಕೊಳ್ಳುವ ಕೆಲಸವನ್ನು ಅಚ್ಚುಗಟ್ಟಾಗಿ ನೆರವೇರಿಸುತ್ತಾನೆ.

ಆದರೆ ಸಾವಿಗಿರುವ ಸ್ಥಾನ, ಮರ್ಯಾದೆ, ಘನತೆ ಆತ್ಮಹತ್ಯಕ್ಕಿಲ್ಲ.

ಕ್ರೈಸ್ತರು ಆತ್ಮಹತ್ಯ ಮಾಡಿಕೊಂಡವನ ಶವವನ್ನು ತಮ್ಮ ಪ್ರೇತ ಭೂಮಿಯಲ್ಲಿ ಹೂಳಿಸುವುದಿಲ್ಲ. ಹಿಂದುಗಳು ಅವನಿಗೆ 'ಪಿಶಾಚಿ'ಯ ಪಟ್ಟ ಕಟ್ಟುತ್ತಾರೆ. ಅವನು ಸತ್ತಂದಿನಿಂದ ಅವನ ಮನೆಯವರು ಅಂತ್ಯಜರಾಗುತ್ತಾರೆ. ಸಮಾಜದಲ್ಲಿ ಅವರ ಸ್ಥಾನಕ್ಕೆ ಚ್ಯುತಿ ಬರುತ್ತದೆ. ಅವರ ಬದುಕು–ಬಾಳು ಸಾವಿಗಿಂತ ಕಡೆಯಾಗುತ್ತದೆ. ಆತ್ಮಹತ್ಯಕ್ಕೀಡಾದ ಪ್ರಾಣಿಯ ವಿಚಾರ ಪಿಸುಮಾತಿನಲ್ಲಿ ಸಾಗುತ್ತದೆ. ನಾಲ್ಕು ಜನ ಸೇರಿದಾಗ ಅವನ ಹೆಸರೆತ್ತುವುದು ಘೋರ ಅಪರಾಧವಾಗುತ್ತದೆ.

ಈ ಬಗೆಯ ಸಾಮಾಜಿಕ ನಿಷೇಧಕ್ಕೆ ನ್ಯಾಯದ ಸಮ್ಮತಿಯಿಲ್ಲ. ಸಮಾಜದ ಶೀಲ ಸಿಸ್ತುಗಳನ್ನು ನಿಯೋಜಿಸುವ ಮುಂದಾಳುಗಳಿಗೆ ಕಾವ್ಯ, ಇತಿಹಾಸ, ಪರಂಪರೆಗಳ ಪರಿಚಯವಿಲ್ಲದಿರುವುದೇ ಈ ದಬ್ಬಾಳಿಕೆಗೆ ಮೂಲಕಾರಣವೆನ್ನಬಹುದು. ರಾಮಾಯಣ, ಮಹಾಭಾರತ ಕಾಲಗಳಿಂದಲೂ ಆತ್ಮಹತ್ಯಕ್ಕೆ ಮಹತ್ವವಿದೆ. ಗಂಡ ಸತ್ತಮೇಲೆ ಹೆಂಗಸು ಅವನ ಚಿತೆಯ ಮೇಲೆ ಸುಟ್ಟುಕೊಳ್ಳುವುದು 'ಸತಿ' ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಉತ್ತರ ರಾಮಾಯಣದಲ್ಲಿ ಸ್ವಯಂ ಸೀತಾದೇವಿಯೇ ಲೋಕದ ಪರುಷ ವಚನಗಳನ್ನು ಸಹಿಸಲಾಗದೆ ತನ್ನ ಇಹಲೋಕದ ವ್ಯಾಪಾರವನ್ನು ಮುಗಿಸುತ್ತಾಳೆಂದು ಉಲ್ಲೇಖವಾಗಿದೆ. ಗಯಟೆಯ ವರ್ತಕ, ಷೇಕ್ಸಪಿಯರನ ರೊಮಿಯೋ, ನಿಜಮಿಯ ಫರ್ಹಾಡ ಮೊದಲಾದ ಶೃಂಗಾರ ನಾಯಕರು ಆತ್ಮಹತ್ಯ ಮಾಡಿಕೊಂಡು ಅಮರವಾದ ಸ್ವರ್ಗವನ್ನಡರಿದ್ದಾರೆ. ಅವರ ಮೇಲಣ ಕಾವ್ಯಗಳನ್ನು ಆನಂದದಿಂದ ಇಂದಿಗೂ ಜನ ಓದಿ ಆನಂದಿಸುತ್ತಾರೆ. ವಿಜಯನಗರದ ಅರಸರು ಯುದ್ಧದಲ್ಲಿ ಮಡಿದರೆ ಅವರ ಸಹಸ್ರಾರು ಮಡದಿಯರು ಮತ್ತು ಬಂಗಾರದವರು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದುದು ಇತಿಹಾಸ ಪ್ರಸಿದ್ಧವಾಗಿದೆ. ಸ್ವಯಂವರ–ಸ್ವಯಂ ವಧುಗಳಿಗೆ ಹಿರಿಯರ ಅಪ್ಪಣೆ ದೊರೆಯದಿದ್ದರೆ ಪ್ರಿಯ ಪ್ರೇಯಸಿಯರಿಬ್ಬರೂ ಆತ್ಮಹತ್ಯ ಮಾಡಿಕೊಳ್ಳುವುದು ಜಪಾನಿನಲ್ಲಿ ಪ್ರಸಾರದಲ್ಲಿದೆ. ಆತ್ಮಗೌರವದ ಸಲುವಾಗಿ ಆತ್ಮಹತ್ಯ ಮಾಡಿಕೊಳ್ಳುವುದು ಹಿರಿತನದ ಲಕ್ಷಣವೆಂದು ಜಪಾನಿನಲ್ಲಿ ಇಂದಿಗೂ ಗಣಿಸಲ್ಪಡುತ್ತಿದೆ.

ಇತ್ತೀಚಿನ ಘಟನಾವಳಿಗಳಿಂದ ಆತ್ಮಹತ್ಯೆಗೆ ಒಂದು ವಿಶಿಷ್ಟ ಸ್ವರೂಪ ಬಂದುಬಿಟ್ಟಿದೆ. ಹಿಟ್ಲರ್, ಮುಸಲೋನಿಗಳ ದಬ್ಬಾಳಿಕೆಯನ್ನು ಸಹಿಸಲಾಗದೆ ಸಾವಿರಾರು ಮಂದಿ ಜ್ಯು ಜನರು ಆತ್ಮಹತ್ಯ ಮಾಡಿ ಕೊಂಡರು. ಆಸ್ಟ್ರಿಯಾ, ಜೆಕೊಸ್ಲೋವಾಕಿಯಾ ಆಕ್ರಮಣವಾದ ಮೇಲೆ ಅಲ್ಲಿನ ಅನೇಕ ಮುಖ್ಯ ನಾಯಕರು ಆತ್ಮಹತ್ಯ ಮಾಡಿಕೊಂಡರು. ಆತ್ಮಹತ್ಯೆಯ ಬಗ್ಗೆ ಹಿಂದಿದ್ದ ಕೀಳು ಅಭಿಪ್ರಾಯವೂ ತುಚ್ಛ ಭಾವನೆಯೂ ಕ್ರಮಕ್ರಮೇಣ ಲಯವಾಗಿ ಅದಕ್ಕೆ ಯಥೋಚಿತವಾಗಿ ಸಲ್ಲಬೇಕಾದ ಹಿರಿಯ ಸ್ಥಾನ ದೊರೆಯಲಾರಂಭವಾಗಿದೆ.

ಆತ್ಮಹತ್ಯೆಗೆ ಧರ್ಮದ ಪಟ್ಟವನ್ನು ಕಟ್ಟಿರುವವರಲ್ಲಿ ಜೈನರು ಗಮನಾರ್ಹರು. ವಾರ್ಧಕ್ಯದಲ್ಲಿ ಉಪವಾಸ ಮಾಡಿ (ಸಲ್ಲೇಖನ) ಪ್ರಾಣವನ್ನು ತ್ಯಜಿಸುವುದು ಅವರಲ್ಲಿ ಒಂದು ಮುಖ್ಯ ವ್ರತವೆನಿಸಿ ಕೊಂಡಿದೆ. ಚಂದ್ರಗುಪ್ತ ಚಕ್ರವರ್ತಿಯಂಥಹ ಪರಾಕ್ರಮಶಾಲಿ ಶ್ರವಣ ಬೆಳಗೊಳಕ್ಕೆ ಬಂದು ಸಲ್ಲೇಖನವನ್ನಾಚರಿಸಿದನೆಂದು ಉಲ್ಲೇಖವಿದೆ. ಮಹಾತ್ಮಾ ಗಾಂಧಿಯವರು ಇದಕ್ಕೆ ಆಧುನಿಕ ಸ್ವರೂಪವನ್ನಿತ್ತು ಮೇಲಿಂದ ಮೇಲೆ ಸಾಯುವ ಸಲುವಾಗಿ ಉಪವಾಸ ವ್ರತವನ್ನಾಚರಿ ಸುತ್ತಾರೆ.

ಹಿಂದೆ ಆತ್ಮಹತ್ಯೆಗೆ ಗೌರವವಿಲ್ಲದಿದ್ದುದಕ್ಕೆ ಅದು ಹೇಡಿತನದ ಲಕ್ಷಣವೆಂಬ ಭಾವನೆಯೇ ಕಾರಣವಿರಬಹುದು. ಬದುಕುವುದು ಕಷ್ಟ. ಸಾಯುವುದು ಸುಲಭ ಎಂಬ ತಪ್ಪುಭಾವನೆ ಬಹಳ ಜನರ ಮನಸ್ಸಿ ನಲ್ಲಿದೆ. ಜ್ವರ ಬಂದಾಗ ಮೂರು ಡಿಗ್ರಿ ಕ್ವಿನೀನ್ ತೆಗೆದುಕೊಳ್ಳುವುದಕ್ಕೆ ಅರ್ಧ ಗಂಟೆ 'ವಿೂನ ಮೇಷ' ನೋಡಿ ಗಂಟಲು ಸರಿ ಮಾಡಿಕೊಳ್ಳುವು ದಕ್ಕೆ ಕಾಫಿ, ಬಾಯಿ ಸರಿಮಾಡಿಕೊಳ್ಳುವುದಕ್ಕೆ ಉಪ್ಪಿನಕಾಯಿ ಹೊಂದಿಸಿಕೊಳ್ಳುವ ಮನುಷ್ಯನಿಗೆ ನೈಟ್ರಿಕ್ ಆಸಿಡ್ ಕುಡಿಯುವ ವೀರನ ಸ್ಥೈರ್ಯ ಹೇಗೆ ಗೊತ್ತಾಗಬೇಕು. ಆತ್ಮಹತ್ಯ ಮಾಡಿಕೊಳ್ಳು ವುದು ಹೇಡಿತನದ ಕಲ್ಷಣವೆನ್ನುವವರು ಒಂದು ಸೂಜಿ ತೆಗೆದುಕೊಂಡು ತಮ್ಮ ಬೆರಳನ್ನು ಸ್ವಲ್ಪ ಚುಚ್ಚಿಕೊಳ್ಳಲಿ, ಗೊತ್ತಾಗುತ್ತದೆ. ತನ್ನ

ದೇಹವನ್ನು ದಂಡಿಸಿಕೊಂಡು ಸಂಯಮ, ಶಕ್ತಿಸಂವರ್ಧನಗಳನ್ನು ಮಾಡಿಕೊಳ್ಳುವುದು ಹೇಗೆ ಹಟಯೋಗವೆನಿಸಿಕೊಂಡು ಆತ್ಮಗೌರವ ದಿಂದ ಜಗತ್ತಿನಲ್ಲಿ ವಿಜೃಂಭಿಸುತ್ತಿದೆಯೋ ಹಾಗೆ ವ್ಯಕ್ತಿಯ ಎಲ್ಲ ಐಹಿಕ ಪ್ರಾರಬ್ಧಗಳನ್ನು ಕೊನೆಗಾಣಿಸುವ ಈ ಮಹಾಯೋಗಕ್ಕೆ 'ಆತ್ಮಹತ್ಯಾ ಯೋಗ' ವೆಂದು ಕರೆದು ಇದಕ್ಕೆ ಪಂಚಮವೇದದ ಸ್ಥಾನವನ್ನು ಕೊಡ ಬೇಕೆಂದು ಆಗ್ರಹ ಮಾಡಬಾರದೇತಕ್ಕೆ?

ಆತ್ಮಹತ್ಯೆಗೆ ನೈತಿಕ ವಿರೋಧವೊಂದಿದೆ. ತನ್ನ ಆಶ್ರಿತರನ್ನೂ ಇಷ್ಟ ಮಿತ್ರರನ್ನೂ ನಿಷ್ಕರುಣೆಯಿಂದ ತ್ಯಜಿಸಿ ಹೋಗುವವನು ಪಾಪಿ ಎನ್ನುವ ಭಾವನೆಯಿದೆ. ಚಿಕ್ಕ ವಯಸ್ಸಿನಲ್ಲಿ ಸಾಯುವವರಿಗೂ ಇದು ಅನ್ವಯಿ ಸುತ್ತದೆಂಬುದನ್ನು ವಿಮರ್ಶಕರು ಮರೆಯುತ್ತಾರೆ. ಇಷ್ಟರು, ಮಿತ್ರರು ಇದ್ದರೆ ಅಂತಹ ಜಗತ್ತನ್ನು ಯಾವನು ತಾನೆ ತೊರೆಯುತ್ತಾನೆ. ಅವ ರನ್ನು ಹುಡುಕಿಕೊಂಡು ಹೋಗುವುದರ ಸಲುವಾಗಿ ಅಲ್ಲವೇ ಮಾನ ವನು ಈ ಲೋಕವನ್ನು ತ್ಯಜಿಸುವುದು. ಮುಂಬಯಿ ಬೇಡವಾದರೆ ಕಲಕತ್ತೆಗೆ ಹೋದಂತೆ! ಲೋಕಕ್ಕೆ ತಾನು ಬೇಡ—ಲೋಕಕ್ಕೆ ತನ್ನ ಕೃತಿಸೇವೆ ಅವಶ್ಯಕವಿಲ್ಲ. ಇಷ್ಟರು ಮಿತ್ರರು ಇವರಿಗೆ ತನ್ನ ಸಖ್ಯ ಅಸಹ್ಯ! ತಾನು ಮಾಡುವ ಪ್ರತಿಯೊಂದು ಕೃತಿ, ಆಡುವ ಪ್ರತಿಯೊಂದು ಮಾತೂ ವಿಪರೀತ ಪರಿಣಾಮಕ್ಕೆ ಕಾರಣವಾಗುತ್ತದೆ. ಇಂತಹ ವ್ಯಕ್ತಿ ಲೋಕಹಿತಾರ್ಥವಾಗಿ ತನ್ನ ವ್ಯಾಪಾರವನ್ನು ಮುಗಿಸಿದರೆ ತಪ್ಪೇನು?

ಇದು ನಿಜವಾಗಿ ವಿಚಾರಯುಗವಾಗಿದ್ದರೆ, ಕ್ರಾಂತಿಯೇ ಈ ಯುಗದ ಬೀಜಮಂತ್ರವಾಗಿದ್ದರೆ, ಸುಧಾರಣೆಯೇ ಈ ಯುಗದ ಸುಹಾದಿಯಾಗಿದ್ದರೆ ಆತ್ಮಹತ್ಯೆಯಂತಹ ಪರಮೋಪಕಾರಿ, ಪರಮಾ ಹ್ಲಾದಕಾರಿ ಆಚರಣೆಯ ಬಗ್ಗೆ ಇರುವ ಅನಾದರ, ಅಪಚಾರ, ಸಂಪ್ರ ದಾಯಬದ್ಧ ಕಾರ್ಯಗಳು ತೊಲಗಬೇಕು.



## ಸಾವಿನಕೂಡ ಸರಸ

ದ. ರಾ. ಬೇಂದ್ರೆ

"ಮೃತ್ಯೋರ್ಮಾ ಅಮೃತಂ ಗಮಯ"

—'ಉಪನಿಷತ್'

"ಮಾತಿಗಂಜದವ ತುಂಟ, ಮರಣಗಂಜದವ ಬಂಟ"

—'ಜಾನಪದ ವೇದ'

"ಸಿಕ್ಕವರಿಗೆ ಸಿಕ್ಕುವದಿಲ್ಲ ಸಾವಿನ ಸಹವಾಸ"

—'ಸ್ವಾನುಭವ ವಚನ'

'ಸಾವು' ಎಂದ ಕೂಡಲೆ 'ಸಿಂಹ–ಹುಲಿ' ಎಂಬುದಕ್ಕಿಂತಲೂ ಹೆಚ್ಚು ಜನರು ಮೆಟ್ಟಿ ಬೀಳುವರು. ಸಿಂಹ ಹುಲಿಗಳು ಭಯದ ಉತ್ಸವ ಮೂರ್ತಿಗಳು, ಸಾವು ಮೂಲವಿಗ್ರಹ. ಕೆಲವು ಕೆಚ್ಚೆದೆಯವರು ಸಿಂಹ ಹುಲಿಗಳ ಬೇಟೆಯಾಡುತ್ತಾರೆ. ಕೆಲವು ಚದುರರು ಅವುಗಳ ಕೂಡ ಚಿನ್ನಾಟವಾಡುತ್ತಾರೆ. ಆದರೆ ಅಂಥವರೂ ಕೂಡ 'ಸಾವು' ಎಂದರೆ ಅರೆಸತ್ತಂತಾಗುವರು. ಶೆಕ್ಸಪಿಯರನು ಏನೇ ಹೇಳಿರಲಿ! ಎಂಥ ಹೇಡಿಗೂ ಸಾವು ಬರುವದೊಮ್ಮೆಯೆ. ಆದರೂ ಜೀವಿಗೆ ಅನೇಕ ಜನ್ಮಗಳಲ್ಲಿ ಈ ಬೇಡಾದ ಅನುಭವ ಬಂದು, ಸಾವಿನ ಹೆದರಿಕೆಯು ಎಲ್ಲರಿಗೂ ರಕ್ತಗತವಾಗಿ ಬಿಟ್ಟಿದೆ. ನಾವು ಬಾಯಿಂದ 'ಆತ್ಮವು ಅಮರವಾಗಿದೆ' ಎಂದುಕೊಂಡರೂ ಅಷ್ಟೇ; 'ಹುಟ್ಟಿದವನಿಗೆ ಸಾವು ತಪ್ಪಿಲ್ಲ' ಎಂದರೂ ಅಷ್ಟೇ. ಸಾವಿನ ಸೆಕೆಯೊ ಚಳಿಯೊ ಜೀವನಿಗೆ ಹತ್ತಿದ ಕೂಡಲೆ ರಕ್ತವು ಕುದಿಯಲೋ ತಣ್ಣಗಾಗಲೋ ಹತ್ತುವದು. ನಾವು ಹೆದರಲಿ, ಧೈರ್ಯವಾಗಿರಲಿ, ಸಾವು ನಮ್ಮ ಕೈಹಿಡಿಯುವದು ಜನ್ಮದಲ್ಲೊಮ್ಮೆಯೆ. ಅದು ಎಂಥ ಹಿಡಿತ! ಏನು ಸ್ಪರ್ಶ! ಆ ಕ್ಷಣದಲ್ಲಿ ಎಲ್ಲವೂ ಮರೆತು ಹೋಗುವದು. ಮೃತ್ಯುಯೋಗ ಎಂದು ಹೇಳುವದು ಅದಕ್ಕಾಗಿಯೇ.

ಇಂಥ ಈ ಮೃತ್ಯು, ಸಾವು, ಮರಣಗಳ ಕೂಡ 'ಸರಸ' ಎಂದರೆ ಮೈಗೆ ಮುಳ್ಳು ಬರುವವು. ಕೆಲವರಿಗೆ ಬೆವರು ಬಿಡಬಹುದು; ಕೆಲವರಿಗಂತೂ ನಡುಕ ಹಿಡಿಯಬಹುದು; ಮತ್ತೆ ಕೆಲವರಿಗೆ ಮೂರ್ಛೆಯೂ ಬರಬಹುದು. ಅಂಥ ಸರಸವಾಡುವ ಕೆಲಸ ನಾನು ಮಾಡಿದ್ದೇನೆ. 'ಎಂಥ ಗಟ್ಟಿಗ ಇವನು!' ಎಂದು ಕೂಗಬೇಡಿ. ನನಗೂ ಗಟ್ಟಿಗರಿಗೂ ಅಜಗಜಾಂತರ. ನಾನೂ ಗಟ್ಟಿಗ ನಿಜ. ಆದರೆ ನನ್ನ ರೀತಿ ಬೇರೆ. ವಜ್ರಕಾಯರಾದ ಗಟ್ಟಿಗರು ಬಲದ ಆ ತುದಿ; ನಾನು ಈ ತುದಿ. ಬಿರುಗಾಳಿಗೆ ಮರಗಳು ಮುರಿದುಕೊಂಡು ಬಿದ್ದಿವೆ. ಹುಲ್ಲು ಹಾಗಾಗಿದೆಯೇ? ನಾನು ವೈದ್ಯರ ಮಿಂಡನೆಂದು ಹೆಸರಾಗಿದ್ದೇನೆ. ಹುಟ್ಟಾ ಬೇನೆಕೊಳಕ ನಾನು. ಕತ್ತೆ ಚಿತ್ರಗಾರರ ಮಿಂಡ ಎಂದು ಹೇಳುವದಿಲ್ಲವೇ? ಚಿತ್ರಕನು ಅದರ ರೂಪರೇಷೆಯನ್ನು ನೋಡಿ ಗ್ರಹಿಸುವಷ್ಟು ಹೊತ್ತು ಅದು ಸ್ಥಿರವಾಗಿ ನಿಲ್ಲುವದಿಲ್ಲ. ನನ್ನ ದೇಹಪ್ರಕೃತಿ ಅದಕ್ಕೂ ಚಂಚಲ. ವೈದ್ಯರು ನನ್ನ ನಾಡಿ ನೋಡುವುದನ್ನಂತೂ ಎಂದೋ ಬಿಟ್ಟಿದ್ದರು. ಎದೆ ಹಾರುವದರ ಮೇಲಿಂದ ನನ್ನ ಆರೋಗ್ಯದ ಚಿಕಿತ್ಸೆ ಮಾಡುತ್ತಿದ್ದರು. ದಿಸಬೆಳಗೂ ಸಾವಿಗೆ ಅಣಕಿಸಿ ಬರುತ್ತಿದ್ದ ನನ್ನ ಎದೆಯೂ ಬರಬರುತ್ತ ಹಾರುವದು ಕಡಿಮೆಯಾಯಿತು. ತಾನು ಸತ್ತಿಲ್ಲವೆಂದು ಹೇಳುವಷ್ಟಿಗೆ ಒಳಗಿಂದೊಳಗೆ ಹಾರುತ್ತಿದ್ದಿತೇನೋ? ಮೊದಲೇ ನನ್ನ ಕೈಬಿಟ್ಟ ವೈದ್ಯರು ನನ್ನೆದೆಗೂ ಕೈಹಚ್ಚದಾದರು. ಪ್ರಾಣದ ಮೂಗನ್ನೇ ಹಿಡಿಯಬೇಕೆಂದೋ ಏನೋ ನನ್ನ ಶ್ವಾಸೋಚ್ಛ್ವಾಸದಿಂದ ನನ್ನ ಚಿಕಿತ್ಸೆ ನಡಿಸಿದರು. ಬೇನೆಕೊಳಕರಂತೆ ಮುಟ್ಟಿದರೆ ಕೆಟ್ಟೇನೆಂದು ತನ್ನಷ್ಟಕ್ಕೆ ಮೆಲ್ಲಗೆ ಉಳಿದ ಹೊತ್ತಿನಲ್ಲಿ ಸಾಗಿರುತ್ತಿದ್ದ ನನ್ನ ಉಸಿರಾಟವು, ವೈದ್ಯರನ್ನು ಕಂಡು ದಂಗುಬಡಿದೋ ಏನೋ, ಹಾಗೆ ನಿಂತಲ್ಲಿ ನಿಂತು ಹಾಡುತ್ತಿತ್ತು. ವೈದ್ಯರು ನಾನು ರೆಪ್ಪೆ ಬಡಿಯುವದರ ಮೇಲಿಂದ ನನ್ನ ಜೀವಕಳೆ ಕಂಡುಕೊಂಡು ಹೋಗುತ್ತಿದ್ದರು. ಈ ತಪಸ್ಸನ್ನು ನಾನು ಅನೇಕ ವರ್ಷ ಸಾಗಿಸಿದೆನು. 'ತೋಳ ಬಂತಲೇ ತೋಳ ಬಂತು!' ಎಂದು ಹೆದರಿಸಿದ ಕುರುಬರ ಹುಡುಗನಂತೆ ನಾನೆಷ್ಟೋ ಸಲ ಮರಣದ ಹುಸಿ

ಹುಯಿಲೆಬ್ಬಿಸಿದ್ದೆ. ಅದರಿಂದ ಬುದ್ಧಿ ಕಲಿತ ನನ್ನ ಆಪ್ತರು ನಾನು ಒಂದೆ ರಡು ಸಲ ತೀರ ಸತ್ತಂತಾಗಿದ್ದರೂ ಎದೆಗೆಡದೆ ಹಬ್ಬಕ್ಕಾಗಿ ಎಂದು ನನಗೆ ಹೊಸ ಬಟ್ಟೆ ಹೊಲಿಸಿದ್ದರು. ಅವರಿಗೆ ಗೊತ್ತು! ನೆಲಕ್ಕೆ ತಾಕಿದ ಚಂಡು ಮೇಲಕ್ಕೇಳುವದೆಂದು. 'ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ' ಎಂದು ಹೇಳುವರು; ನಾನೆಂದೋ ಜನ್ಮದ ಹೊಳೆ ದಾಟಿದ್ದೆ. ಆದರೆ ಜನ್ಮದ ಆಚೆ ದಂಡೆಯ ಮೇಲಿನವರು ನನ್ನನ್ನು ಅಸ್ಪೃಶ್ಯರಲ್ಲಿ ಎಣಿ ಸಿರಬೇಕೋ ಏನೋ! ನನಗೆ ಎಲ್ಲ ರೋಗಗಳ 'ಇಂಜಕ್ಶನ್' ಆಗಿದ್ದ ರಿಂದ, ನಾನು ಉಳಿದ ಜನರಂತೆ ಯಾವದಾದರೊಂದು ರೋಗದಿಂದ ಸತ್ತೇನೆಂಬ ಭಯವು ನನಗಿರಲಿಲ್ಲ. ನಾನು ಸತ್ತರೆ ಸಾವಿನಿಂದ. ನಾನು ಸತ್ತರೆ ಅದರ ಶ್ರೇಯಸ್ಸೋ ಅಪಕೀರ್ತಿಯೋ ಪೂರ್ಣವಾಗಿ ಸಾವಿಗೇ. 'ತನಗೇಕೆ ಆ ಅಪವಾದ' ವೆಂದು ಸಾವು ನನಗೆ ಅಂಜುತ್ತಿರ ಬೇಕು ಎಂದು ನನಗೆ ಬರಬರುತ್ತ ಧೈರ್ಯ ಬರತೊಡಗಿತು. ಸಾವಿನ ಬಗ್ಗೆ ಹೆದರಿಕೆ ಕಡಿಮೆಯಾಗುತ್ತಲಾಗುತ್ತ ಅದರ ಬಗ್ಗೆ ಒಂದು ಅನಾ ದರವುಂಟಾಗತೊಡಗಿತು. ನಿಜವಾಗಿ ನೋಡಿದರೆ, ಸಾವು ಎಂಥ ಪೂಜ್ಯ, ಅಪೂರ್ವ, ಪ್ರೇಕ್ಷಣೀಯ ವಸ್ತುವಾಗಬೇಕು. ವರ್ಷಕ್ಕೊಮ್ಮೆ ಬರುವ ಹಣ್ಣು ಏನು ರುಚಿ, ಹಬ್ಬ ಎಷ್ಟು ಪ್ರಿಯ! ಎಂದಾದರೂ ಬರುವ ಗ್ರಹಣ ಧೂಮ–ಕೇತುಗಳು ಎಷ್ಟು ಪ್ರೇಕ್ಷಣೀಯ! ನೂರು ವರ್ಷ ಕ್ಕೊಮ್ಮೆ ಬಂದ ಸಾವು ಇಷ್ಟು ಅನಾದರಣೀಯವಾಗಬೇಕೆ? ಇದರ ಮೋರೆಯನ್ನೇಕೆ ಜನರು ತಪ್ಪಿಸುವರೋ? ನನ್ನ ರೀತಿಯೇನೋ ಬೇರೆ ಯಾಗಿತ್ತೆನ್ನಿ. ನನಗೆ ಸಾವಿನ ಬೆಟ್ಟಿಯೆಂದರೆ ಸರ್ಕಸಿನೊಳಗಿನ ಕುರಿಗೆ ದಿನ ರಾತ್ರಿಯೂ ಆಗುವ ಹುಲಿಯ ಬೆಟ್ಟಿಯಂತೆ. ಆ ಹುಲಿ ಕುರಿಗಳು ಒಂದೇ ತಳಿಗೆಯಲ್ಲಿ ಹಾಲು ಕುಡಿಯುವಂತೆ, ನಾನು ಸಾವಿನ ಕೂಡ ಒಂದೇ ಬಟ್ಟಲಲ್ಲಿ ದಿನಾಲು ಕಷಾಯ ಕುಡಿಯುತ್ತಿದ್ದೆ. ಸಾವಿಗೂ ಬೆಚ್ಚದ ನಾನು ಒಮ್ಮೊಮ್ಮೆ ಆ ಕಷಾಯದಲ್ಲಿ ಬಿದ್ದ ನನ್ನ ಮೋರೆಯ ನೆರಳನ್ನೇ ಕಂಡು ಬೆಚ್ಚಿ ಬೀಳುತ್ತಿದ್ದೆ. ಆದರೆ ಅದನ್ನೆ ಕಂಡು ನನ್ನ ವೈದ್ಯರಿಗೆ ಸಂತೋಷ 'ಇಷ್ಟು ಜೀವವಿದೆಯಲ್ಲ ಇವನಲ್ಲಿ' ಎಂದು; ಇದೇನು

ಸರಸವೋ ನಾವು ಬೇರೆ ಕಾಣೆವು ಎಂದು ಜುಗುಪ್ಸೆ ಪಡಬೇಡಿ. ಇದು ನನ್ನ ಗರಡಿಸಾಧಕ ಮಾತ್ರ. ಚಮತ್ಕಾರವೆಲ್ಲ ಮುಂದಿದೆ. ಹತ್ತು ಜನ ಕಳ್ಳರನ್ನೋಡಿಸಿದ ಒಬ್ಬ ಕಳ್ಳನ ಮಾತನ್ನು ಕೇಳಿಲ್ಲವೇ ನೀವು? ಅವನು ಮುಂದೆ ಓಡುತ್ತಿದ್ದನಂತೆ, ಕಳ್ಳರು ಅವನನ್ನು ಹಿಡಿಯಲು ಹಿಂದೆ ಓಡುತ್ತಿದ್ದರಂತೆ; ಹೀಗೆ ಇದುವರೆಗಿನ ನನ್ನ ಸರಸ. ನಾನು ಮುಂದು ಮುಂದೆ ಓಡುತ್ತಿದ್ದೆ. ಸಾವು ನನ್ನ ಹಿಂದಿನಿಂದ ಓಡುತ್ತಿತ್ತು. ಅಂತೂ ಸಾವನ್ನು ನಾನು ಓಡಾಡಿಸಿದ್ದೇನೆ. ಆದರೆ ಬೇನೆಕೊಳಕನ ಜೀವನವು ಏನು ಸಹ್ಯ? ರೋಗದಿಂದಾಗಲಿ ಔಷಧದಿಂದಾಗಲಿ ಯಾವ ಹೆದರಿಕೆಯೂ ನನಗೆ ಇಲ್ಲದಾಗಿತ್ತು. ನನ್ನ ಜೀವನದಿಂದಾಗಲಿ ಮರಣದಿಂದಾಗಲಿ ಯಾವ ಹೆದರಿಕೆಯೂ ನನ್ನ ಆಪ್ತರಿಗೆ ಇಲ್ಲದಾಗಿತ್ತು. ನನ್ನ ಮರಣದ ಭಯ ಅವರಿಗಿರಲಿಲ್ಲ. ನನಗೂ ಇರಲಿಲ್ಲ. ನನ್ನ ಜೀವನವನ್ನು ಅವರು ಲೆಕ್ಕದಲ್ಲಿ ಹಿಡಿದಿರಲಿಲ್ಲ. ನನಗೂ ಅದರ ಲೆಕ್ಕ ಹತ್ತುತ್ತಿರಲಿಲ್ಲ. ನನಗೆ ಇಂಥ ಜೀವನದ ಬೇಸರ ಬಂದಿತು. ನಾನು ಹೀಗೇ ಅಮರನಾಗಿಬಿಟ್ಟರೆ ಹೇಗೆ? ಎಂಬ ವಿಚಾರ ಹೊಳೆದು ಮೈ ನಡುಗಿತು. ಸಾವು ನನ್ನನ್ನು ತೀರಾ ಮರೆತುಬಿಟ್ಟಿರಬಹುದೇ? ಎಂದು ಚಿಂತೆಯುಂಟಾಯಿತು. ವೈದ್ಯರು ನನ್ನ ಕೈ ಬಿಟ್ಟರು, ರೋಗ ಕೈ ಬಿಟ್ಟಿತು, ಸಾವು ಕೈಬಿಟ್ಟಿತು. ಹಾಗಾದರೆ ಈ ಜೀವನ್ಮರಣದೊಳಗಿಂದ ಕೈಗೊಟ್ಟು ನನ್ನನ್ನು ಬಿಡಿಸುವವರಾರು? ಬಹಳ ಚಿಂತೆಗಿಟ್ಟಿತು. ತಲೆ ತುರಿಸಿದೆ, ಕೈ ಮೈ ತುರಿಸಿಕೊಂಡೆ, ಎಲ್ಲಿಯೂ ವಿಚಾರವು ತಲೆದೋರಲೊಲ್ಲದು. ಬೇಸತ್ತು ಹಾಗೆ ಗಾದೆಯ ಮೇಲೆ ಬಿದ್ದುಕೊಂಡೆ. 'ಅಯ್ಯೋ ಬೇಸತ್ತೆ....' ಎಂದೆ. ಸರಿ, ಒಂದು ವಿಚಾರ ಹೊಳೆಯಿತು. ಸತ್ತ ಹೊರತು ಸಾಯಲು ಬೇರೆ ಉಪಾಯವಿಲ್ಲ ಎಂದು! ಎಂಥ ಬಂಗಾರದಂಥ ಮಾತು, ಎಷ್ಟು ಉಜ್ವಲವಾದ ವಿಚಾರ! ತಾನು ಸಾಯದೆ ಸ್ವರ್ಗವಿಲ್ಲ. ಸಾವು ನಮ್ಮನ್ನು ಕೊಂದರೆ ಎಲ್ಲಿಯ ಸ್ವರ್ಗ? ಸಾವಿನ ಮೈಮೇಲೆ ನಾವು ಏರೇರಿ ಹೋಗಬೇಕು, ಅದರ–ನಮ್ಮ ಮಲ್ಲಯುದ್ಧವಾಗಬೇಕು. ಪಟ್ಟಿಗೆ ಪಟ್ಟು, ಹಿಡಿತಕ್ಕೆ ಹಿಡಿತ ಆಗಿ ನಾವೂ ಸಾಯಬೇಕು. ಸತ್ತು ಅಮರರಾಗಬೇಕು,

ಮತ್ತೆ ಸಾಯುದವರಾಗಬೇಕು. ಅದೇ ವೀರಮರಣ! ಆದರೆ ರೂಢಿಯು ವೀರಮರಣದ ಕಲ್ಪನೆ ನನಗೆ ಸರಿಬರುವದಿಲ್ಲ. ಮೊದಲನೆಯ ಮಾತೆಂದರೆ, ಮೊದಲಿನಿಂದ ಕೊನೆವರೆಗೂ ಅದೆಲ್ಲ ಹಿಂಸಾಮಾರ್ಗ. ಎರಡನೆಯ ಮಾತೆಂದರೆ, ಎರಡನೆಯವರ ಕೈಯಿಂದ ನಾವು ರಣದಲ್ಲಿ ಸಾಯುವೆವು. ಗುದ್ದಿದರೆ ಸಾಯುವ ನಾನು ಹಿಂಸಾಮಾರ್ಗದ ಜಾತಿ ವೈರಿಯಾಗಿದ್ದೆನ್ನಿ. ಮತ್ತು ಕೈಯಲ್ಲಿರುವ ಮರಣವನ್ನು ಎರಡನೇಯವರಿಂದ ಸ್ವೀಕರಿಸುವದು ನನಗೆ ಸಮ್ಮತವಿರಲಿಲ್ಲ. ಸಾಯುವಂಥ ಕೆಲಸದಲ್ಲಿಯೂ ಪರರನ್ನವಲಂಬಿಸುವದೇಕೆ? ನಮ್ಮ ಪರಾವಲಂಬಿತ್ವಕ್ಕೆ ಇದಕ್ಕೂ ಹೀನ ಉದಾಹರಣೆ ಇದೆಯೇ? ಅಷ್ಟರಲ್ಲಿಯೇ 'ಪೌರುಷ ಪ್ರಯತ್ನಕ್ಕೆ ದೈವವು ಕೈಗೊಡುವದು' ಎಂಬ ಗಾದೆಯ ಮಾತೂ ನೆನಪಿಗೆ ಬಂತು. ನಾನು ಸ್ವತಂತ್ರ ಪ್ರಯತ್ನದಿಂದ ಸಾಯುವ ಮಾರ್ಗಹಿಡಿದೆ. ಆ ಪ್ರಯೋಗಗಳ ಇತ್ಯರ್ಥವನ್ನು ಇಲ್ಲಿ ಕೊಟ್ಟಿದ್ದೇನೆ:—

ಸಾಯಬೇಕೆಂದು ಪ್ರಯತ್ನ ಮಾಡುವ ವರೆಗೂ ಸಾವು ತಮ್ಮ ಇಚ್ಛೆಯದಲ್ಲ ಎಂಬ ಮಾತು ಅಷ್ಟು ನಿಚ್ಚಳವಾಗಿ ಕಾಣುವದಿಲ್ಲ. ಸುಲಭವಾಗಿ ಅಂದುಬಿಡುತ್ತೇವೆ—'ನನಗೆ ಜೀವ ಬೇಡಾದರೆ ಸತ್ತುಬಿಡುತ್ತೇನೆ, ಎಂದು. ಅನ್ನುವದು ಎಷ್ಟು ಸುಲಭ! ಮರಣವು ಇಷ್ಟು ಸುಲಭವಿದ್ದರೆ ಬಡಬಗ್ಗರು ಕೊಳೆಯುತ್ತಿರಲಿಲ್ಲ. ಮತ್ತು ಇಚ್ಛಾಮರಣವೆಂಬುದು ಒಂದು ದೊಡ್ಡ ಸಿದ್ಧಿಯೆಂದೂ ಎನಿಸಿಕೊಳ್ಳುತ್ತಿರಲಿಲ್ಲ. ಬೇನೆಕೊಳಕತನವು 'ಸಾವಿನ ಬಾಯಲ್ಲಿ ಸಿಕ್ಕ ತುತ್ತಲ್ಲ ಜೀವನವು' ಎಂದು ಕಲಿಸಿದರೆ, 'ಸಾವೂ ಜೀವದ ಬಾಯಿಗೆ ಸಿಕ್ಕ ತುತ್ತಲ್ಲ' ಎಂಬುದನ್ನು ನನ್ನ ಆತ್ಮಹತ್ಯದ ಪ್ರಯೋಗಗಳು ಕಲಿಸಿದವು.

ನನ್ನ ಜೀವನದಲ್ಲಿ ಮುಂಚೆ ಎಂದೂ ತೋರದ ಗಾಂಭೀರ್ಯವು ಈಗ ತಲೆದೋರಿತು. ನಾನು ವಿಚಾರಮಾಡತೊಡಗಿದೆ. ಸುಲಭವಾಗಿ ಸಾಯುವದು ಹೇಗೆ, ಎಂದು. ಉಸಿರೇ ಪ್ರಾಣ; ಈ ಉಸಿರಾಟವನ್ನೆ ನಿಲ್ಲಿಸಿದರೆ ಜೀವದ ಜಿಗಿದಾಟವೆ ನಿಲ್ಲುವದು. ನನ್ನ ಕಾರ್ಯಪ್ರವೃತ್ತಿಯೆಲ್ಲ ಕುದುರಿ ಬಂದಂತೆ—ನನಗೆ ವಿಚಾರ ಹೊಳೆಯುವದೊಂದೆ ತಡ ನಾನು

ಪ್ರಯೋಗವನ್ನೆ ಪ್ರಾರಂಭಿಸಿದೆ. ಇಲ್ಲಿ ಒಂದೆರಡು ಮಾತುಗಳನ್ನು ಹೇಳು ವದು ಅತ್ಯಗತ್ಯ. ಒಂದು, ಈ ನನ್ನ ಆತ್ಮಹತ್ಯೆಯ ಉದ್ದೇಶವನ್ನು ನಾನು ಯಾರಿಗೂ ತಿಳಿಸಿರಲಿಲ್ಲ. ಇಷ್ಟೇ ಅಲ್ಲ, ಅದು ತಿಳಿಯಬಾರದೆಂದೇ ನಾನು ನನ್ನ ಊಟ-ಉಡಿಗೆ-ನಿದ್ರೆ ಮೊದಲಾದವುಗಳನ್ನು ಹೆಚ್ಚು ನಿಯಮಿತವಾಗಿ ಮಾಡತೊಡಗಿದೆ. ಎರಡನೆಯ ಮಾತು, ನನಗೆ ಜಂಭವಿರಲಿಲ್ಲ. ತೋರಿಕೆ ಗಾಗಿ ಏನು ಮಾಡುವದಕ್ಕೂ ಹೇಸಿಗೆ, ನನಗೆ. ಮೂರನೆಯ ಮಾತು, ಸ್ವಯಂ ಮರಣಪ್ರಯೋಗಗಳು ನನ್ನ ಆತ್ಮಸಂತೋಷದಿಂದಲೂ 'ಅಕ್ಕಲ ಹುಷಾರಿ'ಯಿಂದಲೂ ಸಾಗಿದ್ದುವು. ಈ ಮಾತುಗಳನ್ನು ನೆನೆಸಿಟ್ಟರೆ ನನ್ನ ಮುಂದಿನ ಮಾತುಗಳ ಸಂಶಯ ಯಾರಿಗೂ ಬರಲಿಕ್ಕಿಲ್ಲ.

ಹೇಳಿದ್ದೇನಷ್ಟೆ, ಉಸಿರು ನಿಲ್ಲಿಸಿ ಪ್ರಾಣತ್ಯಾಗಮಾಡಬೇಕೆಂದು ನಾನು ಮಾಡಿದ ನಿರ್ಧಾರವನ್ನು ? ನಾನು ಪ್ರಾರಂಭ ಮಾಡಿದ್ದು ಹೀಗೆ: ಮೊದಲು ಒಳಗೆ ಬಂದ ಉಸಿರನ್ನು ಒಳಗೇ ಎಳೆದಿಡಲು ಹವಣಿಸಿದೆ. ಅಶಕ್ತತೆಯ ಮೂಲಕ ಅದು ಸಾಧ್ಯವಾಗಲೊಲ್ಲದು. ಉಸಿರು ಬಿಟ್ಟೆ, ಹಾಗೆಯೆ ಬಿಟ್ಟೇ ಬಿಟ್ಟೆ, ದೇಹದ ತಟ್ಟೆಯ ಮನೆಯೂ ಹಾಳಾಗುವವರೆಗೆ ಹಾಗೆಯೆ ಬಿಡಬೇಕೆಂದೆ. ಉಸಿರು ಬಿಡುವದಾದರು ಎಷ್ಟು ದೂರ? ಮತ್ತೆ ಹಾಗೆಯೆ ಎಳೆದು ಒಳಕ್ಕೆ ಹೊಕ್ಕಳಕ್ಕೆ ಮುಟ್ಟಿಸಿದೆ. 'ಗುಬ್ಬೀ ಗುಬ್ಬೀ ಸತ್ತೆಯಾ?' ಎಂದರೆ 'ನಾನೇಕೆ ಸಾಯಲಿ ಹುಚ್ಚು ಹಾರುವಾ! ಜೋಕಾಲಿ ಆಡುತ್ತಿದ್ದೇನೆ' ಎಂದು ಹೇಳಿದಂತೆ ನನ್ನ ಜೀವವೂ ಹೇಳ ತೊಡಗಿತು. ನಾನೂ ಎದೆಗುಂದಲಿಲ್ಲ. ಈ ಉಸಿರಾಟದಿಂದ ಪ್ರಾಣವನ್ನು ಎಳೆದಾಡಿ ಎಳೆದಾಡಿ, ಹಾಗೆಯೆ ಮಿಸುಕಾಡದಂತೆ ಇಂದಿಲ್ಲ ನಾಳೆ ಮಾಡ ಬಹುದೆಂಬ ಭರವಸೆಯಿಂದ ನಾನೆಷ್ಟೋ ದಿವಸ ಈ ಪ್ರಯತ್ನ ಸಾಗಿಸಿದೆ. ರೀತಿಯಲ್ಲಿ ಏನಾದರೂ ತಪ್ಪಿರಬಹುದೇನೋ, ಎಂದು ಉಸಿರಾಟದ ರೀತಿ ಯನ್ನು ತಿರುವುಮುರುವು ಮಾಡಿದೆ. ಒಳಗಿದ್ದ ಉಸಿರನ್ನು ಹೊರಗೆ ದೂಡಿ ದೂಡಿ, ಕೊನೆಗೆ ಹೊರಗಿನದನ್ನು ಒಳಗೆ ನೂಕಿ ನೂಕಿ, ಆ ಮೇಲೆ ಕೆಲವು ಹೊತ್ತು ಆ ಉಸಿರು ಕಟ್ಟಿಹಾಕಿ ನೋಡಿದೆ. ಈ ಜಗ್ಗಾಟಕ್ಕೆ ಬೇಸತ್ತು ಪ್ರಾಣವು ದೇಹವನ್ನು ಬಿಡಬಹುದೆಂಬ ಭರವಸೆ ನನಗಿತ್ತು.

ಮೊದಲೇ ನನಗೆ ಸಾವಿನ ಭಯವಿರಲಿಲ್ಲ. ಅದರಲ್ಲಿ ಬೇರೆ ಈಗ ಅದರ ಮ್ಯೆಮೇಲೆ ಸಾಗಿಹೋಗುತ್ತಿದ್ದೆ. ಈ ನಿರ್ಭಯದಿಂದಲೋ ಏನೋ! ನನ್ನ ದೇಹಪ್ರಕೃತಿಯು ಸುಧಾರಿಸತೊಡಗಿತು. ನನ್ನ ರೋಗದ ಕಳೆ ಕಡಿಮೆಯಾಯಿತು. ಒಮ್ಮೆ ನಾನು ಸಹಜವಾಗಿ ಕೆಲವು ಪುಸ್ತಕಗಳನ್ನು ನೋಡುತ್ತಿರುವಾಗ 'ಪ್ರಾಣಾಯಾಮ'ದ ವಿಷಯ ಬಂದಿತು. ನನಗೆ ಆಶ್ಚರ್ಯವಾಯಿತು, ಭಯವಾಯಿತು. ಆಗ ನನ್ನ ತಪ್ಪು ನನಗೆ ತಿಳಿಯಿತು. ನಾನು ದಿನಾಲು ಮಾಡುತ್ತಿದ್ದುದು ಆತ್ಮಹತ್ಯೆಯ ಪ್ರಯತ್ನವಲ್ಲ, ಆಯು ವೃದ್ಧಿಯ ಪ್ರಯತ್ನ ಎಂದು. ನನ್ನ ತಪ್ಪಾದ ಉಪಾಯ ಯೋಜನೆಗಾಗಿ ಪಾಶ್ಚಾತ್ತಾಪ ಪಟ್ಟೆ. ಆದರೆ ನಿಶ್ಚಯವನ್ನು ಬಿಡಲಿಲ್ಲ.

ಸಾಯುವ ಕೆಲಸದಲ್ಲಿ ಈ ಹೊಯ್ದಾಡುವ ಗಾಳಿಯನ್ನು ನಂಬದೆ, ಹೆಚ್ಚು ಮನಗಂಡ ಗಟ್ಟಿ ಉಪಾಯವನ್ನು ಯೋಚಿಸಿದೆ. ಉರುಲು ಹಾಕಿ ಕೊಳ್ಳುವದಕ್ಕಿಂತ ಹೆಚ್ಚು ಸುಲಭವಾದ, ತೀರ ಕೈಯೊಳಗಿನ ಉಪಾಯವು ಬೇರೆ ಯಾವುದು? ಸರಿ! ಅಂದೇ ರಾತ್ರಿ ಉರುಲು ಹಾಕಿಕೊಳ್ಳುವ ನಿಶ್ಚಯಮಾಡಿದೆ. ಬೆಳಗುಮುಂಜಾವು ಮೂರುನಾಲ್ಕು ಗಂಟೆಯ ಸಮ ಯಕ್ಕೆ, ಆ ಕೆಲಸ ಮಾಡುವದೆಂದು ಗೊತ್ತುಮಾಡಿಕೊಂಡು ಮಲಗಿದೆ. ಅಂದು ಮಲಗುವಾಗ ನಿರ್ವಿಚಾರವಾಗಿರುವ ನನ್ನ ಮನಸ್ಸು ಮತ್ತೆಂದೂ ಹಾಗಿರಲಿಲ್ಲ. ಅಂದು ಹತ್ತಿದ ನಿದ್ರೆ ಎಂಥ ನಿದ್ರೆಯದು! ಅದು ಹಾಗೆ ಮುಗಿಯದೆ ಸಾಗಿದ್ದರೆ ನನ್ನ ಕೆಲಸ ಮುಗಿದೇಬಿಡುತ್ತಿತ್ತು. ಆದರೇನು? ಬೆಳಗುಮುಂಜಾವು ನನಗೆ ಆರು ಘಂಟೆಗೆ ಎಚ್ಚರಾಯಿತು. ಎಚ್ಚರಾದ ಮೇಲೆ ಕೆಲಹೊತ್ತಿನ ವರೆಗೆ ನನಗೆ ಮರಣದ ವಿಚಾರವೇ ಹೊಳೆಯಲಿಲ್ಲ. ಉದಯರಾಗಗಳನ್ನು ಹೇಳತೊಡಗಿದೆ. ಮನಸ್ಸು ಅಷ್ಟು 'ಝೋಕಾ' ಗಿತ್ತು. ಹೇಳುತ್ತಾ ಹೇಳುತ್ತಾ 'ಕರುಣಿಸೋ ಕೃಷ್ಣಾ ಕರುಣಿಸೋ' ಬಂತು. ಬಂತು ಮರಣದ ನೆನಪು. ಎಷ್ಟು ಮರಗೂಳಿ ನಾನು! ಎಂದು ಕೊಂಡೆ. ಮೂರನೆಯ ದಿನ ಗಲ್ಲಿಗೆ ಹಾಕುವ ಮನುಷ್ಯನ ಇಚ್ಛಾಪೂರ್ತಿ ಯನ್ನು ಮಾಡುವಂತೆ, ನಾನು ಅಂದು ಸ್ವೇಚ್ಛೆಯಾಗಿ ಆನಂದವಾಗಿ ಕಾಲ ಕಳೆದೆ. ಮೂರುಗಂಟೆಗೆ ಎಚ್ಚರಾಗುವಂತೆ 'ಅಲಾರ್ಮ್' ಇಟ್ಟೆ

ನಿಶ್ಚಿಂತನ ನಿದ್ರೆಯ ಮುಂದೆ ಬೆದರುಗಂಟೆಯೇ? ನನಗೆ 'ಅಲಾರ್ಮ' ನಿಂದ ಚಿಕ್ಕಾಡು ಕಡಿದಷ್ಟೂ ತೊಂದರೆಯಾಗಲಿಲ್ಲ. ಇನ್ನೊಂದು ವಿಚಾರ ಹೊಳೆಯಿತು. ಮಲಗುವ ಪೂರ್ವದಲ್ಲಿ ಭೇದಿಗೆ ತಕ್ಕೊಳ್ಳಬೇಕು; ಅಂದರೆ ಎಚ್ಚರಾದೀತು ಎಂದು. ಭೇದಿಗೆ ತಗೊಳ್ಳುವದರಿಂದ ಇಚ್ಛೆಯಂತೆ ನಾಲ್ಕು ಗಂಟೆಗೆ ಎಚ್ಚರವೇನೋ ಆಯಿತು. ಆದರೆ ಆ ಭೇದಿಯ ಬಾಧೆಯನ್ನು ತೀರಿಸುವದರಲ್ಲಿ ಬೆಳಗಾಯಿತು. ಕೊನೆಗೆ ಈ ಹೊರಗಿನ ಉಪಾಯಗಳ ಬಗ್ಗೆ ವಿಶ್ವಾಸವು ಹಾರಿ, ನಾಲ್ಕಕ್ಕೆ ಏಳತಕ್ಕದ್ದು; ಎಂದು ಮನಸ್ಸಿನಲ್ಲಿ ಸಂಕಲ್ಪಮಾಡಿದೆ. ಸಂಕಲ್ಪ ಬಲದ ಮುಂದೆ ಬೇರೆ ಬಲವೇ? ಸಂಕಲ್ಪಕ್ಕೆ ಸರಿಯಾಗಿ ನಾನು ನಾಲ್ಕುಗಂಟೆಗೆ ತಟ್ಟನೆ ಎದ್ದೆ. ಮಾಡಿದೆ, ಉರಲು ಹಾಕಿಕೊಳ್ಳುವದರ ಸಿದ್ಧತೆ! ಸಿದ್ಧತೆ ಏನು? ಕೊರಲು, ಉರುಲು, ಸಾಯುವವರು, ಈ ಮೂರು ಇದ್ದರೆ ತೀರಿತು. ಆ ಮೂರೂ ಇದ್ದವು. ಸಾಯುವ ಮುಂಚೆ ದೇವರ ಪ್ರಾರ್ಥನೆ ಮಾಡಬೇಕೆಂಬ ಸುವಿಚಾರ ಬಂದಿತು. ಪ್ರಾರ್ಥನೆಗೆ ಕುಳಿತೆ. ಕಣ್ಣುಮುಚ್ಚಿ ಧ್ಯಾನಕ್ಕೆ ಪ್ರಾರಂಭ ವಾಯ್ತು. ಪ್ರಾರಂಭ ಪ್ರಾರಂಭದಲ್ಲಿ ಪ್ರಾರ್ಥನೆಯ ಧ್ಯಾನವಿತ್ತು. ಆದರೆ ಮುಂದೆ ಸೊಂಪಾದ ಬೆಳಗುಜಾವದ ಸಕ್ಕರೆಜೊಂಪು. ಯಥಾ ಪ್ರಕಾರ ಮುಂಜಾನೆ ಎಚ್ಚರ. ಹೀಗೆ ಕೆಲವು ದಿವಸ ನಡೆದ ಮೇಲೆ ನಾನು ದೇವರ ಪ್ರಾರ್ಥನೆಯನ್ನು ಮಾಡಬಾರದೆಂದು ಗೊತ್ತುಮಾಡಿದೆ. ಯಾಕೆಂದರೆ ಪ್ರಾರ್ಥನೆ ಮಾಡಲು ಹೋಗಿ ನಿದ್ದೆಹತ್ತಿಬಿಡುತ್ತಿತ್ತು. ಇದೂ ಅಲ್ಲದೆ ಸರ್ವಾಂತರ್ಯಾಮಿಯಾದ ಅವನಿಗೆ ಗೊತ್ತಿಲ್ಲದ್ದೇನು? ನಾನು ಅಂದು ನಾಲ್ಕುಗಂಟೆಗೆ ಎಚ್ಚರಾದ ಕೂಡಲೆ, ಹಾಸಿಗೆಯನ್ನು ಸುತ್ತಿಟ್ಟೆ. ಶಾಸ್ತ್ರಕ್ಕಾಗಿ ದೇವರ ಪ್ರಾರ್ಥನೆಯನ್ನು ಒಂದು ನಿಮಿಷದಲ್ಲಿ ತೀರಿಸಿದೆ. ಮೈಮೇಲಿನ ಬಟ್ಟೆಗಳನ್ನೆಲ್ಲ ಸುತ್ತಿ ಒಂದು ಹಗ್ಗದಿಂದ ಕಟ್ಟಿ ಗೂಟಕ್ಕೆ ತೂಗುಹಾಕಿದೆ. ಸಾಯುವ ಹೊತ್ತಿನಲ್ಲಿ ಮೈಮೇಲೆ ಬಟ್ಟೆ ಬರೆಗಳೇಕೆ, ಎಂದು ಒಂದು ಹಳೆಯ ಕೌಪೀನವನ್ನು ಹಾಕಿಕೊಂಡೆ. ಎಲ್ಲ ಸಿದ್ಧತೆಯಾಯಿತು. ಆದರೇನು? ಎಲ್ಲಿ ನೋಡಿದರೂ ಉರುಲಿನ ಹಗ್ಗವೇ ದೊರೆಯಲೊಲ್ಲದು. ಹೊರಗೆ ಹೋಗಿ ತರಬೇಕೆಂದರೆ ದಿಗಂಬರ

ವೇಷ! ಕೌಪೀನದಿಂದ ಉರುಲು ಹಾಕಿಕೊಳ್ಳಲೇ ಎನಿಸಿತು. ಆದರೆ ಆ ಕೊಳಕು ಅರಿವೆಯಲ್ಲಿ ನನ್ನ ಪುಷ್ಟವಾದ ಕೊರಳಿಗೆ ಉರಲು ಹಾಕುವ ಗಟ್ಟಿತನವಿರಲಿಲ್ಲ. ಆ ಹಗ್ಗವನ್ನು ಹುಡುಕಿಯೇ ಹುಡುಕಿದೆ. ಬೆಳಗಾಗುವ ಸಮಯಕ್ಕೆ ಕಂಡುಬಂತು, ಆ ಹಗ್ಗದಿಂದಲೇ ನನ್ನ ಬಟ್ಟೆಬರೆಗಳನ್ನು ಕಟ್ಟಿಟ್ಟಿದ್ದೆ ಎಂಬುದು. ಉರಲು ಹಾಕಿಕೊಂಡು ಸಾಯುವದು ನನ್ನ ಹಣೆಯಲ್ಲಿಲ್ಲ ಎಂದು ತೋಚಿದ್ದರಿಂದ ನಾನು ಆ ಹಾದೀ ಬಿಟ್ಟುಬಿಟ್ಟೆ.

ಗುಂಡುಹಾಕಿಕೊಳ್ಳುವ ವಿಚಾರ ಬಂತು. ಒಬ್ಬ ಗೆಳೆಯನ ಕಡೆಗೆ ದಿನಾಲು ಹೋಗಿ, ಗುರಿ ಹೊಡೆಯುವದನ್ನು ಕಲಿತೆ. ಆದರೆ ಅದರ ಉಪ ಯೋಗವನ್ನು ಸ್ವಂತ ಮಾಡಿಕೊಳ್ಳಬೇಕು, ಎಂದು ಮನಸ್ಸಿನಲ್ಲಿ ಬಂದಾಗ ಜೀವ ಜರೆದುಕೊಂಡಿತು. ಸಾಯಲು ಒಪ್ಪಿದ ಜೀವವನ್ನು ಕಾಡುಮೃಗದ ಬೇಟೆಯಾಡುವಂತೆ ಬೇಟೆಯಾಡುವದು ತರವಲ್ಲವೆಂದು ನನ್ನ ಸಾತ್ವಿಕ ಜೀವನಕ್ಕೆನಿಸಿದ್ದರೆ ಸೋಜಿಗವೇನು? ಸರಿ! ಗುಂಡಿನ ಗುರಿತಪ್ಪಿತು. ವಿಷಕ್ಕೆ ಕೈ ಹಾಕದೆ ಬೇರೆ ಗತಿಯೇನು ಇನ್ನು? ವಜ್ರವನ್ನು ಅರೆದು ಕುಡಿಯಲಾ? ಛೀ! ಬಡ ಜೀವವನ್ನು ಕೊಲ್ಲಲು ಇಷ್ಟು ಬೆಲೆಯುಳ್ಳ ಉಪಾಯವೇಕೆ? ಅಫು ನುಂಗಲಾ? ಸಾಯುವ ಪೂರ್ವದಲ್ಲಿ ಅಮಲೇರಿ ಎಚ್ಚರ ತಪ್ಪಿ ಸಾಯುವದು ನನಗೆ ಸರಿದೋರಲಿಲ್ಲ. ಕಣ್ತೆರೆದು ನಾನು ಎಚ್ಚರದಿಂದ ಸಾಯಬೇಕು, ಎಂದು ನನ್ನ ಸಂಕಲ್ಪ. ಸೋಮಲ-ಗೀಮಲ? ಬರಬರುತ್ತ ನನಗೆ ವಿಷಪ್ರಯೋಗವು ಸರಿಯಲ್ಲ ಎಂದು ತೋರಿತು. ಇತ್ತೀಚೆ ನಾನು ಚೆನ್ನಾಗಿ ಆರೋಗ್ಯವಂತನಾಗಿದ್ದೆ. ಇಂಥ ಆರೋಗ್ಯ ವಂತನು ಒಮ್ಮೆಲೆ ಸತ್ತರೆ ವಿಷಪ್ರಯೋಗವಾಗಿರಬೇಕೆಂದು ತಾನೇ ಅನು ಮಾನ ಕಟ್ಟುವರು ಜನರು? ಮುಂದಿನ ಅನುಮಾನವೆಂದರೆ ಬೇರೆಯವರು ವಿಷ ಹಾಕಿರಬೇಕೆಂಬುದು. ಇದೇ ನನಗೆ ಬೇಡವಾದದ್ದು. ನನ್ನ ಸಾವಿನಿಂದ ಯಾರೂ ತೊಂದರೆಗೀಡಾಗಬಾರದೆಂದು ನನ್ನ ಆಶೆ. ಈ ಆಶೆಗೂ ಆ ವಿಷಕ್ಕೂ ಮೇಳ ಹೇಗೆ ಬೀಳಬೇಕು? ಸರಿ; ವಿಷದ ಕೈ ಬಿಟ್ಟೆ. ಇನ್ನು ಕೆರೆ–ಬಾವಿಯ ಪಾಲಾಗುವದೆ ನನಗೆ ಉಪಾಯ. ಕೆರೆಯ ವಿಚಾರವನ್ನು ಮೊದಲೆ ಹೊಡೆದು ಹಾಕಿದೆ. ಜನಕ್ಕೂ ದನಕ್ಕೂ ಉಪಯೋಗವಾಗುವ

ನೀರು ಕೆಡಿಸುವದು ಉಚಿತವಾಗಿ ತೋರಲಿಲ್ಲ. ಇನ್ನು ಭಾವಿಗಳು. ಸೀ ನೀರಿನ ಭಾವಿಗಳಲ್ಲಿಯಂತೂ ನಾನು ಹಾರಿಕೊಳ್ಳಲಾರೆ. ಯಾವ ನೀರು ಕುಡಿದು ನಾನು ಬದುಕಿದೆನೋ ಅದರಲ್ಲಿಯೇ ನನ್ನ ಪ್ರಾಣ ಹೋಯಿತೆಂಬ ಅಪಕೀರ್ತಿ ಅದಕ್ಕೇಕೆ ? ನಾನು ಕುದುರೆ ಸವಾರಿ ಮಾಡಿ ಊರ ಸುತ್ತುಮುತ್ತಲಿನ ಎಲ್ಲ ಭಾವಿಗಳ ನಿರೀಕ್ಷಣ ಮಾಡಿದೆ. ಯಾಕೆಂದರೆ ಸವಳು ನೀರಿನ ಭಾವಿಗಳಾದರೇನು ! ಊರೊಳಗಿನವೆಲ್ಲ ಬಡ ಬಗ್ಗರಿಗೆ ಉಪಯೋಗ. ಅಂತೆಯೆ ನಾನು ಹೊರಗಿನ ಭಾವಿಗಳನ್ನು ಹಣಿಕಿ ಹಾಕಿದ್ದು. ಕೆಲವುಗಳಲ್ಲಿ ನೀರೆ ಇರಲಿಲ್ಲ. ಅವು ನನ್ನ ಕೆಲಸಕ್ಕೆ ಬಾರದವು ಗಳು. ನೀರಿದ್ದುವುಗಳೋ ಬಳಿಕೆಯಿಲ್ಲದ್ದರಿಂದ ನಾರುತ್ತಿದ್ದವು. ಅಂಥ ವನ್ನು ಹಾರಿ ನೀರು ಕುಡಿಯುಲಾರದೆ–ಮುಳುಗಲಾರದೆ–ತೊಳಲಾಡು ವದು ಏಕೆ ? ನನಗೆ ಬೇರೆ ಈಸಲು ಬರುತ್ತಿತ್ತು. ಆ ಭಾವಿಗಳೂ ನನಗೆ ಸರಿ ಬೀಳಲಿಲ್ಲ. ಆಯಿತು ನಾನು ಕೈ ಊರಿದೆ.

ಹೀಗೆಯೆ ಕೆಲವು ದಿವಸ ನಡೆದಾಗ ನನಗೆ ಒಂದು ವಿಚಾರ ಬಂತು: ನಾನು ಇಷ್ಟು ಆರೋಗ್ಯವಂತನಾಗಿರುವಾಗ ಸಾಯುವದೇಕೆ ಎಂದು. ಬೇನೆಯು ಜೀವಕ್ಕೆ ಬೇಸತ್ತು ಆಡಿದ ಮಾತನ್ನು ಆರೋಗ್ಯವಂತನಾದ ಮೇಲೂ ಹಾಗೆಯೆ ನಡೆಯಿಸಬೇಕೇ? ವೈದ್ಯರಿಂದ ಸಾಯದ, ರೋಗದಿಂದ ಸಾಯದ, ಔಷಧಗಳಿಂದ ಸಾಯದ, ಸ್ವಪ್ರಯತ್ನಗಳಿಂದಲೂ ಸಾಯದ ಈ ಜೀವದಿಂದ ಯಾವದಾದರೂ ಮಹತ್ವದ ಕಾರ್ಯವಾಗುವ ದಿದೆಯೋ ಯಾರು ಬಲ್ಲರು ? ಈಗ ನನ್ನ ಜೀವನದಲ್ಲಿ ಯಾವದೂ ಅತಿ ಯಿಲ್ಲ; ಎಲ್ಲವೂ ಮಿತಿ. ಆಹಾರ, ವಿಹಾರ, ವಿಚಾರ, ಆಚಾರ, ಎಲ್ಲವೂ ಸುಸೂತ್ರ. ಸಾವು ನನ್ನ ಬೇಟೆಯಾಡಿತು ಕೆಲವು ದಿವಸ. ಈಗ ನಾವಿ ಬ್ಬರೂ ಗೆಳೆಯರು; ಒಬ್ಬರ ದ್ವೇಷ ಒಬ್ಬರಿಗಿಲ್ಲ. ಕೆಲವರ ಸರಸ ವಿರಸವಾಗು ವದು. ನನ್ನ ಸರಸ ಸರಸತರವಾಯಿತು. ಮೃತ್ಯುವಿನಿಂದ ಅಮೃತತ್ವದ ಹಾದಿಯನ್ನು ಹುಡುಕುವದು ಎನ್ನುವರು. ಅದು ಇದೇ ಇರಬಹುದೇ? ಹಾಗಾದರೆ ಇದೇ ಸರಸ, ಇದಕ್ಕೂ ಬೇರೆ ಸರಸಾವುದು ?



# ಎಮ್ಮೆ ಯಮನನ್ನೇ ಹೆದರಿಸಿತು

ಗೊರೂರು ರಾಮಸ್ವಾಮಿ

ನೀವು ಅನೇಕ ಬಗೆಯ ಜಿಪುಣರನ್ನು ನೋಡಿರಬಹುದು. ನಮ್ಮ ಊರು ಪುಟ್ಟ ಜೋಯಿಸ ಅವರನ್ನೆಲ್ಲಾ ಮೀರಿಸಿದವನು. ಸೀಮೆಯ ಎಣ್ಣೆಯ ಖರ್ಚನ್ನುಳಿಸಲು ಕತ್ತಲಾಗುವುದಕ್ಕೆ ಮುಂಚೆ ಊಟಮಾಡಿ ಮಲಗುತ್ತಿದ್ದ. ಶಾಮಾಚಾರ್ಯರನ್ನು ಕಂಡು ಜೋಯಿಸನು ಕನಿಕರದಿಂದ 'ಪಾಪ, ಈ ಪ್ರಾಣಿಗೆ ಈ ಶಾಸ್ತ್ರದಲ್ಲಿ ಈಗ ತಾನೆ ಶ್ರೀ ಓನಾಮ ಆಗುತ್ತಿದೆ' ಎನ್ನುತ್ತಿದ್ದನು. ನರಸಿಂಹಾಚಾರ್ಯರ ಹಸು,—ಕರು ಹಾಕುವುದಕ್ಕೆ ಎರಡು ತಿಂಗಳ ಮುಂಚೆ ಹಾಲು ಕರೆಯುವುದನ್ನು ತಪ್ಪಿಸಿಕೊಂಡಾಗ, ಅವರ ಹಿಡಿತವನ್ನು ಕಂಡಿದ್ದ. ನಮ್ಮ ಊರವರು 'ಇನ್ನು ಮೇಲೆ ಹಸುವಿನ ಬಾಲದ ಕಡೆಯಿಂದ ಹಾಲು ಕರೆದುಕೊಳ್ಳಬೇಕು. ಜೀವ ಹೋದರೂ ಇವರು ಮಾತ್ರ ಬೇರೆ ಹಸುವನ್ನು ಕೊಳ್ಳುವರಲ್ಲ' ಎಂದರು. ಆದರೆ ನರಸಿಂಹಾಚಾರ್ಯರು 'ತಮಗೆ ತುಂಬ ಹಾಲು ಕರೆಯುವ ಹಸು ಬೇಕು. ನಾಲ್ಕು ಕಾಸು ಹೆಚ್ಚಾಗಿ ಖರ್ಚಾದರೂ ಚಿಂತೆಯಿಲ್ಲ' ಎಂಬುದಾಗಿ ನಮ್ಮ ಊರ ಸುತ್ತುಮುತ್ತಲಿನ ಹಳ್ಳಿಗಳನ್ನು ತಿರುಗಲು ಪ್ರಾರಂಭಿಸಿದಾಗ ನಮ್ಮೂರವರಿಗೆಲ್ಲಾ ಆಶ್ಚರ್ಯವಾಯಿತು. ಕೆಲವರಂತೂ ಈ ವಿನಾಶಕಾರಕವಾದ ಸ್ವಭಾವ ಅವರನ್ನು ಬೇಗ ಬಿಟ್ಟು ಹೋಗಲೆಂದು ಗ್ರಾಮರಕ್ಷಣೆಗಾಗಿ ಊರ ಮುಂದಲ ಹನುಮಂತರಾಯನಿಗೆ ಕರ್ಪೂರಾರ್ತಿಯನ್ನೂ ಮಾಡಿಸಿದರು. ನರಸಿಂಹಾಚಾರ್ಯರು ಹಾಲು ಕರೆದು ನೋಡಬೇಕೆಂದು ಒಂದೊಂದಾಗಿ ಹಸುಗಳನ್ನು ಮನೆಗೆ ಹೊಡೆದುಕೊಂಡು ಬರಲು ಪ್ರಾರಂಭಿಸಿದಾಗಲಂತೂ ಊರಿನವರಿಗೆಲ್ಲಾ ದಂಗುಬಡಿದು ಹೋಯಿತು. ಆದರೆ ಪುಟ್ಟ ಜೋಯಿಸ ಮಾತ್ರ

ತಿಳಿದವನಂತೆ ಹುಸಿ ನಗು ನಗುತ್ತಲೇ ಇದ್ದನು. ನರಸಿಂಹಾಚಾರ್ಯರು ಮೊದಲು ಒಡ್ಡರ ಹಳ್ಳಿಯ ಈಡಿಗನ ಹಸುವನ್ನು ಹೊಡೆದುಕೊಂಡು ಮನೆಗೆ ಬಂದರು.

ಅದು ಒಂದು ಹೊತ್ತಿಗೆ ಕರುವಿಗೆ ಬಿಟ್ಟು ಕಳ್ಳಿಯ ಹಾಲಿನಂತೆ ಬೊಟ್ಟಾದ ಒಂದೂವರೆ ಸೇರು ಹಾಲು ಕೊಡುತ್ತಿದ್ದಿತು. ನರಸಿಂಹಾಚಾರ್ಯರು ಅಂತಹ ಕ್ಷೀರಸಮುದ್ರವನ್ನು ಆ ವರೆಗೆ ಕಂಡಿರಲಿಲ್ಲ. ಆದರೆ ಅವರು ಈಡಿಗನೊಂದಿಗೆ ಹಸುವಿನ ಬೆಲೆಯನ್ನು ಕುರಿತು ಉಸಿರೇ ಎತ್ತಿರಲಿಲ್ಲ. 'ಇರಲಿ ಹಾಲು ಕರೆದು ನೋಡುತ್ತೇನೆ' ಎಂದಿದ್ದರು. ನಾಲ್ಕನೆಯ ದಿನ ಈಡಿಗನು ವಿಚಾರಿಸಲು ಬಂದಾಗ, ನರಸಿಂಹಾಚಾರ್ಯರು 'ಇದರ ಮೈ ಅಸಾಧ್ಯವಾದ ಮೀನಿನ ವಾಸನೆ. ನಿತ್ಯ ೨ ಆಣೆ ಧೂಪ ಹಾಕಿದರೂ ಮೀನಿನ ವಾಸನೆ ಮನೆಯಿಂದ ಹೋಗಿಲ್ಲ. ಅದರ ಹತ್ತಿರಕ್ಕೆ ಹೋದರೆ ಮೂಗಿನ ಸಲೆ ಒಡೆದು ಹೋಗುತ್ತದೆ. ನಾಲ್ಕು ದಿನಗಳಿಂದ ಹಾಲನ್ನು ಕರುವಿಗೇ ಕುಡಿಸುತ್ತಿದ್ದೇನೆ. ಇನ್ನು ೨–೩ ದಿನ ಬಿಟ್ಟು ಬಾ' ಎಂದರು. ಈ ರೀತಿ ನರಸಿಂಹಾಚಾರ್ಯರು ಒಂದೊಂದು ಹಸುವನ್ನು ಒಂದೊಂದು ವಾರದಂತೆ ಇಟ್ಟುಕೊಂಡು ಆರು, ಏಳು ವಾರ ಪರೀಕ್ಷೆ ಮಾಡುವದರೊಳಗಾಗಿ ಅವರ ಸ್ವಂತ ಹಸುವೇ ಕರುಹಾಕಿಬಿಟ್ಟಿತು. ಅವರು ಪರೀಕ್ಷಿಸಿದ ಯಾವ ಹಸುವೂ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ. ಒಂದಕ್ಕೆ 'ಚಾಳಿ ಚೆನ್ನಾಗಿಲ್ಲ'– ಮತ್ತೊಂದು 'ನೋಡುವುದಕ್ಕೆ ಬಲರಾಮ ಗೋವು'– ಮೂರನೆಯದು 'ಜಾತಿ ವೈರಿ, ಕರುವನ್ನೇ ಒದೆಯುತ್ತದೆ'– ನಾಲ್ಕನೆಯದು ಎಲ್ಲಾ ವಿಧದಲ್ಲೂ ಸಮರ್ಪಕವಾಗಿದ್ದರೂ 'ಸುಳಿಹೀನ'– ಐದನೆಯದರ 'ಹಾಲು ನೀರು, ಅದರಲ್ಲಿ ಬನಿ ಇಲ್ಲ'– ಆರನೆಯದು 'ಸೋರು' ಬಿಡುವುದು ಬಹಳ ನಿಧಾನ'– ಏಳನೆಯದರ 'ಹೊಟ್ಟೆ ಹೆಮ್ಮಾರಿ' ಇತ್ಯಾದಿ. ಹಸುಗಳು ಒಂದು ವಾರ ನರಸಿಂಹಾಚಾರ್ಯರ ಮನೆಯಲ್ಲಿ ಕರೆದ ಹೊರತು ಅದರ ಯೋಗ್ಯತೆ ಪತ್ತೆಯಾಗುತ್ತಿರಲಿಲ್ಲ. ಆ ಎರಡು ತಿಂಗಳಿನಲ್ಲಿ ನರಸಿಂಹಾಚಾರ್ಯರಿಗೆ ವಿಪರೀತ ಬೊಜ್ಜು ಬಂದು ಕಣ್ಣು

ಮೂಗುಗಳು ಹೊಳೆಯಲಾರಂಭಿಸದುವು. ಅವರ ಹೆಂಡತಿಯುವರು ಮುಂದಿನ ಆರು ತಿಂಗಳಿಗೆ ಬೇಕಾಗುವಷ್ಟು ಅನ್ನ ಶುದ್ಧಿಯನ್ನು ಸಂಗ್ರಹಿಸಿ ಬಿಟ್ಟರು. ಅವರ ಸ್ವಂತ ಹಸುವೂ ಕೂಡ ಕಲಗಚ್ಚಿನ ಬದಲು ಅರೆ ಗಡೆದ ಮೊಸರನ್ನೇ ಕುಡಿಯುತ್ತಿದ್ದಿತು. ಅವರ ಪರೀಕ್ಷೆಗಾಗಿ ಬಂದಿದ್ದ ಇತರ ಹಸುಗಳು ಮಾತ್ರ ಹೊಟ್ಟೆಗೆ ಬೆನ್ನನ್ನು ಅಂಟಿಸಿಕೊಂಡು ಅವರ ಮನೆಯಿಂದ ಹೋದವು. ಯೋಗಿಗಳ ಸಾಧನೆಯನ್ನು ಜನರು ಮಂಕಾಗಿ ನೋಡುವಂತೆ ನರಸಿಂಹಾಚಾರ್ಯರ ಈ ವ್ಯಾಪಾರವನ್ನು ನಮ್ಮ ಊರಿನವರು ಮುಗ್ಧರಾಗಿ ನೋಡುತ್ತಿದ್ದರು. ಪುಟ್ಟ ಜೊಯಿಸ ಮಾತ್ರ 'ಈ ಮರುಳನಿಗೆ ಇಷ್ಟಕ್ಕೆ ತಲೆ ಸಿಲ್ಲುವದಿಲ್ಲ. ಕಾಸು ಉಳಿಸುವುದನ್ನು ಕಲಿಯಬೇಕಾದರೆ ಇನ್ನೂ ತುಂಬ ರಾಗಿ ಬೀಸಬೇಕು' ಎನ್ನುತ್ತಿದ್ದನು. ಬ್ರಾಹ್ಮಣನಾದ ಶಿಂಗ್ರಯ್ಯ ಎಲೆಯ ಖರ್ಚನ್ನು ಉಳಿಸಬೇಕೆಂದು, ನಮ್ಮೂರ ಆಚಾರಿ ತನ್ನಲ್ಲಿ ೯ ಆಣೆಗೆ ಅಡವಿಟ್ಟಿದ್ದ ಗಂಗಳದಲ್ಲಿ ಊಟ ಮಾಡಲು ಪ್ರಾರಂಭಿಸಿದಾಗ ಊರವರೆಲ್ಲ ಶಿಂಗ್ರಯ್ಯನನ್ನು ಬಯ್ಯುತ್ತಿದ್ದರೂ ಪುಟ್ಟ ಜೋಯಿಸನು ಮಾತ್ರ 'ಈ ವಿದ್ಯದ ಮೊದಲನೆಯ ಮೆಟ್ಟಲನ್ನು ಇವನು ಹತ್ತಿದ್ದಾನೆ, ಇನ್ನೂ ನೂರಾರು ಮೆಟ್ಟಲುಗಳನ್ನು ಹತ್ತಬೇಕು' ಎನ್ನುತ್ತಿದ್ದನು.

ಇಷ್ಟರಿಂದಲೇ ಪುಟ್ಟ ಜೋಯಿಸನ ಸ್ವಭಾವ ನಿಮಗೆ ಗೊತ್ತಾಗಬಹುದು. ಅವನಿಗೆ ನಾಲ್ವತ್ತು ವರ್ಷಗಳಿಂದ ನಶ್ಯ ಹಾಕುವ ಅಭ್ಯಾಸವಿದ್ದರೂ ಅವನು ನಶ್ಯಕ್ಕಾಗಿ ಒಂದು ದಿನವೂ ಒಂದು ಕಾಸನ್ನೂ ಖರ್ಚು ಮಾಡಿದವನಲ್ಲ. ಹೆಚ್ಚೇಕೆ, ಪುಟ್ಟ ಜೋಯಿಸ 'ಒಂದು ಕಾಸು ಖರ್ಚು ಮಾಡಿದರೆ ಒಬ್ಬ ಮನುಷ್ಯನ ತಲೆ ಒಡೆದಂತೆ' ಎಂದು ಧೃಢವಾಗಿ ನಂಬಿದ್ದನು. ಇಂಥ ಮನುಷ್ಯ ಜೀವವಿಮೆ ಮಾಡಿದಾಗ ನಮ್ಮೂರಿನವರಿಗೆ ಉಂಟಾದ ಆಶ್ಚರ್ಯಕ್ಕೆ ಸಮಾನಾದುದು ಇದುವರೆಗೆ ಯಾವುದೂ ಇಲ್ಲ.

ಕೆಂಬೂತಯ್ಯನು ಮೊದಲು ವಿಮಾ ಕಂಪೆನಿಗೆ ನಮ್ಮೂರಿನಲ್ಲಿ ಎಜೆಂಟ್ ಆದಾಗ ಅವನು ಯಾವುದೋ ದರೋಡೆಕೋರರ ಗುಂಪಿಗೆ

ಸೇರಿದವನೆಂದೇ ಜನರೆಲ್ಲಾ ಭಾವಿಸಿದ್ದರು. ವಿಮಾ ಏಜೆಂಟಿನ ನಡವಳಿಕೆಯನ್ನು ಕುರಿತು ವಿಮಾ ಪತ್ರಿಕೆಯಲ್ಲಿ ಬಂದ ಸಲಹೆಗಳಂತೆ ಕೆಂಬೂತಯ್ಯನು ವಿಧೇಯನಾಗಿ ಜನರೊಂದಿಗೆ ಮಾತುಕಥೆಯಾಡಲು ಪ್ರಾರಂಭಿಸಿದ ಕೂಡಲೆ ಗ್ರಾಮಸ್ಥರು ಇವನೇನೋ ಫಿತೂರಿ ಮಾಡುತ್ತಿದ್ದಾನೆ. ಇಲ್ಲದಿದ್ದರೆ ಇಷ್ಟು ವಿಧೇಯತೆ ಯಾಕೆ? ನೆನ್ನೆ, 'ಬಾರೋ ಹೋಗೋ' ಎನ್ನುತ್ತಿದ್ದವನು ಇವತ್ತು 'ಬಾರಯ್ಯ, ಏನಯ್ಯ' ಎನ್ನುತ್ತಾನೆ. ಹೇಳಬೇಕಾಗಿದ್ದುದನ್ನು ದಡಬಡನೆ ಒದರುತ್ತಿದ್ದವನು ಈಗ 'ಪುರಸತ್ತಿದೆಯೆ? ಸ್ವಲ್ಪ ಮಾತನಾಡಬೇಕಲ್ಲಾ' ಎನ್ನುತ್ತಾನೆ. ಒಂದೊಂದು ದಿನ ಒಂದೊಂದು ವೇಷ ಬದಲಾಯಿಸುತ್ತಾನೆ. ಇವನು ಘಾತುಕ ಧೂರ್ತ ಎಂದುಕೊಳ್ಳಲು ಪ್ರಾರಂಭಿಸಿದರು. ಪುಟ್ಟ ಜೋಯಿಸನು 'ವಿಮಾ ಏಜೆಂಟನಂತಹ ಪರಾವಲಂಬಿ ಬೇರೆ ಯಾರೂ ಇಲ್ಲ; ಇವನಿಗಾಗಿ ಇತರರು ಕೆಲಸ ಮಾಡುತ್ತ ವಿಮೆ ಹಣವನ್ನು ಕಟ್ಟುತ್ತಿರಬೇಕು. ಇವನು ಮಾತ್ರ ಕೂತಲ್ಲಿ ಕೂತು ಅದರ ಕಮೀಷನ್ ತಿನ್ನುತ್ತಿರಬೇಕು' ಎನ್ನುತ್ತಿದ್ದನು. ಮನುಷ್ಯ ತನಗೆ ಇರುವ ಯೋಗ್ಯತೆಯನ್ನು ಕಳೆದುಕೊಳ್ಳಬೇಕಾದರೆ ಅವನು ವಿಮಾ ಏಜೆಂಟಾದರೆ ಸಾಕು ಎಂದು ನರಸಿಂಹಾಚಾರ್ಯರು ಹೇಳತೊಡಗಿದರು. 'ವಿಮೆ ಏನೊ ನಾನು ಮಾಡುತ್ತೇನೆ. ಆದರೆ ತಿಂಗಳು ತಿಂಗಳ ಪ್ರೀಮಿಯಂ ನೀನು ಕಟ್ಟಿಕೊ' ಎಂದವರು ಕೆಲವರು. ಎಲ್ಲರ ಮಾತುಗಳಿಗಿಂತ ನಮ್ಮ ಪುಟ್ಟ ಜೋಯಿಸನ ವಾದ ವಿಚಿತ್ರವಾಗಿತ್ತು. ಘಾಟಿ ಎನ್ನಿಸಿಕೊಂಡಿದ್ದ ಕೆಂಬೂತಯ್ಯನೇ ಅವನ ಎದುರಿಗೆ ವಾದಿಸಲು ತಬ್ಬಿಬ್ಬಾಗುತ್ತಿದ್ದನು. ಅವನ ವಾದ ಇದು— ನೀನೇನೊ ವಿಮೆ ಮಾಡು ಎಂದು ಹೇಳುತ್ತೀಯೆ. ವಿಮೆ ಮಾಡಿದ ಕೂಡಲೆ ಒಂದೊ ಎರಡೊ ಕಂತು ಹಣ ಕೊಟ್ಟು ಅನಂತರ ಸತ್ತು ಹೋಗಬೇಕು. ಹಾಗೆ ಸಾಯದಿದ್ದರೆ ವಿಮಾ ಕಂಪನಿಗೆ ಲಾಭವುಂಟಾಗುವುದು. ಒಂದು ವೇಳೆ ಹಾಗೆ ಸತ್ತೆವೆಂದು ಇಟ್ಟುಕೊಳ್ಳೋಣ! ಅನಂತರ ಆ ಹಣದಿಂದ ತಾನೆ ಏನು ಪ್ರಯೋಜನ?' ಎಂದು ಪುಟ್ಟ ಜೋಯಿಸ ಹೇಳುತ್ತಿದ್ದ ಮಾತು ಎಲ್ಲರಿಗೂ ಸರಿಯೆಂದು ತೋರುತ್ತಿದ್ದಿತು. ಕೆಂಬೂತಯ್ಯನು 'ನೀವು ಯಾಕೆ ಸಾಯಬೇಕು, ಜಜನೆಯ

ವಯಸ್ಸಿಗೆ ನಿಮ್ಮ ಕೈಗೆ ಹಣ ಬರುವದು ' ಎಂದರೆ ' ಅದಕ್ಕೆ ನಿನ್ನ ಹತ್ತಿರ ಯಾಕೆ ಕೊಟ್ಟು ಇಟ್ಟಿರಬೇಕು ? ಕಂತುಗಳನ್ನೆಲ್ಲಾ ನಾನೇ ಒಟ್ಟಾಗಿ ಸೇರಿಸಿದರೆ ಹಣ ಗಂಟಾಗುವುದಿಲ್ಲವೆ? ವಿಮೆ ಮಾಡಿದ ಮೇಲೆ ಒಂದು ದಿವಸ ಬದುಕಿದ್ದರೂ ಭೂಮಿಗೆ ಭಾರವೇ ' ಎನ್ನುತ್ತಿದ್ದನು. ಪೂಜಾರಿ ಹನುಮಂತಯ್ಯನು ಕೆಂಬೂತಯ್ಯನ ಮಾತುಗಳಿಂದ ಸಂತುಷ್ಟನಾಗಿ ವಿಮೆ ಮಾಡಿದ ಮೇಲೆ ಪುಟ್ಟ ಜೋಯಿಸನು ' ನಿಮ್ಮಂತಹ ಅವಿವೇಕಿ ಗಳಿಂದಲೇ ಅಷ್ಟು ದೊಡ್ಡ ದೊಡ್ಡ ಕಂಪೆನಿಗಳು ಸಾವಿರಾರು ಬೆಳೆದಿರು ವುದು. ಅವುಗಳ ಕಟ್ಟಡಗಳನ್ನು ನೋಡಿ ವಿಮೆ ಮಾಡಿದ ಮೇಲೆ ಸಾಯು ಬೇಕೆನ್ನುವುದು ನಿಮಗೆ ತಿಳಿಯಬೇಡವೆ ' ಎನ್ನುತ್ತಿದ್ದನು. ಈ ವಾದವು ವಿಮೆ ಮಾಡುತ್ತೀರಾ ಎಂದರೆ ' ನಾನು ಬದುಕಿರುವುದು ನಿಮಗೆ ಇಷ್ಟ ವಿಲ್ಲ. ಸಾಯಬೇಕು ಅಂತಾ ಕಾಣುತ್ತೆ ' ಎಂದು ಪುಟ್ಟ ಜೋಯಿಸ ಹೇಳುವ ವರೆಗೆ ಹೋಗಿದ್ದಿತು.

ಆದರೆ ಕೆಂಬೂತಯ್ಯ ನಿರಾಶನಾಗಲಿಲ್ಲ. ಯಾವ ವಿಮಾ ಏಜೆಂಟನೂ ತನ್ನ ಬಲೆಗೆ ಬೀಳುವ ಪ್ರಾಣಿಗಳ ವಿಚಾರದಲ್ಲಿ ನಿರುತ್ಸಾಹನಾಗುವುದಿಲ್ಲ. ಕೆಂಬೂತಯ್ಯನು ' ನೋಡಿ ಕಾನ್ಪುರದಲ್ಲಿ ಒಬ್ಬ ನೂರು ರೂಪಾಯಿ ಕಂತು ಕೊಟ್ಟು ಸತ್ತುಹೋದ; ಅವನ ಮನೆಯವರಿಗೆ ಐದು ಸಾವಿರ ರೂಪಾಯಿ ಬಂದಿತು. ಅಲ್ಹಾಬಾದಿನಲ್ಲಿ ಒಬ್ಬ ಮೂರು ಸಾವಿರಕ್ಕೆ ಮಾಡಿದ್ದ; ಪಾಲಿಸಿಯನ್ನು ಒಂದು ತಿಂಗಳ ಹಿಂದೆ ಎಂಟು ಸಾವಿರಕ್ಕೆ ಹೆಚ್ಚಿಸಿದ; ಎಂಟು ದಿವಸದೊಳಗೆ ಸತ್ತು ಹೋದ. ಅವನ ಹೆಂಡತಿಗೆ ಆಗಲೇ ಎಂಟು ಸಾವಿರ ರೂಪಾಯಿ ಬಂದಾಯಿತು ' ಎಂದು ಮುಂತಾಗಿ ದೂರದೂರದ ಸಂಗತಿಗಳನ್ನು ಹೇಳಿದಾಗ ಪುಟ್ಟ ಜೋಯಿಸನು 'ಹೌದು ಒಂದು ಕಂತು ಕೊಟ್ಟು ಸಾಯಬೇಕು. ಆಗ ಮಾತ್ರ ಲಾಭ. ಆದರೆ ಸತ್ತ ಮೇಲೆ ಆ ಹಣ ಕಟ್ಟಿಕೊಂಡು ಮಾಡುವುದೇನು ? ' ಎನ್ನುತ್ತಿದ್ದನು.

ಆ ವೇಳೆಗೆ ನಮ್ಮೂರಿಗೆ ಪ್ಲೇಗು ಬಂದಿತು. ಹಳ್ಳಿಗಾಡಿನ ಮನೆಗಳು. ಮನೆಯಲ್ಲಿ ಎಲ್ಲಿ ನೋಡಿದರೂ ಅನವಶ್ಯಕವಾದ ಕಸ, ಹಳೆ ಕಾಗದಗಳು, ಬುಟ್ಟಿಗಳು. ಅವು ನೂರಾರು ವರ್ಷಗಳಿಂದ ಅನವಶ್ಯಕಗಳಾಗಿದ್ದರೂ

ಜನರಿಗೆ ಅವುಗಳನ್ನು ಹೊರಕ್ಕೆ ಎಸೆಯಲು ಇಷ್ಟವಿರಲಿಲ್ಲ. ಹೀಗೆ ಪ್ರತಿ ಮನೆಯಲ್ಲೂ ನಾಲ್ಕಾರು ಗಾಡಿ ಕಸ ಬಿದ್ದಿರುತ್ತಿದ್ದವು. ಅವುಗಳ ಸಂದಿಯಲ್ಲಿ ಇಲಿಗಳು ಸುಖವಾಗಿ ಮನೆಗಳನ್ನು ಮಾಡಿಕೊಂಡು ನಾಲ್ಕಾರು ಶತಮಾನಗಳಿಂದ ವಂಶಪಾರಂಪರ್ಯವಾಗಿ ಜೀವಿಸುತ್ತಿರುವವು. ಪ್ಲೇಗಿನಲ್ಲಿ ಮತ್ತೆಲ್ಲೂ ಸಾಯದಷ್ಟು ಇಲಿಗಳು ನಮ್ಮೂರಿನಲ್ಲಿ ಸತ್ತವು. ಮೊದಮೊದಲು ಪ್ರತಿಮನೆಯಲ್ಲೂ ಹತ್ತು ಇಪ್ಪತ್ತು ಬೀಳುತ್ತಿದ್ದುದು ಬರಬರುತ್ತ ಹತ್ತು ಇಪ್ಪತ್ತು ಮೊರಗಳ ತುಂಬ ಬೀಳಲು ಪ್ರಾರಂಭವಾಯಿತು. ಮೊದಲು ರಾತ್ರಿ ಮಾತ್ರ ಬೀಳುತ್ತಿದ್ದುದು ಆ ಮೇಲೆ ಹಗಲೂ ಬೀಳಲು ಪ್ರಾರಂಭವಾಯಿತು. ಆದರೆ ನಮ್ಮೂರವರು ಇಲಿಗಳಿಗೆ ಹೆದರಲೇ ಇಲ್ಲ. ವಿಷಕ್ರಿಮಿ ನ್ಯಾಯದಂತೆ ಇಲಿಗಳ ವಾಸನೆಯು ಅವರಿಗೆ ಒಗ್ಗಿಯೇ ಹೋಯಿತು. 'ಇವತ್ತು ಬಿದ್ದುದು ಭೂಪತಿ; ಇಲಿಗಳರಾಜ. ನಿನ್ನೆ ಬಿದ್ದುದು ಇದರ ಹೆಂಡತಿ ಮೂಷಿಕ ರಾಣಿ, ಸರಿ, ರಾಜ ಹೋದ ದಾರಿಯಲ್ಲಿ ಮಂತ್ರಿಗಳೂ ಸೇನಾಪತಿಗಳೂ ಹೊರಡಬೇಕು. ಅವರ ಸ್ವಾಗತಕ್ಕೆ ಸಿದ್ಧ ಮಾಡಿಕೊಳ್ಳಿ. ಇಲಿಗಳಿಗೆ ಡಾಕ್ಟರ ಇಲ್ಲವೇನೊ! ಅವನು ಇವರಿಗೆ ಇನ್ಯಾಕ್ಯುಲೇಷನ್ ಮಾಡುವುದಿಲ್ಲವೇನೋ! ಅಥವಾ ಫೀಜು ಹೆಚ್ಚಾಗಿ ಕೇಳುತ್ತಾನೇನೋ' ಮುಂತಾಗಿ ಅವರು ವಿನೋದ ಮಾಡುತ್ತ ಇಲಿಗಳನ್ನು ಹೂಳತೊಡಗಿದರು. ಹೊರಗಿನಿಂದ ಬಂದವರು ನಮ್ಮೂರಲ್ಲಿ ಪ್ಲೇಗ್ ಇದೆಯೆಂದು ಕೇಳಿದ ಕೂಡಲೆ ಒಂದೇ ಉಸಿರಿಗೆ ೧೦ ಮೈಲು ಓಡುತ್ತಿದ್ದರು. ಸಾಯುತ್ತಿದ್ದ ಇಲಿಗಳ ರಾಶಿಯನ್ನು ಕಂಡು ಅವರಿಗೆ ನಡುಕವುಂಟಾಗುತ್ತಿದ್ದಿತು. ಆದರೆ ನಮ್ಮ ಊರಿನವರನ್ನು ಯಾರಾದರೂ 'ನಿಮ್ಮ ಹಳ್ಳಿಯಲ್ಲಿ ಪ್ಲೇಗ್ ಇದೆಯೇ?' ಎಂಬುದಾಗಿ ಕೇಳಿದರೆ ಅವರು 'ಏನೂ ಕಾಣಲಿಲ್ಲ. ಇಲಿಗಳು ಮಾತ್ರ ಸಾಯುತ್ತಿವೆ' ಎನ್ನುತ್ತಿದ್ದರು. ಕೆಲವರಿಗೆ ನಿಜವಾಗಿಯೂ 'ಪ್ಲೇಗು' ಇಲಿಗಳಿಗೆ ಸಂಬಂಧಪಟ್ಟ ಜಾಡ್ಯ. ನಮಗೂ ಇದಕ್ಕೂ ಸಂಬಂಧವಿಲ್ಲ' ಎಂಬ ನಂಬಿಕೆಯೇ ದೃಢವಾಗಿತ್ತು.

ಆದರೆ ಅದರ ನಂಬಿಕೆ ಕೆಡುವ ಕಾಲ ಬಂದಿತು. ಇದ್ದಕ್ಕಿದ್ದಂತೆ

ಪ್ಲೇಗು ಮನುಷ್ಯರಿಗೆ ಮುಟ್ಟಿಸಲು ಪ್ರಾರಂಭಿಸಿತು. ಆಗಿನ ಅದರ ಜೋರು ಅಸಾಧ್ಯವಾಗಿದ್ದಿತು. ನಿತ್ಯ ಎರಡು ಮೂರು ಜನರು ಸಾಯಲು ಮೊದಲಾಯಿತು. ಆದು ವರೆಗೆ ಪ್ಲೇಗಿಗೆ ಸ್ವಲ್ಪವೂ ಹೆದರದಿದ್ದ ನಮ್ಮ ಊರವರು ಸಾವಿನ ಮುಖವನ್ನು ಕಂಡಕೂಡಲೆ ನಡುಗಲು ಪ್ರಾರಂಭಿಸಿದರು. ಪುಟ್ಟ ಜೋಯಿಸನ ಭಯವಂತೂ ವಿಪರೀತವಾಯಿತು. ದುಡ್ಡಿಗೆ ಬಲವಾಗಿ ಅಂಟಿಕೊಂಡಿರುವವರಿಗೆ ಜೀವದ ಮೇಲಿನ ಆಸೆಯೂ ಹೆಚ್ಚೆಂದು ಕಾಣುತ್ತದೆ.

ಪುಟ್ಟ ಜೋಯಿಸನ ಮಗ್ಗುಲ ಮನೆಯ ಥಾಂಡಿಗ ರಾಮುವಿಗೆ ಪ್ಲೇಗು ತಗುಲಿ ಯಮನೊಂದಿಗೆ ಚರ್ಚಿಸಲು ಅವನು ಹೋದಾಗಲಂತೂ ಊರಿಗೆ ಮಂಕು ಪೂರ್ತಾ ಕವಿದುಕೊಂಡಿತು. ಪ್ಲೇಗಿನ ಕೈಯಿಂದ ಯಾರೂ ತಪ್ಪಿಸಿಕೊಳ್ಳುವಂತೆ ತೋರಲಿಲ್ಲ. ಪುಟ್ಟ ಜೋಯಿಸನಂತೂ ಪ್ಲೇಗು ತನಗೆ ತಗಲುವದನ್ನೇ ನಿರೀಕ್ಷಿಸುತ್ತಾ ಹೆದರಿ ಹಣ್ಣಾದನು.

ಇದ್ದಕ್ಕಿದ್ದಂತೆ ಜೋಯಿಸನಿಗೆ ಒಂದು ಯೋಚನೆ ಹೊಳೆಯಿತು. ಆದರಿಂದ ಅವನು ಸಾವಿನ ಮಧ್ಯದಲ್ಲಿದ್ದರೂ ಅವನಿಗೆ ಸ್ವಲ್ಪ ಧೈರ್ಯ ಬಂದಿತು. ಈ ಕೆಂಬೂತಯ್ಯ 'ಜೀವ ವಿಮೆ ಮಾಡು' ಎಂದು ಅನೇಕ ತಿಂಗಳಿನಿಂದ ಕೇಳುತ್ತಿದ್ದಾನೆ. ಅದಕ್ಕೆ ಇದೇ ಸಮಯ. ಈ ಪ್ಲೇಗಿನಿಂದ ನಾನಂತೂ ತಪ್ಪಿಸಿಕೊಳ್ಳಲಾರೆ. ಎಲ್ಲರೂ ಸಾಯುವುದು ಖಂಡಿತ, ಆದರೆ ಮನೆಯವರಿಗಾದರೂ ಸ್ವಲ್ಪ ಹಣ ಬಂದರೆ ನನ್ನ ನಂತರ ಅವರು ಸುಖವಾಗಿರಬಹುದು. ಹೀಗೆ ಮಾಡಿದರೆ ಇನ್‌ಶೂರೆನ್ಸಿನಿಂದ ಆಗಬೇಕಾಗಿರುವ ಪೂರ್ಣ ಪ್ರಯೋಜನವನ್ನು ನಾನು ಹೊಂದಿದಂತಾಗುತ್ತದೆ. ಒಂದು ಪ್ರೀಮಿಯಂ ಕೊಡುವುದರಲ್ಲಿ ನಾನು ಸಾಯುವುದು ಖಂಡಿತ ಎಂದುಕೊಂಡನು. ಆ ಯೋಚನೆಗಳಿಂದ ಪುಟ್ಟ ಜೋಯಿಸನಿಗೆ ಸ್ವಲ್ಪ ಶಾಂತಿಯಾದರೂ ಸಾವಿನ ಭಯ ಮಾತ್ರ ತಪ್ಪಲಿಲ್ಲ. 'ಇನ್‌ಷೂರು ಮಾಡಿದರೂ ಚಿಂತೆಯಿಲ್ಲ. ಪ್ರೀಮಿಯಂ ಕೊಟ್ಟರೂ ಚಿಂತೆಯಿಲ್ಲ. ಆದರೆ ಮಾತ್ರ ಪ್ಲೇಗಿಗೆ ತುತ್ತಾಗದಿದ್ದರೆ ಸಾಕು. ವಿಮೆ ಮಾಡುವುದರಿಂದ ಸಾವು ತಪ್ಪುವುದಾದರೆ ಎಷ್ಟು ಲಕ್ಷಕ್ಕೆ ಬೇಕಾದರೂ ಮಾಡಿಬಿಡುತ್ತಿದ್ದೆ.

ಆದರೆ ಇರುವೆಯಂತಹ ಅಲ್ಪ ಪ್ರಾಣಿಗೆ ಸಾವಿನ ಭಯವನ್ನು ತಪ್ಪಿಸುವ ಶಕ್ತಿ ಎಲ್ಲಿಂದ ಬರಬೇಕು? ಆಗಲಿ, ಈ ಕೆಂಬೂತಯ್ಯನ ಗರ್ವವನ್ನು ಇಳಿಸುತ್ತೇನೆ' ಎಂದುಕೊಂಡು ಅವನು ಕೆಂಬೂತಯ್ಯನನ್ನು ಕರೆಸಿ ಹತ್ತುಸಾವಿರ ರೂಪಾಯಿಗೆ ಒಂದು ಪಾಲಿಸಿಯನ್ನು ತೆಗೆದುಕೊಂಡನು.

ಕೆಂಬೂತಯ್ಯನಿಗೆ ಮೊದಲು ಬಹಳ ಆಶ್ಚರ್ಯವಾಯಿತು. ಅವನು ಅದು ವರೆಗೆ ಅನೇಕರಿಂದ ಏನು ಮಾಡಿಸಿದ್ದರೂ ಒಟ್ಟಿಗೆ ಯಾರೂ ಒಂದೇ ಸಲ ಹತ್ತುಸಾವಿರಕ್ಕೆ ಮಾಡಿರಲಿಲ್ಲ. ಅದರಿಂದ ಅವನ ಉತ್ಸಾಹವು ಇದ್ದಕ್ಕಿದ್ದಂತೆ ಒಂದಕ್ಕೆ ಒಂದೂವರೆಯಾಯಿತು. ಜೋಯಿಸರು ಬದುಕಿದ್ದ ದಿನಗಳಿಗೆ ಮಾತ್ರ ಕೆಂಬೂತಯ್ಯನಿಗೆ ಬೋನಸ್ಸು ಸಿಕ್ಕುತ್ತಿದ್ದುದರಿಂದ ಅವನು 'ಜೋಯಿಸನು ಅನೇಕ ಕಾಲ ಬದುಕಲಿ' ಎಂಬುದಾಗಿ ಪ್ರಾರ್ಥಿಸ ತೊಡಗಿದನು. ಡಾಕ್ಟರನನ್ನು ತಂದು ಜೋಯಿಸನಿಗೆ ಇನಾಕ್ಯುಲೇಷನ್ ಮಾಡಿಸಿದನು. ಅವನೊಂದಿಗೆ ಬೆಳಿಗ್ಗೆ ಸಾಯಂಕಾಲ ಸಂಚಾರಕ್ಕೆ ಹೋಗುತ್ತಿದ್ದನು. ಪ್ಲೇಗು, ಸಾವು, ಇಲಿ, ಇವುಗಳ ಯೋಚನೆ ಜೋಯಿಸನ ಮನಸ್ಸಿಗೆ ಹೆಚ್ಚಾಗಿ ಹಿಡಿಯದಂತೆ ಅವನೊಂದಿಗೆ ಮಾತು ಕಥೆಯಾಡುತ್ತಾ ಸ್ವಲ್ಪ ಹೆಚ್ಚುಕಡಿಮೆ ಯಾವಾಗಲೂ ಅವನ ಜತೆಯಲ್ಲಿಯೇ ಇರತೊಡಗಿದನು.

ಆದರೆ ಜೋಯಿಸನಿಗೆ ಇದಾವುದರಿಂದಲೂ ಸಾವಿನ ಭಯ ತಪ್ಪಲಿಲ್ಲಿ. ಆಗ ಅವನಿಗೆ ನಮ್ಮೂರಿನ ಇತರರಿಗಿಂತ ತನಗೆ ಸಾವಿನ ಭಯ ಹೆಚ್ಚೆಂಬುದು ಗೊತ್ತಾಯಿತು. ಆದರೆ ಕೂಡಲೆ ಅವನಿಗೆ ಒಂದು ಧೈರ್ಯ ಬಂದಿತು. 'ಇರಲಿ ಸಾವು ಬರಲಿ ಸಿದ್ಧವಾಗಿದ್ದೇನೆ, ನನ್ನ ಸಾವಿಗೆ ಹೆದರಬೇಕಾದವನು ನಾನಲ್ಲ, ಇನ್ಷೂರೆನ್ಸ ಕಂಪೆನಿ; ಕೆಂಬೂತಯ್ಯ;' ಎಂದುಕೊಂಡನು.

ಸಾವಿಗೆ ಹೆದರಬೇಕಾಗಿಲ್ಲವೆಂಬ ಅವನ ಧೈರ್ಯವು ಅವನಿಗೆ ತನಗೆ ಹಿಂದೆ ಎಂದೂ ಅನುಭವವಾಗದಿದ್ದ ವಿಚಿತ್ರವಾದ ಮನೋದಾರ್ಢ್ಯವನ್ನೂ ಸ್ಥೈರ್ಯವನ್ನೂ ತಂದಿತು. ಸುತ್ತುಮುತ್ತು ಜನರು ಒಣಗಿದ ಮರದ ಎಲೆಗಳಂತೆ ಉದುರುತ್ತಿದ್ದರೂ ಅವನು ಮಾತ್ರ ಧೈರ್ಯವಾಗಿಯೇ

ಇದ್ದನು. ಆಗಿನಿಂದಲೇ ಅವನ ಜೀವನವು ಹೊಸದಾಗಿ ಪ್ರಾರಂಭವಾದಂತೆ ತೋರಿತು. ಯಾವ ದೃಷ್ಟಿಯಿಂದ ಅವನು ನೋಡಿದರೂ ಅವನಿಗೆ ನಿರುತ್ಸಾಹ ತೋರಲಿಲ್ಲ. ಪರೆಬಿಟ್ಟ ಹಾವಿನಂತೆ ಅವನು ಬೇಕಾದ್ದೆಲ್ಲ ಬರಲಿ ಎಂಬುದಾಗಿ ಗೆಲುವಾಗಿ ಇರತೊಡಗಿದನು. ದಿನದಿನಕ್ಕೂ ಅವನ ಲವಲವಿಕೆಯನ್ನು ನೋಡಿ ಕೆಂಬೂತಯ್ಯನ ಉತ್ಸಾಹವೂ ಹೆಚ್ಚಾಯಿತು. ಹಿಂದೆ ಇಲಿಗಳು ಬೀಳುತ್ತಿದ್ದಂತೆ ಈಗ ಮನುಷ್ಯರ ಹೆಣಗಳೇ ಬೀಳುತ್ತಿದ್ದರೂ, ಬಾಕಿಯವರೆಲ್ಲ ಮಂಕು ಕವಿದಂತೆ ನಿರ್ವೀರ್ಯರಾಗಿದ್ದರೂ ಅವನು ಮಾತ್ರ ಗೆಲುವಾಗಿಯೇ ಇದ್ದನು. ನರಸಿಂಹಾಚಾರ್ಯರು 'ಏನಯ್ಯ ಯಾವ ಟಾನಿಕ್ ತೆಗೆದುಕೊಂಡೆ. ಈಗ ಒಂದು ಹೊಸ ಹುರುಪು ನಿನಗೆ ಬರುತ್ತಿದೆಯಲ್ಲಾ' ಎಂಬುದಾಗಿ ಕೇಳಲು 'ಜೋಯಿಸನು ಏನು ಮಾಡಿದ್ದೆ ಮಾಡಿದ್ದು ಸ್ವಾಮಿ. ನನಗೆ ಯಮನ ಭಯವೇ ತಪ್ಪಿ ಹೋಯಿತು. ಈಗ ನಾನು ಇನ್ನೂ ನೂರಾರು ವರುಷ ಬದುಕಿರುವದರಲ್ಲಿ ಸಂದೇಹವಿಲ್ಲವೆಂದು ನನಗನ್ನಿಸುತ್ತಿದೆ' ಎಂದನು.

ಕೆಂಬೂತಯ್ಯನು 'ಏನು ಯಮನನ್ನೇ ಹೆದರಿಸಿತು, ನೋಡಿ ಜೋಯಿಸರನ್ನ' ಎಂಬುದಾಗಿ ಜಾಹೀರಾತು ಮಾಡುತ್ತಿದ್ದಾನೆ. ಈಗ ಇನ್ನೂ ಅನೇಕರು ನಮ್ಮೂರಲ್ಲಿ ಯಮನನ್ನು ಹೆದರಿಸಲು ಸಿದ್ಧರಾಗುತ್ತಿದ್ದಾರೆ.



# ಮುಂದಾಳುಗಳು—ಮಂದಾಳುಗಳು

ಕಾರಂತ

ಸಮಾಜವನ್ನು ಸಾಮಾನ್ಯವಾಗಿ ಎರಡು ಪಂಗಡವಾಗಿ ವಿಭಾಗಿಸಬಹುದು–ಈಗ ಒಡೆದು ಹೋದ ಲೆಕ್ಕದಿಂದಲ್ಲ; ಮನಶ್ಶಾಸ್ತ್ರರೀತಿಯಲ್ಲಿ ಒಡೆಯಬಹುದಾದ ಪ್ರಮಾಣದಿಂದ. ಇದು ಜನತೆಯಲ್ಲಿನ ಇರುವ ಮತ್ತು ಇಲ್ಲದಿರುವ ಬುದ್ಧಿಬಲವನ್ನು ಅಳೆಯಲು; ಇರುವ ಮತ್ತೆ ಇರಬಹುದಾದ ಧೈರ್ಯವನ್ನು ತೂಗಲು; ಅಲ್ಲದೆ ಇಲ್ಲದಿರುವ ಮತ್ತು ಇಲ್ಲದಿರಬಹುದಾದ ಕ್ರಿಯಾಶಕ್ತಿಯನ್ನು ಅಳೆಯಲು. ಪ್ರಾಯಶಃ ಈಗಾಗಲೆ ನನ್ನ ನಿಬಂಧ ಬಿಗುವಾಗಿ ಕಾಣಿಸತೊಡಗಿತೇ? ನೀವಿದನ್ನು ಓದಬೇಕೆಂಬ ದುರಾಗ್ರಹಕ್ಕೆ ಬೀಳದಿದ್ದರೆ ಆಗ ಇದೇ ಲೇಖವು ನಿಮಗೆ ಸರಳವೂ ಸರಸವೂ ಆಗಿ ತೋರಬಹುದು–ಇರಲಿ; ವಿಷಯಕ್ಕೆ ಬರುವ. ಈ ಎರಡು ಪಂಗಡವೆಂದರೆ ಮಂದಾಳುಗಳದು, ಇನ್ನು ಅವರಿಗೆ ಕೊಂಬು (ು) ಬಂದು ಉಂಟಾದ ಮುಂದಾಳುಗಳದು. ಈ ಎರಡು ಪದಗಳ ಅರ್ಥವನ್ನು ನಾನು ವಿವರಿಸುವ ಕಾರಣವಿಲ್ಲ. ಎಂದರೆ ಮಂದ ಆಳುಗಳಿಗೆ ಅದನ್ನು ಹೇಳಿದರೆ ತಿಳಿಯದು; ಮುಂದಾಳುಗಳಿಗೆ ಹೇಳಿದರೂ ಬೇಕಿಲ್ಲ.

ಮಂದಾಳುಗಳು ಎಲ್ಲರಿಗೂ ತಿಳಿದಿರುವಂತೆ ಬಹುಸಂಖ್ಯಾಕರು; ಮುಂದಾಳುಗಳು ಅಲ್ಪಸಂಖ್ಯಾಕರು. ಎರಡೂ ಪಂಗಡದವರು ರಾಜಕೀಯ ರಂಗದಲ್ಲಿ ತಮ್ಮ ತಮ್ಮ ಅಧಿಕಾರಕ್ಕಾಗಿ ಹೋರಾಡುತ್ತಾರೆ. ತಾವು ಬಹುಪಕ್ಷೀಯರು; ತಮಗೆ ಹಕ್ಕು ಅವಶ್ಯ ಎನ್ನುವುದು ಮೊದಲಿನ ಪಂಗಡ; 'ತಾವು ಅಲ್ಪಸಂಖ್ಯಾಕರು–ತಮಗೆ ಜೀವನದಲ್ಲಿ ಭದ್ರತೆ ಅವಶ್ಯ' ಎಂಬುದು ಇನ್ನೊಬ್ಬರ ಕೂಗು. ಈ ಎರಡು ಪಂಗಡಗಳೊಳಗಿರುವ ಅರಾಜಕತೆಯೇ 'ರಾಜನೀತಿ.'

ಮುಂದಾಳು ಎನ್ನುವವರೇ 'ಡೆಮೊಕ್ರಸಿ' ಮಂದಿರದ ಇಟ್ಟಂಗಿಗಳು; ಮುಂದಾಳುಗಳೆಂದರೆ 'ಡೆಮ-ನಾ-ಕ್ರಸಿ, ಗೊಮ್ಮಟದ ಭಟ್ಟಂಗಿಗಳು.

'ಮುಂದಾಳುಗಳು ಬುದ್ಧಿಯಿಲ್ಲದವರು; ಕರ್ತೃತ್ವಶಾಲಿಗಳಲ್ಲದವರು; ವಿದ್ಯೆಯಿಲ್ಲದವರು-ಇದೇ ರೀತಿಯಿಂದ ಹಲವು ಬಗೆಯ 'ಇಲ್ಲ' ದವರು ಇವರನ್ನು, ಇವರ ಉದ್ಧಾರಕ್ಕಾಗಿ, ಇವರಲ್ಲದವರು ಆಳಬೇಕಾದುದು ಕರ್ತವ್ಯ'-ಎಂದು ಒಂದು ಪಂಗಡ ಸಾರುತ್ತದೆ.

ಉದಾ:—ಇಂಗ್ಲೆಂಡು-ಆಫ್ರಿಕ;-ಜಪಾನು-ಚೀನಾ; ಇಟಲಿ-ಅಬಸೀನಿಯಾ ನಿವಾಸಿಗಳು.

ಚಿಕ್ಕ ಪ್ರಮಾಣದಿಂದ ಬ್ರಾಹ್ಮಣ-ಹರಿಜನ; ಅಬ್ರಾಹ್ಮಣ-ನಿರ್ಬ್ರಾಹ್ಮಣ ಇತ್ಯಾದಿ.

'ಮುಂದಾಳುಗಳು ನಮ್ಮಂತೆಯೇ ಇರುವವರು, ನಾವು ಹಿಡಿದರೆ ಅವರು ಮುಂದಾಳು; ಇಲ್ಲವಾದರೆ ಏನಿಲ್ಲ. ಅವರಿಗೆ ಅಧಿಕಾರವೆಂದರೆ ಅರ್ಥವಿಲ್ಲ. ಅವರಿಂದ ಮುಂದೆ ಖಂಡಿತವೂ ಹಾಳು; ಹಿಂದೆ ಒಳ್ಳೆಯದಿರಲಿಲ್ಲ ಎಂದು ಅವರ ವಿರೋಧಿಗಳು ಹೇಳುತ್ತಾರೆ.

ಈ ಪಕ್ಷ-ಪ್ರತಿಪಕ್ಷದವರ ಕಕ್ಷಿ ಹೇಗೂ ಇರಲಿ-ಇವರಲ್ಲಿ ಒಬ್ಬರ ಹಿತ ಇನ್ನೊಬ್ಬರ ಅಹಿತ; ಒಬ್ಬರ ಲಾಭ ಇನ್ನೊಬ್ಬರ ಹಾನಿಯೆಂದು ಧೈರ್ಯವಾಗಿ ಹೇಳಬಹುದು. ಇದು ನನ್ನ ವಾದ. ಆದರೆ ಮುಂದಾಳುಗಳ ಮಾತು ಹೀಗೆ-ನಾವು ಮುಂದಾಳುಗಳ ದಾಸರು; ಅವರ ಸೇವೆಯೇ ತಮ್ಮ ಧ್ಯೇಯ. ಅವರ ಹಿತಕ್ಕಾಗಿ ಅವರ ಜುಟ್ಟು ಹಿಡಿದು, ಮೂಗುದಾರ ಹಾಕಿ, ಅರೆಹೊಟ್ಟೆ ಕೆಡವಿಯಾದರೂ, ಈಗಿನ ಜನತೆಯನ್ನು ಸತಾಯಿಸಿಯಾದರೂ ನಾಳೆ ಹುಟ್ಟಲಿರುವ, ಹುಟ್ಟಬಹುದಾದ, ಹುಟ್ಟಲೇಬೇಕಾದ ಇವರದೇ ಸಂತತಿಯ-ಹಿತವನ್ನು ಹಾರೈಸಬೇಕಾಗಿದೆ. ರಾಜತಂತ್ರದಲ್ಲಿ ದೂರದೃಷ್ಟಿ ಮುಖ್ಯವೇ ಹೊರತು, ಇಂದಿನ ದೃಷ್ಟಿ ಅಮುಖ್ಯ ಎನ್ನುತ್ತಾರೆ. ಈ ಧ್ಯೇಯಕ್ಕಾಗಿ ಅವರು ಚಡಪಡಿಸಿ, ಅಲ್ಲಿಂದ ಬಡಬಡಿಸಿ, ಮುಂದೆ ಇಲ್ಲದ ರೀತಿಯಲ್ಲಿ ಗಡಿಬಿಡಿಸುತ್ತಾರೆ.

ಮುಂದಾಳುಗಳೋ—'ನಮಗಿಲ್ಲದ ಮಿದುಳು ನಿಮಗಿಲ್ಲ; ನಾವಿಲ್ಲದೆ ಬಲ ನಿಮಗಿಲ್ಲ. ಇಂದಿಲ್ಲದ ಸುಖ ನಾಳಿಗಿಲ್ಲ. ನಿಮ್ಮ ಜನತೆಯ ಸೇವೆ ನಮ್ಮ ಉಳಿದ ಚಂಡಿಕೆ ಶೇವೆ (Shave). ನಿಮ್ಮ ಧ್ಯೇಯ ಸಾಕಷ್ಟು ಹೇಯ '—ಹೀಗೆಂದು ತಿಳಿಯುತ್ತಾರೆ.

ಏನೂ ಇರಲಿ, ಇವರಿಬ್ಬರ ಜಗಳದಲ್ಲಿ ಎಲ್ಲಿ ನೋಡಿದರಲ್ಲಿ ವಿಜಯಿಗಳಾಗುತ್ತಿರುವವರು ಮುಂದಾಳುಗಳೇ ಹೊರತು ಮುಂದಾಳುಗಳಲ್ಲ. ಆದುದರಿಂದ ಸ್ವಾಭಾವಿಕವಾಗಿ ಪಕ್ಷವಹಿಸುವವರು ಸಾಮಾನ್ಯ ಉದಾಸೀನತೆಯಿಂದಿದ್ದು ಮುಂದೆ ಗೆದ್ದವರ ಬಾಲ ಹಿಡಿಯುತ್ತಾರೆ. ಹೀಗಾಗಿ ಈಗಿನ ಡೆಮಾಕ್ರಸಿ ನಡೆಯುವ ರೀತಿ ಡೆಮನಾಕ್ರೆಸಿಯೇ ಸರಿ.

ಈ ಸಮರವನ್ನು ಕೊನೆಗೊಳಿಸಲು ಒಂದೇ ದಾರಿ. ಮುಂದಾಳುಗಳು ಮುಂದಾಳುಗಳಾಗುವುದು. ಇಲ್ಲವೆ ಮುಂದಾಳುಗಳು ಮುಂದಾಳುಗಳಾಗುವುದು. ಇದರಿಂದ ಒಂದು ಪಂಗಡ ಅಳಿದರೂ ಸರಿಯೇ, ಇಲ್ಲವೆ ಎರಡೂ ಪಂಗಡ ಸಮಪ್ರಮಾಣವಾಗಿ ಬಂದರೂ ಸರಿಯೇ ಏನಾದರೊಂದು ಹಾದಿ ಕಂಡೀತು. ಆ ಹಿತದ ದೃಷ್ಟಿಯಿಂದ 'ಹಿಂದು ಮುಂದಾಳಾದ' ನಾನು ಕೆಲವು ಸೂಚನೆಗಳನ್ನು ಮಾಡುತ್ತೇನೆ. ಈ ಸೂಚನೆಯನ್ನು ಅನುಸರಿಸಿದಲ್ಲಿ ಯಾವ ಮುಂದಾಳುವೂ ತನ್ನ ಕೊಂಬು ತಾನೇ ಹಿಡಿದು ಮುಂದಾಳು ಆಗಬಹುದು. ಅವರು ಕೆಲಸ ಮಾಡುವ ರೀತಿಯನ್ನು ಕಂಡು ನನಗೆ ಹೊಳೆದ ಅಂಶಗಳಿವು:

ನೀವು ಮುಂದಾಳಾಗುವಿರಾ? ಮೊದಲಿಗೆ ನಿಮ್ಮ ಕಿಸೆಯಲ್ಲಿ ತತ್ಕಾಲಕ್ಕೆ ನಿಮ್ಮದೆಂದು ತಿಳಿಯಬಹುದಾದ ಹಣವೆಷ್ಟಿದೆ ಎಂದು ಎಣಿಸಿರಿ. ಇದು ಸಾಕಷ್ಟು ಇಲ್ಲದೆ ಮುಂದೆ ಬರಬೇಡಿರಿ.

ಅನಂತರ—ನಿಮ್ಮ ಸ್ವಂತ ಕೊಂಬು (ಗಂಟಲು) ಎಷ್ಟು ದೂರಕ್ಕೆ ಕೇಳಿಸುವುದೆಂದು ಒಂದು ಗುಡ್ಡದ ಮೇಲೆ ನಿಂತು ಒದರಿರಿ. ಅದು ಸಾಕಷ್ಟು ದೂರ ಕೇಳಿಸಿದರಾಯಿತು. ಇಲ್ಲವಾದರೆ ನಿಮ್ಮ ಕೊಂಬನ್ನು ತಾವು ಊದುವ ಬಾಡಿಗೆ ಕೊಂಬುಕಾರರನ್ನು ತನ್ನಿರಿ.

ಅನಂತರ ಶ್ರಮವಹಿಸಿ ಕನಿಷ್ಟ 'ವಿಷಯವಿಲ್ಲದ ವಿಷಯದ ಮೇಲೆ' ಒಂದು ತಾಸಾದರೂ ಉಪನ್ಯಾಸವೆಂಬ ಕೊಂಬನ್ನೂದಿರಿ. ಉದಾಹರಣೆಗೆ:

ವಿಷಯ—ಸದ್ಯದ ಪರಿಸ್ಥಿತಿ (ಇದು ಸದ್ಯದ್ದಾದರೂ ವ್ಯಾಪ್ತಿ ಭೂತ, ವರ್ತಮಾನ, ಭವಿಷತ್ತುಗಳಿಗೆ ಸಮಾನಾಗಿದೆ)

**ಪ್ರಥಮ ಉಪನ್ಯಾಸ**.... 'ನಾವು ಯಾವ ಆರ್ಯಮಾತೆಯ ಮಕ್ಕಳಿದ್ದೇವೆ, ನಾವು ಯಾವ ಧರ್ಮಭೂಮಿಯ ಕರ್ಮಭೂಮಿಯ ಸುಪುತ್ರರಿದ್ದೇವೆ (ಜೆಸಸೇ ಸುಪೂತ ಉಪ ಜೈ—ಎಂಬಂತೆ) ಅಂಥ ನಾವು ಕುರಿಗಳಲ್ಲ. (ಬೇಕಾದರೆ ಆಣೆ ಮಾಡಿ ಹೇಳಿರಿ) ಕಲಿಗಳು (ಶುದ್ಧ) ಸರ ಕೇಸರಿಗಳು! ಓ ನನ್ನ ನರಕೇಸರಿ ಬಂಧು ಭಗಿನಿಯರೇ—ಈ ಯಾವ ಸ್ವಾತಂತ್ರ್ಯದ ನಿಶಾನೆಯನ್ನು ನಾನು ಹಿಡಿದಿದ್ದೇನಲ್ಲ (ಅದು ನನ್ನ ಕೈಯಲ್ಲಿ ಭದ್ರವಾಗಿದೆ) ಅದರ ನೆರಳನ್ನು ನಂಬಿ ನೀವು ಸಮರಕ್ಕೆ ಮುಂದಾಗಿರಿ. ಒಂದೇ ವಿ–ಜಯ, ಇಲ್ಲವಾದರೆ ತಾಯ ಸೇವೆಯಲ್ಲಿ ಮರಣ."

**ದ್ವಿತೀಯ ಉಪನ್ಯಾಸ** (ಸಾಮಾನ್ಯ ಎರಡು ಮೂರು ತಿಂಗಳ ಬಳಿಕ ಕೊಡತಕ್ಕುದು.)

'ನಮ್ಮ ಭಾರತಾಂಬೆ ನರಳುತ್ತಿದ್ದಾಳೆ! ನನ್ನ ಕಿವಿಯೊಡೆದು ಕೇಳಿಸುತ್ತದೆ. ನಿಮ್ಮ ಕಿವಿ ಕಿವುಡೇ? ಕಿವುಡರಿಗೂ ಕೇಳಿಸಬೇಕು. ಭಾರ ತಾಂಬೆಯ ಕೇಸಃಚ್ಛೇದವಾಗಿದೆ. ಅವಳು ದಾರುಣ ದುಃಖದಲ್ಲಿ, ವೈಧವ್ಯ ದಲ್ಲಿ ಮುಳುಗಿದ್ದಾಳೆ. ಪರಕೀಯರು ಬಂದು ಅವಳ ಮಾನಹಾನಿ ಮಾಡು ತ್ತಿದ್ದಾರೆ (ಈ ಅಧಿಕಾರ ಪರಕೀಯರಿಗೇ ಯಾರು ಕೊಟ್ಟರು?) ಆದುದ ರಿಂದ ಸಂಗ್ರಾಮ ಸಾಗಲೇಬೇಕು. ನಿಮ್ಮ ನಿಮ್ಮ ಮಕ್ಕಳುಮರಿ, ಮನೆ ಮಾರು ಕಂಡು ಕುಳಿತಿರುವ ಸಮಯ ಇದಲ್ಲ. ಮುಂದಾಗಿರಿ.

'ಯಾರ ಕೈಯಲ್ಲಿ ಬಿಲ್ಲೆ ಇದೆ – ಒಗೆಯಿರಿ (ಇಲ್ಲ)—ಯಾರ ಕೈಯಲ್ಲ ಚಿನ್ನದ ಲಾಬಿದೆ, ರಿಸ್ಟ ವಾಚಿದೆ, ಇಲ್ಲಿ ಒಗೆಯಿರಿ. ಬಡವರಿಗೆ ಈ ಶೃಂಗಾರಗಳೇಕೆ? ಅವೆಲ್ಲ ಸ್ವಾತಂತ್ರ್ಯ ಸಂಗ್ರಾಮಕ್ಕೆ ಬೇಕಾಗಿವೆ.'

**ತೃತೀಯ ಉಪನ್ಯಾಸ** (ಎರಡನೆಯದು ಮರವೆಯಾಗುವುದರಲ್ಲಿದೆ ಎಂದು ತಿಳಿದಾಗ)

'ನನ್ನ ದೇಶಾಭಿಮಾನಿಗಳೇ, ನಿಮ್ಮ ವೋಟಿನ ಆಶೀರ್ವಾದದ ಬಲದಿಂದ ಇಂದು ಕಾಯಿದೇಮಂಡಲವನ್ನು ಕಸಿದು ಬ್ರಿಟಿಷ್ ಸಿಂಹದ ದಾಡೆಗಳನ್ನು (?) ಭೇದಿಸಬೇಕಾಗಿದೆ. ನನ್ನ ಬೆಂಬಲಕ್ಕೆ ಒಂದಾಗಿರಿ. ನನ್ನ–ನಮ್ಮ ಸೇವೆಯನ್ನು ಸ್ವೀಕರಿಸಿರಿ. ನೀವು ಆಜ್ಞಾಪಿಸಿದರೆ ಅಂಥ ಕ್ಷುಲ್ಲಕ 'ಮಂದ್ರಿ' ಪದವಿಯನ್ನು ಸಹ ನಿಮ್ಮ ಮನೆಯ ಭಂಗಿಯೆಂದು ತಿಳಿದು ಮಾಡುವೆನು. 'ರಾಟಿ' ಗುರುತಿಗೇ ನಿಮ್ಮ ವೋಟನ್ನು ಸುರಿಯಿರಿ.

**ನಾಲ್ಕನೇ ಉಪನ್ಯಾಸ** (ಮೂರನೆಯದರ ಕೆಲಸವಾದ ಬಳಿಕ)

'ಗೆಳೆಯರೇ–ಏನಿದು, ಏನಿದು ಗದ್ದಲ? ಏನಿದು ಅವಿವೇಕ? ಎಲ್ಲರೂ ಅದು ಬೇಕು–ಇದು ಬೇಕು ಎಂದರೆ ಹೇಗೆ ನಡೆದೀತು? ಎಲ್ಲರಿಗೂ ತೆರಿಗೆ ಕಡಿಮೆ ಮಾಡುವ ಬಗೆ ಹೇಗೆ? ದೀರ್ಘ ಯೋಚನೆ ಮಾಡಿರಿ. ಸರಕಾರವಿಲ್ಲದೆ ನೀವಿಲ್ಲ; ನೀವಿಲ್ಲದೆ ತೆರಿಗೆಯಿಲ್ಲ. ತುಸು ತಾಳಿ! ವಿಶ್ವಾಸ, ಸಹನೆ ಇದು ಮುಖ್ಯ. ಒಂದೆರಡು ದಿನದ ಸುಧಾರಣೆಗಳೇನು ಇವು? ನೂರಾರು ವರ್ಷ ಬೇಕು. ಕೆಲವು ಕಾಲ ತಾಳ್ಮೆಯಿಂದ ಕಾದಿರಿ.

**ಐದನೆಯದು** (ಉಪನ್ಯಾಸವಲ್ಲ–ಪ್ರೆಸ್ ಕಮ್ಯುನಿಕ್ ರೂಪದಿಂದ, ಅಥವಾ ಸೆಗಣಿ ಎಸೆಯುವ ಮಂದಾಳುಗಳಿಲ್ಲದಿರುವ ಬ್ರಾಡ್ ಕಾಸ್ಟ ಹೌಸಿನಿಂದ)

'ಜನಸಮುದಾಯಕ್ಕೆ ವಿದ್ಯೆಯಿಲ್ಲ. ತನಗೇನು ಹಿತವೆಂದು ಅದಕ್ಕೆ ತಿಳಿಯದು. ನಾವು ಅದರ ಹಿತಕ್ಕಾಗಿ ಅಹರ್ನಿಶಿ ಚಿಂತಿಸುತ್ತಿರುವಷ್ಟು ದಿನ ಅದು, ಇದು ಬೇಕು; ಅದು ಹೀಗಾಗಬೇಕೆಂದು–ಹೇಳುವುದರಲ್ಲೂ ಟೀಕಿಸುವುದರಲ್ಲೂ ಅರ್ಥವಿಲ್ಲ. ರಾಜನೀತಿಯು ವಿಚಕ್ಷಣರ ಪಾಲಿನ ಕೆಲಸ. ಜನಸಾಮಾನ್ಯರಿಗೆ ಏನು ತಿಳಿದೀತು? ಅಲ್ಲದೆ–ಇಂದು ಕೈಕೊಂಡಂಥ ಆರ್ಥಿಕ ಸುಧಾರಣೆಯು ಫಲಿಸಿದರೆ, ಅಲ್ಲಿಯ ತನಕ ನಾನಿದ್ದರೆ, ನೀವು ಮುಖ್ಯಸಚಿವನಾಗಿ ನನ್ನನ್ನಾರಿಸಿದರೆ– ಬರಿಯ ಒಂದು

ನೂರು ವರ್ಷದಲ್ಲಿ—ಜನಾಂಗದ ಜೀವನದಲ್ಲಿ ೧೦೦ ವರ್ಷ ಎಂದರೆ ಬರಿಯ ಒಂದು ದಿವಸ (ಬ್ರಹ್ಮನಿಗೂ ಹಾಗೇ ಅಂತೆ) ಆಗ ಪ್ರತಿಯೊಬ್ಬ ಭಾರತೀಯನ ಮನೆಯ ಗೋಡೆಯೂ ಚಿನ್ನದ ಇಟ್ಟಂಗಿಯಿಂದ ರಚಿತವಾಗುವಂಥ ಹಂಚು ನಡೆಸಿದ್ದೇನೆ (ಹಂಚು—ಇಟ್ಟಿಗೆ ಒಂದೇ ಪದಾರ್ಥದಿಂದ ಹುಟ್ಟುವುದು)

ಈಗ ಉಪನ್ಯಾಸದ ವಿಷಯ ಹೇಳಿದಂತಾಯಿತು. ಇಷ್ಟನ್ನು ನೀವು ಮಾಡಬೇಕೆಂದು ನಿಮಗನಿಸಿದರೆ ನೀವಾಗಲೇ $\frac{1}{5}$ ನೇ ಮುಂದಾಳು ಆದಿರೆಂದೂ $\frac{4}{5}$ ಮುಂದಾಳುತನ ಇನ್ನು ಉಳಿದಿದೆಂದೂ ತಿಳಿಯಿರಿ.

ಆ ಬಳಿಕ ನಿಮ್ಮ ಧನ, ಜನಬಲದಿಂದ ಮರೆಯದೆ ಮಾಡಬೇಕಾದ ಕೆಲಸಗಳಿವು :

ನೀವು ಒಂಟಿಯಾಗಿ ಜೈಲಿಗೆ ಹೋದರೂ 'ನೂರಾರು ಜನರು ಇವರನ್ನು ಜೈಲು ಬಾಗಿಲ ತನಕ ಬೀಳ್ಕೊಟ್ಟರು' ಎಂದು ಪತ್ರಿಕೆಯಲ್ಲಿ ಹಾಕಿಸಿರಿ.

ದೇ. ಭ. ಇಂಥವರು ಇಂಥ ದಿನ ಜೇಲಿನಿಂದ ಬಿಡುಗಡೆಯಾಗಿ ಮೆರವಣಿಗೆಯಿಂದ ಮರಳಿ ಬಂದರೆಂದು ಊಹಿಸಿರಿ.

ಮಾನ್ಯ ನೀವು ಮುಖ್ಯ ಮಂತ್ರಿಗಳೋ, ಮಂತ್ರಿಗಳೋ ಆದರೆ ನಿಮ್ಮ ಪತ್ರಿಕೆಗಳು ಹೀಗೆ ಸಾರಲಿ—

ದೇ. ಭ. ಮಾನ್ಯ ಇಂಥವರು ಇಂಥಲ್ಲಿ ನಿಂತರು; ಇಂಥಲ್ಲಿ ಕುಳಿತರು; ಇಂಥಲ್ಲಿ ಉಪಹಾರ ಮಾಡಿದರು; ಇಂಥದನ್ನು ಮುಟ್ಟಿದರು. . .

ದೇ. ಭ. ಮಾನ್ಯ ಇಂಥವರು ಇಂಥ ವಿಷಯದ ಮೇಲೆ (ಎಂಥದೂ) ಇಂಥಲ್ಲಿ (ಎಲ್ಲೂ) ಇಂಥ (ತಿಳಿಯದ) ಅಭಿಪ್ರಾಯ ಸೂಚಿಸಿದರು.

ಇಂಥ ಪರಿಷತ್ತು ತೆರೆದರು; ಇಂಥದನ್ನು ಉದ್ಘಾಟಿಸಿದರು; ಇಂಥದನ್ನು ಹರಸಿದರು.

ಹೀಗೆ ನಿಮ್ಮ ಪ್ರಾಂತದ ವೃತ್ತಪತ್ರಿಕೆಗಳೆಲ್ಲ ಸಾರುವಂತೆ ನಿಮ್ಮ ಪತ್ರಿಕೆಯನ್ನು ಇಟ್ಟುಕೊಳ್ಳಿರಿ; ಇಲ್ಲವಾದರೆ ಬೇರೆಯವನ್ನು ಕೊಂಡು ಕೊಳ್ಳಿರಿ.

ಈ ಧ್ಯೇಯಗಳನ್ನು ಮುಟ್ಟಲು ಬೇಕಾದ ರೀತಿಯಲ್ಲಿ ವರ್ತಿಸಿ ಧ್ಯೇಯಸಾಧನೆಯಾದ ಬಳಿಕ ಸಾಕಷ್ಟು ಸತ್ಯ ಅಹಿಂಸೆಗಳನ್ನು ಅಭಿನಂದಿಸಿರಿ.

ನನ್ನ ಅಮೂಲ್ಯ ಸೂಚನೆಗಳು ಸಾಕಷ್ಟು ಸುಲಭವಾಗಿರುವುದರಿಂದ ಬುದ್ಧಿ, ಉತ್ಸಾಹ, ಹುರುಪು ಇರುವ ಯಾವನೂ ಅವನ್ನು ಮಾಡಬಹುದು. ಅದರಿಂದ ಒಂದು ದಿವಸ ದೇಶವೆಲ್ಲ ಮುಂದಾಳುಗಳಿಂದ ತುಂಬಿ ಮಂದಾಳುಗಳೇ ಇಲ್ಲವಾಗಬಹುದು. ಇಲ್ಲವೆ ಮಂದಾಳುಗಳ ಕಾಟ ತಪ್ಪಲೂ ಬಹುದು.



# ಮಂಕರು—ಬೆಪ್ಪರು ~ ~ ರಾ. ಶಿ.

ನಾನೊಬ್ಬ ಮಂಕು. ನಾಚಿಕೆ ಇಲ್ಲದೇ ಹೇಳಿಕೊಳ್ಳುತ್ತೇನೆ. ಏಕೆಂದರೆ ಎಷ್ಟೋ ಜನರಿಗೆ ಅವರುಗಳು ಮಂಕು ಎಂಬುದೂ ತಿಳಿಯದು. ಅವರಿಗಿಂತ ನಾನೆಷ್ಟೋ ಮೇಲು. ಅದು ಯಾಕಪ್ಪಾ ಈ ತೀರ್ಮಾನಕ್ಕೆ ಬಂದೆ? ಎಂದು ನೀವು ಕೇಳಬಹುದು. ನನಗಾದುದನ್ನೆಲ್ಲಾ ಹೇಳುತ್ತೇನೆ ಸಾವಧಾನದಿಂದ ಕೇಳಿ. ಆಮೇಲೆ ನೀವೇ ತೀರ್ಮಾನಿಸಿ.

ಹುಟ್ಟುವಾಗಲೇ ಮಂಕುಮಂಕಾಗಿ ಬಡ ತಾಯಿ-ತಂದೆಗಳನ್ನು ಆರಿಸಿಕೊಂಡೆ. ಆಕಾಶದಲ್ಲಿ ಜೀವವಾಗಿ ಹಾರಾಡುತ್ತಿದ್ದಾಗಲೇ ಸ್ವಲ್ಪ ಹಣ ಆರೋಗ್ಯ ಇರುವ ಹುಡುಗ ತಾಯ್ತಂದೆಗಳನ್ನು ಹುಡುಕಿಕೊಳ್ಳಬಾರದೇ! ಮುದುಕನನ್ನು ತಂದೆಯಾಗಿಯೂ, ಹನ್ನೆರಡನೇ ಮಗುವಾಗಿಯೂ ಏಳನೇ ತಿಂಗಳಲ್ಲೇ ಅವಸರದಲ್ಲಿ ಹುಟ್ಟಿ ಬದುಕಿಕೊಂಡೆ. ಆ ಮೇಲೆ ಗೊತ್ತಲ್ಲಾ, ಅಣ್ಣಂದಿರ ಹಳೇ ಅಂಗಿ ಹಳೇ ಪುಸ್ತಕ ಇತ್ಯಾದಿಗಳಲ್ಲೇ ಕಾಲ ಹಾಕುತ್ತಿದ್ದೆ.

ಒಂದು ದಿನ ನೋಡಿ-ನನಗಾಗ ಹನ್ನೆರಡು ವರ್ಷ ವಯಸ್ಸು-ನಾನೂ ನನ್ನ ಸ್ನೇಹಿತ ರಂಗೂ ಇಬ್ಬರೂ ಶಾಲೆಗೆ ಹೋಗಿ ಬರುತ್ತಿದ್ದೆವು. ದಾರಿಯಲ್ಲಿ ರಾಮರಾಯರ ಮನೆ. ಅವರ ಮನೆಯಲ್ಲಿ ದೋರೆ ಸೀಬೇ ಕಾಯಿಗಳಿಂದ ಜಗ್ಗುತ್ತಿದ್ದ ಸೀಬೇ ಮರ. ರಂಗ ಅದನ್ನು ನೋಡಿದ, ನನ್ನನ್ನು ನೋಡಿದ. ಅವನನ್ನು ನಾನು ನೋಡಿದೆ. ಮರವನ್ನು ನೋಡಿದೆ. ಇಬ್ಬರ ಬಾಯಲ್ಲೂ ನೀರು ಊರಿತು. ಅವನ ಕಾಲುಗಳು ಮರವನ್ನು ಹತ್ತಿದುವು. ನನ್ನ ಕೈಗಳು ಹಣ್ಣನ್ನಾತುಕೊಳ್ಳಲು ಸಿದ್ಧವಾದುವು. ನಾಲ್ಕಾರು ಹಣ್ಣುಗಳನ್ನು ಎಸೆದ. ಆ ವೇಳೆಗೆ ರಸ್ತೆಯಲ್ಲಿ ರಂಗನ ಅಪ್ಪ ಬರುವುದನ್ನು ಕಂಡೆ. ರಂಗನಿಗೆ ಪಿಸುಮಾತಿನಲ್ಲಿ ಗಟ್ಟಿಯಾಗಿ ಹೇಳಿ ಓಡಿದೆ.

ರಂಗ ಮರದಲ್ಲೇ ಔತುಕೊಂಡ. ನಾನು ಮೊದಲು ಸಿಕ್ಕಿದ ಸಂದಿಯಲ್ಲಿ ತಿರುಗಿದೆ. ಎದುರಿಗೆ ಸಿಕ್ಕಿದ ನಮ್ಮಪ್ಪ. ನೋಡಿದ ನಾನೋಡಿದ್ದನ್ನು, ಕೈಯಲ್ಲಿ ಹಣ್ಣಿದ್ದುದನ್ನೂ. ಉತ್ತರ: ಬಲಗಡೆ ದವಡೆಯಲ್ಲಿ ಮೂರು ದಿನ ಅನ್ನ ಕೂಡ ಅಗಿಯಲಾಗಲಿಲ್ಲ. ನಾಲ್ಕನೇ ದಿನ ರಂಗ ನನ್ನ ಹತ್ತಿರ ಬಂದು 'ನೋಡೋ ಬಕ್ರಾ ನೀನು ಓಡಿ ಹೋದೆಯಲ್ಲಾ ಆಗ ನಾನು ಅಲ್ಲೇ ಔತುಕೊಂಡೆ. ನಮ್ಮಪ್ಪ ಮುಂದೆ ಹೋಗುತ್ತಲೂ ಇಳಿದು ಬಂದೆ. ನಮ್ಮಪ್ಪ ನಿನ್ನ ,ನಿಮ್ಮಪ್ಪ ಹೊಡೆದಿದ್ದನ್ನು ನೋಡಿದರಂತೆ. ನಂತರ ನಾನು ಅವರಿಗೆ ಸಿಕ್ಕಿದೆ. ಅವರು ನನ್ನ ಬೆನ್ನು ತಟ್ಟಿ 'ನಿನ್ನ ಸ್ನೇಹಿತನ ಹಾಗೆ ಹಣ್ಣು ಕದಿಯಬೇಡ. ನೀನು ಒಳ್ಳೆಯವನಾದ್ದರಿಂದ ನಿನಗೆ ಹಣ್ಣು ತೆಗೆದುಕೊಡುತ್ತೇನೆ ಎಂದು ನಾಲ್ಕು ಹಣ್ಣು ಕೊಂಡುಕೊಟ್ಟರು' ಎಂದು ಹೇಳಿದ. ಹೊಟ್ಟೆಯೆಲ್ಲಾ ಉರಿದುಹೋಯ್ತು. ಗಾದೆ ಹೇಳಿದ ಹಾಗೆ—'ಸಿಪ್ಪೆ ತಿಂದವನು ಸಿಕ್ಕಿ ಹಾಕಿಕೊಂಡ, ಹಣ್ಣು ತಿಂದವನು ನಿಂತುಕೊಂಡ.'

ಹಾಗೇ ಬೆಳೆಯುತ್ತಾ ಬಂದೆ. ಒಂದೊಂದು ತರಗತಿಯನ್ನೂ ಎರಡು ಮೂರು ವರ್ಷಗಳಲ್ಲೇ ಕಳೆಯುತ್ತಾ ಬಂದೆ. ಕಡೆಗೆ ಬಿ. ಎ. ಕ್ಲಾಸಿಗೂ ಬಂದು ಮುಟ್ಟಿದೆ. ನಮ್ಮಪ್ಪ ಆಗ ನನಗೆ ಮದುವೆ ಮಾಡಬೇಕೆಂದು ಅಣಿ ಮಾಡಲಾರಂಭಿಸಿದರು. ಬೇಡವೆಂದು ಅಂಗಲಾಚಿ ಬೇಡಿಕೊಂಡೆ. ಸಾರ್ಥಕವಾಗಲಿಲ್ಲ. ಕಡೆಗೆ ಈ ಸಾರಿ ಪಾಸಾಗದೆ ಹೋದರೆ ಮದುವೆ ಮುಂದಕ್ಕೆ ನೂಗೋಣ ಎಂದು ಹೇಳಿದರು. ನನಗೆ ಹಾಲುಂಡಂತಾಯಿತು. ಶಾಲೆಯ ತರಗತಿಯನ್ನೇ ಎಡವುವ ನನಗೆ ಕಟ್ಟುವ ಪರೀಕ್ಷೆಯಲ್ಲಿ ಕೇಳಬೇಕೆ? ತಿರುಪತಿ ದೇವರೇ ಬಂದು ನಿಂತುಕೊಂಡರೆ ಪಾಸಾಗಬೇಕು! ಸುಖವಾಗಿದ್ದೆ. ಪರೀಕ್ಷೆಯೂ ಬಂತು. ಧೈರ್ಯವಾಗಿ ಹೋದೆ. ನನ್ನ ದುರದೃಷ್ಟ ನೋಡಿ, ತಿರುಪತಿ ದೇವರೇ ಪರೀಕ್ಷಕನಾಗಿ ಬಂದಿದ್ದ. ಅವನು ನಮ್ಮ ತಂದೆಯ ಸ್ನೇಹಿತನಂತೆ. ಇನ್ನೇನು ಪಾಸು ಆಗೇಬಿಟ್ಟಿತು. ಇನ್ನು ನಮ್ಮಪ್ಪ ಬಿಡುವನೇ. ಮದುವೆಯೂ ಆಗಿಹೋಯಿತು. ಅಪಾಯಗಳು ಸಂಭವಿಸುವಾಗಲೆಲ್ಲಾ ಹೀಗೆ ಒಟ್ಟೊಟ್ಟಾಗೇ ಆಗುವುವು. 'ವಿನಾಶಕಾಲೇ ವಿವಾಹ ಪೂರ್ತಿಃ'—ಇತ್ಯಮರಃ

'ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೆ ?' ಎಂದು ಹಿರಿಯರು ಹೇಳವುದುಂಟು. ಭಾರತದಲ್ಲಿ ಇದು ಬಹುಮಟ್ಟಿಗೂ ಸತ್ಯ. ನನ್ನ ಹುಲ್ಲು ಕಂಟ್ರೋಲರ್‍ಸ್ ಆಫೀಸಿನಲ್ಲಿ ಬೆಳೆಯುತ್ತಿತ್ತು. ಅಲ್ಲೇ ನೌಕರಿಗೆ,—ನೌಕರಿ ಏನು ಬಂತು—ಚಾಕರಿಗೆ ಸೇರಿಕೊಂಡೆ. ಒಂದಿಷ್ಟು ತುಂಬೆಸೊಪ್ಪು, ಸ್ವಲ್ಪ ಅಂಬಲಿ, ಸಂಪಾದಿಸಿಕೊಂಡು ನಾನೂ ನನ್ನ ಹೆಂಡತಿ, ಮಕ್ಕಳೂ ಎಲ್ಲರೂ ಜೀವನರಥವನ್ನು ತಿರುಗುಟ್ಟಿಸುತ್ತಾ ನಡೆಸುತ್ತಿದ್ದೆವು. ಸಂಸಾರದ ಕಷ್ಟಗಳೇನೊ ಎಲ್ಲರಿಗೂ ಬರುವಂತೆ ನನಗೂ ಬರುತ್ತಿದ್ದುವು. ಆದರೆ ನಮ್ಮನೆ ಮಕ್ಕಳಿಗೆ ಮನುಷ್ಯರಿಗೆ ಬರುವ ಖಾಯಿಲೆಗಳು ಬರಬಾರದೇ ? ನಾಯಿ ಕೆಮ್ಮು, ಹಕ್ಕಿರೋಗ, ಜಂತುಹುಳುಗಳು, ಕೊಕ್ಕರೆಕಾಲು, ಹುಲಿ ಹುಣ್ಣು—ಖಾಸ್ ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೇಲೇನೆ. ಮನೆ ಖರ್ಚಿನ ಜತೆಗೆ ಈ ವೈದ್ಯನ ಸುಂಕ ಬೇರೆ. ಅಂತೂ ಇಂತೂ ಸಾಲದ ಹೊರೆ ತಪ್ಪದೆ ಕುಂತಿಮಕ್ಕಳ ಹಾಗೆ ಸಂಸಾರ ಮಾಡುತ್ತಿದ್ದೆ.

ಒಂದು ದಿನ. ಮಟಮಟ ಮಧ್ಯಾಹ್ನ. ಮೂರು ಗಂಟೆಗೆ ಕಛೇರಿಯಲ್ಲಿ ತೂಕಡಿಸುತ್ತಿದ್ದುದನ್ನು ಬಿಟ್ಟು ಕಾಫಿಗಾಗಿ ಹೊರಗಡೆ ಬಂದೆ. ಆಗ ಪರಿಚಯಸ್ಥನೊಬ್ಬ ಸಿಕ್ಕಿದ. 'ಓಹೋ ರಾಯರೇ ನಿಮ್ಮನ್ನು ನೋಡಲಿಕ್ಕೇ ಬರುತ್ತಿದ್ದೆ. ಬನ್ನಿ, ಕಾಫಿ ಕುಡಿದು ಬರೋಣ' ಎಂದು ಆಹ್ವಾನಿಸಿದ. ಈ ಕ್ಷಾಮಕಾಲದಲ್ಲಿ ಕಾಫಿಗೆ ಹೋಗುವಾಗ ಸ್ನೇಹಿತರಾರಾದರೂ ಕಾಣಿಸಿಕೊಂಡರೆ ಪಕ್ಕದ ಸಂದಿಗೆ ತಿರುಗಿ ಬೀಳುವುದು ವಾಡಿಕೆ. ಹೀಗಿರುವಾಗ ಇವನೇ ಮೇಲೆ ಬಿದ್ದು ಬಂದು ಕರೆದರೆ 'ಇದರೊಳಗೇನೊ ಇದೆ ಮರ್ಮ' ಎಂದುಕೊಂಡೆ. ಮರ್ಮ ಕಂಡುಹಿಡಿಯೋಣ ಎಂದು ಅವನೊಡನೆ ಹೊರಟೆ. ಹೊಟೇಲಿಗೆ ಹೋಗಿ ತಿಂಡಿ ತಿಂದು, ಕಾಫಿ ಕುಡಿದು, ಎಲಡಿಕೆ ಜಗಿದು, ಸೀಗರೇಟನ್ನು ಎಳೆಯುತ್ತಾ ಕುಳಿತಾಗ ಮೆತ್ತಗೆ 'ಮರ್ಮ' ಹೊರಗೆ ಬಂತು. ಅವನು ಈಗ ವಿಮಾ ಕಾರ್ಯಿಕನಾಗಿದ್ದನಂತೆ. ನನ್ನ ಮಿಗಿತದ ಹಣಕ್ಕೆ ಒಳ್ಳೆ ದಾರಿ ತೋರಲು ಬಂದಿದ್ದನಂತೆ. ನನ್ನ ಹೆಂಡಿರು—ಮಕ್ಕಳ ಒಳಿತಕ್ಕಾಗಿ ನನ್ನನ್ನು ವಿಮೆ ಮಾಡಿಸಲು ಬಂದ ದೇವದೂತನಂತೆ. ಬಿಕ್ಕಿ ಬಿಕ್ಕಿ ನಗಲಾರಂಭಿಸಿದೆ. ನಗುವು ಸ್ಥಿಮಿತಕ್ಕೆ

ಬಂದ ಮೇಲೆ, ಕರುವಿಗೆ ಹಸುವು ಹೇಳುವಂತೆ, ಅವನ ಮೈದಡವಿ ಹೇಳಿದೆ 'ನೋಡಯ್ಯಾ ನಾನೇ ಮಂಕು ಎಂದಿದ್ದರೆ ನನ್ನನ್ನು ನಿಮಗೆ ಕೇಳಲು ಬಂದಿದ್ದೀಯಲ್ಲಾ, ನಿನಗಿಂತ ಬೆಪ್ಪರುಂಟೆ? ನನ್ನ ಹೆಂಡಿರ ಮಕ್ಕಳ ಒಳಿತಕ್ಕಾಗಿ ಎನ್ನುತ್ತೀಯಲ್ಲಾ. ಅವರುಗಳಿಂದಲೇ ನಾನು ಹೀಗೆ ಕುರಿಯಂತಾಗಿರುವುದು. ಆ ಶತ್ರು ಸಮೂಹವಿಲ್ಲದಿದ್ದರೆ ರಾಜಕುಮಾರನಂತೆ ಷಹರನೆಲ್ಲಾ ರಂಗು ಏರಿಸುತ್ತಿದ್ದೆ.'

ಅವನು ಮೂಗಿನ ಮೇಲೆ ಬೆಟ್ಟಿಟ್ಟುಕೊಂಡು ಅಳುಮುಖ ಮಾಡಿಕೊಂಡು ಹೇಳಲಾರಂಭಿಸಿದ. 'ನೋಡ್ರಿ ರಾಯರೇ, ಆರು ತಿಂಗಳಿಂದ ಇದಕ್ಕಾಗಿ ಹುಳುವಿನಂತೆ ಒದ್ದಾಡುತ್ತಿದ್ದೇನೆ. ನಾಯಿಯಂತೆ ಅಲೆಯುತ್ತಿದ್ದೇನೆ. ಯಾರೋ ಹೇಳಿದರು, ಏನಾ ಕಾರ್ಯಕ್ಕೆ ಬಂಡವಾಳ ಬೇಕಿಲ್ಲೆಂದು. ಸರಿ ನಾನು ಪ್ರಾರಂಭಿಸಿದೆ. ಕಾಫಿ ತಿಂಡಿ ಖರ್ಚೇ ೫೦ ರೂಪಾಯಿಗಳಿಗಿಂತ ಹೆಚ್ಚಾಗಿ ವ್ಯಯವಾಗಿಬಿಟ್ಟಿದೆ. ಇನ್ನೂ ಒಂದು ಬಲಿಯೂ ಸಿಕ್ಕಿಲ್ಲ'

ಅವನನ್ನು ನೋಡಿ ನನ್ನ ಹೃದಯವು ಬಿಚ್ಚಿಹೋಯಿತು. ಯೋಚಿಸಲಾರಂಭಿಸಿದೆ. ಒಬ್ಬ ಪ್ರಾಣಿ ಎಷ್ಟೋ ವಿನಯದಿಂದ ಎದುರುಗೊಂಡು ಕಾಸು ಕಳೆದುಕೊಂಡು ಹಸನ್ಮುಖದಿಂದ ಕಾರ್ಯೋನ್ಮುಖನಾಗುತ್ತಾನೆ. ಬಳೆ ತೊಟ್ಟುಕೊಂಡು ಸೆರಗು ಹಾರಿಸುವುದೊಂದು ಬಾಕಿ. ಹಾಗಾದರೂ ಯಾರೂ ಸಹಾಯ ಮಾಡುವುದಿಲ್ಲ. ನನಗಾದರೊ ಸಹಾಯ ಮಾಡಲು ಚೈತನ್ಯವಿಲ್ಲ. ಇರಲಿ. ನಾವಿಬ್ಬರೂ ಸೇರಿ ಕೆಲಸ ಮಾಡಿದರೆ ಹೆಚ್ಚು ಫಲ ಒದಗಬಹುದು. ಜನಕ್ಕೆ ಜನ ಸಹಾಯ 'ಸಂಘೇ ಶಕ್ತಿಃ ಕಲೌ ಯುಗೇ'. ಹೀಗೆ ಯೋಚಿಸಿ ಅವನಿಗೆ ಹೇಳಿದೆ. 'ನೋಡಯ್ಯ, ನಾವಿಬ್ಬರೂ ಸೇರಿಕೊಳ್ಳೋಣ. ನನ್ನ ಹಾಗಿರುವ ಮಂಕರನ್ನೆಲ್ಲಾ ನಾನು ಒಟ್ಟುಗೂಡಿಸುತ್ತೇನೆ. ನೀನು ಬೆಪ್ಪರನ್ನೆಲ್ಲಾ ಒಟ್ಟುಗೂಡಿಸು. ಎಲ್ಲರೂ ಒಮ್ಮತದಿಂದ ಕೆಲಸ ಮಾಡೋಣ. ನಮ್ಮವರು ಬೇಕಾದ ಹಾಗೆ ಇದ್ದಾರೆ. ನಾವೆಲ್ಲರೂ ಸೇರಿದರೆ ಒಳ್ಳೆ ಬಲಯುತ ಸಂಘವಾಗುವುದರಲ್ಲಿ

ಸಂದೇಹವಿಲ್ಲ. ಆಗ ಸರಕಾರಗಳೂ ನಮಗೆ ಮನ್ನಣೆ ಕೊಡಬೇಕಾಗುತ್ತದೆ. ರಾಜಾಧಿರಾಜರು ನಮ್ಮ ಸಲಹೆ ಕೇಳಿ, ನಂತರ್ರ ರಾಜಕಾರ್ಯಗಳನ್ನು ಮಾಡಬೇಕಾಗುತ್ತದೆ. ಪೌರಸಭೆ, ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕ ಸಭೆ ಕೊನೆಗೆ ಮಂತ್ರಿಮಂಡಳಗಳಲ್ಲಿ ಕೂಡ ನಮ್ಮವರಿಗೆ ಪ್ರತ್ಯೇಕ ಸ್ಥಳಗಳು ದೊರೆಯಲೇ ಬೇಕಾಗುತ್ತದೆ. ಹಾಗೆ ನಾವುಗಳು ಆ ಸಭೆ ಮಂಡಳ ಸಂಸ್ಥೆಗಳಲ್ಲಿ ಸೇರಿ ನಮ್ಮವರ ಏಳಿಗೆಗಾಗಿ ದುಡಿಯೋಣ'

ಬೆಪ್ಪನು ಬೆಪ್ಪಾಗಿ ಹೋದ. ಸ್ವಲ್ಪ ಹೊತ್ತು ಉಸಿರು ಕೂಡ ಆಡಲಿಲ್ಲ. ಮುಖವೆಲ್ಲಾ ಹಿಟ್ಲರನ ಮುಖವಾಗಿಹೋಗಿತ್ತು. ಆದರೆ ಒಮ್ಮೊಂದೊಮ್ಮೆ ಸಂಶಯ ರೇಖೆಗಳು ಅವನ ಮುಖದಲ್ಲಿ ತಲೆದೋರಿದುವು. ಮೆತ್ತನೆ ನನ್ನನ್ನು ಪಿಸುಮಾತಿನಲ್ಲಿ ಕೇಳಿದ. 'ಅಲ್ರೀ, ನಮ್ಮವರೆಷ್ಟೋ ಜನರು ಆಗಲೇ ಅಲ್ಲೆಲ್ಲಾ ಚುನಾಯಿತರಾಗಿ ಕೆಲಸ ಮಾಡುತ್ತಿದ್ದಾರಲ್ಲಾ. ನಾವೇಕೆ ಈಗ ಕಷ್ಟಪಡಬೇಕು?'

ಹೌದು ಇದನ್ನು ನಾನು ಯೋಚಿಸೇ ಇರಲಿಲ್ಲ. ಪೌರಸಭೆಯಿಂದ ಮಂತ್ರಿಮಂಡಳದ ವರೆಗೆ ಎಲ್ಲೆಲ್ಲೂ ನಮ್ಮವರೇ. ಇನ್ನು ನಾನೇಕೆ ದುಡಿಯಬೇಕು? ಯಾರಿಗಾಗಿ ದುಡಿಯಬೇಕು? ಮರುಮಾತಿಲ್ಲದೆ ಸಿಂಬಿಯನ್ನು ತಲೆಗೇರಿಸಿ ನನ್ನ ಚಾಕರಿ ದೊಡ್ಡಿಗೆ ನಾನು ಹೋದೆ. ಬೆಪ್ಪನು ಬೇಟೆಯಾಡಲು ಬೇರೆ ದಾರಿ ಹಿಡಿದು ಹೋದ.



# ಬರೆಹಗಾರನ ಬಜೆಟ್ (Budget) ಉ — ಶ್ರೀರಂಗ

ಅಥವಾ

# ಬಂದದ್ದು ಬರೆದಷ್ಟು, ತಿಂದದ್ದು ತಿರಿದಷ್ಟು

ಫೆಬ್ರುವರಿ–ಮಾರ್ಚ ತಿಂಗಳುಗಳ ವೈಶಿಷ್ಟ್ಯವೆಂದರೆ ಇಡಿಯ ಹಿಂದುಸ್ತಾನದ ಅನೇಕ ಸರಕಾರಗಳು ತಮ್ಮ ಆಡಳಿತದ ಆಯವ್ಯಯದ ಬರುವ ವರ್ಷದ ಅಂದಾಜುಪತ್ರಿಕೆಯನ್ನು ಶಾಸನಸಭೆಗಳಲ್ಲಿ ಚರ್ಚೆ ಗಿಡುವುದು. ಇದು ಎಲ್ಲರಿಗೂ ಗೊತ್ತಿದ್ದ ಮಾತು. ಆದರೆ ಅದೇ ಸಂದರ್ಭ ದಲ್ಲಿ ಯಾರಿಗೂ ಗೊತ್ತಿರದ ಒಂದು ಮಾತಿನ ವಿಷಯವಾಗಿ ನಾನಿಲ್ಲಿ ಬರೆಯುವವನಿದ್ದೇನೆ–ಅಥವಾ ಈಗಾಗಲೆ ಬರೆದಿದ್ದೇನೆ ಎನಬಹುದು. ಈ ಲೇಖದ ತಲೆಬರೆಹದಿಂದ ಅದು ಸ್ಪಷ್ಟವಾಗುವುದಲ್ಲವೆ? ತಲೆ ಬಿಟ್ಟು ಬರೆಹವನ್ನಷ್ಟೆ ನೋಡಿದವರಾರಾದರೂ ಇದ್ದರೆ ಅವರಿಗಾಗಿ ಇನ್ನೊಮ್ಮೆ ಇನ್ನಿಷ್ಟು ಸ್ಪಷ್ಟವಾಗಿ ಹೇಳುವೆ. ಫೆಬ್ರುವರಿ–ಮಾರ್ಚ ಸುಮಾರಿಗೆ ಸರ ಕಾರದ ಅಂದಾಜುಪತ್ರಿಕೆಯಷ್ಟೆ ಮಹತ್ವದ್ದಾದ, ದೇಶದ–ಸಮಾಜದ– ದೃಷ್ಟಿಯಿಂದ ಎಲ್ಲರೂ ಲಕ್ಷ್ಯಕೊಡಬೇಕಾದ ಇನ್ನೊಂದು ಅಂದಾಜು ಪತ್ರಿಕೆಯು ಚರ್ಚೆ ನಡೆಯುತ್ತಿರುವುದು, ಪ್ರತಿ ವರ್ಷ ನಡೆಯುವುದು. ಅದೆಂದರೆ ಲೇಖಕರ ಅಂದಾಜುಪತ್ರಿಕೆ. ಅದರ ಮಹತ್ವವನ್ನು ತಿಳುಹಿ ಸುವುದೆ ಈ ಲೇಖದ ಉದ್ದೇಶ.

ಈ ಲೇಖಕ ಎಂಬುವವ ಯಾರು? ಅವನ ಅಂದಾಜುಪತ್ರಿಕೆ ಎಂದ ರೇನು? ಅದಕ್ಕೆ ದೇಶದ ದೃಷ್ಟಿಯಿಂದ ಮಹತ್ತ್ವವಿದ್ದುದು ಹೇಗೆ?– ಎಂದು ಮುಂತಾಗಿ ಯಾರಾದರೂ ಪ್ರಥಮದಲ್ಲಿಯೇ ನಮ್ಮನ್ನು ಕೇಳಕ ಬಹುದು. ಇಂತಹ ಸಂಶಯಗಳಿಗೆ ಸಮಗ್ರವಾದ ಉತ್ತರಕೊಡುವು

ದೊಂದು ಪ್ರಬಂಧವೆ ಆದೀತೆಂದು ಸ್ವಲ್ಪದರಲ್ಲಿಯೆ ಹೇಳುವೆ. ಯಾವನಿಗೆ ಬರೆದ ಮಾತ್ರಕ್ಕೆ ಹೊಟ್ಟೆ ತುಂಬಿದಂತಾಗುವುದೊ ಅವನು-ಅವನೇ-ಲೇಖಕ. ಅಂದಾಜುಪತ್ರಿಕೆ ಎಂದರೆ ಅಂದಾಜುಪತ್ರಿಕೆ. ದೇಶದ ದೃಷ್ಟಿಯಿಂದ ಮಹತ್ತ್ವ ಹೇಗೆ ಎಂಬುದು ಸಂದರ್ಭಾನುಸಾರವಾಗಿ ಮುಂದೆ ಸ್ಪಷ್ಟವಾಗುವುದು.

ಇನ್ನು ಫೆಬ್ರುವರಿ—ಮಾರ್ಚ ಸುಮಾರಿಗೆಯೆ ಈ ಅಂದಾಜು ಪತ್ರಿಕೆಯೂ ಯಾಕೆ ಅಸ್ತಿತ್ವದಲ್ಲಿ ಬರುವುದೆಂಬುದನ್ನು ಪ್ರಸ್ತಾವನಾ ರೂಪವಾಗಿ ವಿವರಿಸುವೆ. ಸಾಮಾನ್ಯವಾಗಿ ಮಾರ್ಚ ಕೊನೆಯಿಂದ ಎಪ್ರಿಲ್ ಮಧ್ಯದವರೆಗಿನ ಸಮಯದಲ್ಲಿ ನಮ್ಮ ಪಂಚಾಂಗಕ್ಕನುಸರಿಸಿ ಯುಗಾದಿ ಬರುವುದು. ಯಾವ ಕೆಲಸದ ಪ್ರಾರಂಭಕ್ಕಾದರೂ ಯುಗಾದಿಯಂತಹ ಮುಹೂರ್ತವಿಲ್ಲ. ಅದಕಾಗಿ 'ಯುಗಾದಿ' ಬರುವುದೆಂದರೆ ಹೊಸ ಉದ್ಯೋಗಗಳು ಅಸ್ತಿತ್ವದಲ್ಲಿ ಬರುವವೆಂಬುದು ಖಂಡಿತ. ಈ ಹೊಸ ಉದ್ಯೋಗಗಳಲ್ಲಿ ಅತ್ಯಂತ ಮಹತ್ತ್ವದ್ದಾದ—ಎಷ್ಟೋ ಸಲ ಒಂದೇ ಬಂದಾದ—ದ್ದೆಂದರೆ ವೃತ್ತಪತ್ರಿಕಾ ವ್ಯವಸಾಯ. ತರುಣನಾಗಲಿ, ಮಧ್ಯವಯಸ್ಕನಾಗಲಿ, ಮುದುಕನಾಗಲಿ—ಇಂದಿನ ಕಾಲದಲ್ಲಿ ಎಲ್ಲರಿಗೂ ಸಂಪಾದಕ ಎನಿಸಿಕೊಳ್ಳುವ ಹಂಬಲ; ಮತ್ತು ನಮ್ಮ ಸಮಾಜದ ಸ್ಥಿತಿಯಾದರೂ ಆ ಹಂಬಲಕ್ಕೆ ಪುಟಗೊಡುವಂತಹದು. ಉದಾಹರಣೆಗಾಗಿ ನಮ್ಮಲ್ಲಿ ಓದು—ಬರೆಹ ಬಲ್ಲವರ ಪ್ರಮಾಣ ತೀರ ಕಡಿಮೆ. ಆದುದರಿಂದ ವೃತ್ತಪತ್ರಿಕೆಗಳು ಬದುಕುವಂತಿಲ್ಲ—ಎಂದರೆ ಒಬ್ಬನ ಪತ್ರಿಕೆ ಬದುಕುವುದಿಲ್ಲ; ಆದ್ದರಿಂದ ಆ ಮೇಲೆ ಇನ್ನೊಬ್ಬನದು; ಅದೂ ಸತ್ತ ಮೇಲೆ ಮೂರನೆಯವನದು—ಹೀಗೆಯೆ ಚಿರಜೀವಿ ಇಲ್ಲದಕ್ಕಾಗಿ ಅನೇಕ ಜೀವಿಗಳು ಉದ್ಭವಿಸಬೇಕಾಗುವುದು. ಇದಲ್ಲದೆ ನಮ್ಮಲ್ಲಿ ತರುಣ—ಮಧ್ಯವಯಸ್ಕ—ಮುದುಕರಾದವರು ಬೇರೆ ಯಾವ ವ್ಯವಸಾಯವನ್ನು ಕೈಕೊಳ್ಳಬಹುದು? ನಿರುದ್ಯೋಗಿಯಾಗುವುದಕ್ಕಿಂತ ಮಾವನಿಂದ 'ಸಾಲ' ಪಡೆದು ಮಾಸಪತ್ರಿಕೆಯ ಸಂಪಾದಕನೆನಿಸಿಕೊಳ್ಳುವುದು ಶೋಭಾವಹವಲ್ಲವೆ? ಮಾಸಪತ್ರಿಕೆ ಎಂದರೆ ಒಂದೇ ತಿಂಗಳು ಅಸ್ತಿತ್ವದಲ್ಲಿರುವ

ಪತ್ರಿಕೆ. 'ಜಾತಸ್ಯ ಮರಣಂ ಧ್ರುವಂ' ಆದ್ದರಿಂದ ಅದರಲ್ಲಿ ಹಾನಿ ಏನು? ಅಂತೂ ಹೇಳುವ ತಾತ್ಪರ್ಯವಿಷ್ಟೆ, 'ಯುಗಾದಿ' ಎಂದರೆ ನೂರಾರು ದೈನಿಕ–ಸಾಪ್ತಾಹಿಕ–ಪಾಕ್ಷಿಕ–ಮಾಸಿಕ–ಸಾಂವತ್ಸರಿಕ ಪತ್ರಿಕೆಗಳ ಜನ್ಮ ಕಾಲ. ಆದ್ದರಿಂದ ಆದಕ್ಕೆ ಏನಿಲ್ಲೆಂದರೂ ಎರಡು ತಿಂಗಳ ಮುಂಚೆ ಎಂದರೆ ಫೆಬ್ರುವರಿಯ ಸುಮಾರಿಗೆ–ನಮ್ಮ ಲೇಖಕನಿಗೆ ಬರೆಹಕ್ಕಾಗಿ ಬೇಡಿಕೆಗಳು.

ಇಂತಹ ಒಂದು ಫೆಬ್ರುವರಿಯ ಸಮಯಕ್ಕೆ ಒಬ್ಬ ಲೇಖಕನ ಮನೆಯನ್ನು— ಅವಶ್ಯವೆನಿಸಿದರೆ ಮನಸ್ಸನ್ನೂ— ಒಳಹೊಕ್ಕು ನೋಡೋಣ. ಸಾಹಿತಿಯನ್ನು ಬ್ರಹ್ಮನಿಗೆ ಹೋಲಿಸಿ ಬರೆದ ಸಂಗತಿಯನ್ನು ತಾವು ಅನೇಕ ಸಲ ಓದಿರಬಹುದಲ್ಲವೆ? ಅದು ನಿಜ ಎಂದು ಹೇಳುವ ಅಧಿಕಾರ ಮತ್ತು ಅನುಭವ ನನಗೀಗ ಬಂದಿವೆ. ನಾನು ಸಾಹಿತಿ ಎಂದು ತಿಳಿದುಕೊಂಡು ಹೇಳುವ ಮಾತಲ್ಲ ಇದು. ಸಾಹಿತಿಗಳು ಯಾರೆಂಬುದು ನನಗೆ ಗೊತ್ತು, ನನ್ನ ಗುರುತಿನವರೂ ಇದ್ದಾರೆ. ನಾನೊಮ್ಮೆ ಅಂತಹ ಸಾಹಿತಿಯೊಬ್ಬನ ಮನೆಗೆ ಹೋಗಿದ್ದೆ. ಎದುರು ನೋಡಿದರೆ ಪದ್ಮಾಸನದಲ್ಲಿ (ಎಂದರೆ ಪದ್ಮವೆಂಬ ಆಸನ) ಕುಳಿತ ಬ್ರಹ್ಮನೇನೊ ಎನುವಂತಹ ಮೂರ್ತಿಯೊಂದು–ಅರ್ಥಾತ್ ನನ್ನ ಗೆಳೆಯನಾದ ಸಾಹಿತಿಯುವನು. ಪದ್ಮನಾಭನ ಉದರ ಪದ್ಮದಲ್ಲಿ ಕುಳಿತ ಬ್ರಹ್ಮನಂತೆ ಇವನೂ ಒಂದು ಚಿತ್ರವಿಚಿತ್ರ ದಳಗಳಂತೆ ಪಸರಿಸಿ ನಿಂತ ಆಸನದಲ್ಲಿ ಕುಳಿತಿದ್ದಾನೆ. ವಾಚಕರೆ, ನಿಮ್ಮ ಕುತೂಹಲವನ್ನು ಬೆಳೆಸುವುದೇಕೆ? ಅವನು ಕುಳಿತದ್ದು ಪತ್ರಿಕೆ–ಮಾಸಪತ್ರಿಕೆಗಳ ಗುಂಪಿನ ಮೇಲೆ. ಇಡಿಯ ಕರ್ನಾಟಕದ ಪತ್ರಿಕೆಗಳನ್ನೆಲ್ಲ ಅವನು ತರಿಸುವನೆಂದ ಮೇಲೆ ಅವನ ಭಾಗ್ಯ-ಲಕ್ಷ್ಮಿ ಎಷ್ಟಿರಬೇಕು ಎಂದು ಕೂಡಲೆ ನಾಲಗೆಯನ್ನು ಚುಚುಕರಿಸಬೇಡಿರಿ. ಯಾಕೆಂದರೆ ಅವನು ಪತ್ರಿಕೆಗಳನ್ನು ತರಿಸುವುದು ಲಕ್ಷ್ಮಿಯ ಸಹಾಯದಿಂದಲ್ಲ, ಸರಸ್ವತಿಯ ಸಹಾಯದಿಂದ; ಕ್ಷೀರಸಾಗರ ಸುತೆಗಿಂತ ನೀರಸಾಗರ ದೌತಿಯೆ ಅವನ ಸೌಭಾಗ್ಯ. ತಾನು ಕಳುಹಿಸಿದ ಲೇಖಕ್ಕೆ ಪ್ರತಿಯಾಗಿ ಆಯಾ ಸಂಪಾದಕರು ತಮ್ಮ ಪತ್ರಿಕೆಗಳ ಸಂಚಿಕೆಗಳನ್ನು

ಕಳುಹಿಸುವರು. ಅವೇ ಇವನಿಗೆ ಆಧಾರ. ವಿಶೇಷವಾಗಿ ಮಾಸಪತ್ರಿಕೆಗಳೇ ಇರುವುದರಿಂದ ತಿಂಗಳಿಗೆ ಮೀರಿ ಅವುಗಳ ಆಧಾರ ಬೇಕಾಗುವುದಿಲ್ಲ. ಬರುವ ತಿಂಗಳ ಮೊದಲನೆಯ ತಾರೀಖಿನ ವರೆಗೆ ಅವುಗಳ ಆಶ್ರಯ; ಆ ಮೇಲೆ ಮುಂದಿನ ತಿಂಗಳ ಸಂಚಿಕೆಗಳು ಆ ಸ್ಥಾನವನ್ನು ಆಕ್ರಮಿಸುವುವು.

ಹೀಗಾದರೆ ಹಿಂದಿನ ತಿಂಗಳ ಸಂಚಿಕೆಗಳ ಗತಿ ಏನು ಎಂದು ತಾವು ಕೇಳುವಿರಲ್ಲವೆ? ಇದಕ್ಕೆ ಉತ್ತರವೆ ಬರೆಹಗಾರನ ಬಜೆಟ್ಟು. ಹಿಂದಿನ ತಿಂಗಳ ಸಂಚಿಕೆಗಳು ಹಿಂದಿನ ತಿಂಗಳ ಬಾಕಿ ಲೆಕ್ಕದಲ್ಲಿ ಅಂಗಡಿಗೆ ಹೋಗುವುವು. ಆಗೀಗ ಸಕ್ಕರೆಯನ್ನಾಗಲಿ ಸೋನಾಮುಖಿಯನ್ನಾಗಲಿ ಸುತ್ತಿಕೊಂಡು ತಮ್ಮಲ್ಲಿ ಅನೇಕರಿಗೆ ಮುಟ್ಟಿರಬಹುದು. ಸಾಹಿತ್ಯದಿಂದ ಇಡಿಯ ಸಮಾಜಕ್ಕೆ ಸಂದೇಶವನ್ನು ಮುಟ್ಟಿಸಲು ಇದಕ್ಕಿಂತ ಹೆಚ್ಚಿನ ಸುಲಭೋಪಾಯವಿದೆಯೆ? ಅದಂತಿರಲಿ. ಅಂಗಡಿಯ ಲೆಕ್ಕದಲ್ಲಿ ಎಂಟಾಣೆಯೊ ಹತ್ತಾಣೆಯೊ ಮುಟ್ಟಿದಂತಾದದ್ದು ಮುಖ್ಯವಿಷಯ. ಇಷ್ಟೊಂದು ಲೇಖಗಳನ್ನು ಬರೆದದ್ದಕ್ಕೆ ಇಷ್ಟೇ ಪ್ರತಿಫಲವೆ—ಎಂದು ಮೂಗು ಮುರಿಸಬೇಡಿರಿ. ಈ ಎಂಟಾಣೆ—ಹತ್ತಾಣೆ ತಿಂಗಳ ಕೊನೆಗೆ ನಗದು ಬಂದದ್ದು. ಅದಕ್ಕೆ ಮುಂಚೆ, ಇಡಿಯ ತಿಂಗಳು, ಈ ಪತ್ರಿಕೆಗಳು ಕುರ್ಚಿಯ ರೂಪದಿಂದ ಸ್ಥಾವರ ಆಸ್ತಿಯಾಗಿ ನಿಂತಿದ್ದುವೆಂಬುದನ್ನು ಮರೆಯಬೇಡಿರಿ. ಇದಲ್ಲದೆ ಇಂತಹ 'ಕಾಮರೂಪ' (Self-adjusting) ಕುರ್ಚಿ ದೊರೆಯಿತೆಂದೇ ಇನ್ನೊಂದು ಪದಾರ್ಥದ ಉಪಯೋಗಮಾಡಿಕೊಳ್ಳಲು ಸಾಧ್ಯವಾಗಿತ್ತು ನನ್ನ ಗೆಳೆಯನಿಗೆ (ಅರ್ಥಾತ್ ಸಾಹಿತಿಗಳಿಗೆ). ಅದೆಂದರೆ—'ಖಾಲೀ ಪಾಕೀಟು' (= ಕವ್ಹರ್, Envelope). ಅನೇಕ ಸಂಪಾದಕರಿಂದ ಅನೇಕ ಪತ್ರಗಳು ದಿನಾಲು ಬರುವುವು. ಒಳಗಿನ ಕಾಗದ ಎಲ್ಲಿ ಹೋಗುವುದೊ ತಿಳಿಯುವಂತಿಲ್ಲ (ಯಾಕೆಂದರೆ ಬುಕ್‌ಪೋಸ್ಟ ಎಂದು ಬಾಯಿ ತೆರೆದುಕೊಂಡೇ ಬಂದ ಪಾಕೀಟಿನಲ್ಲಿ ಬಿದ್ದು ಹೋಗುವುದು ಇಲ್ಲವೆ ಬೇಕಾದವರು ತೆಗೆದು ನೋಡುವರು). ಒಳಗಿನ ಕಾಗದಕ್ಕಿಂತ ಹೊರಗಿನ ಕವ್ಹರುಗಳ ಮಹತ್ವವೆ ಹೆಚ್ಚು. ಯಾಕೆಂದರೆ ಅವುಗಳನ್ನು

ಒಂದರ ಮೇಲೆ ಒಂದನ್ನಿಟ್ಟು ಕಂಪನಿಯ ನಾಟಕದ ಹನುಮಂತನ ಬಾಲದ ಸಿಂಹಾಸನದಂತಹ ಮೇಜನ್ನು ನಿಲ್ಲಿಸಬಹುದು. ಕುರ್ಚಿಯ ಎತ್ತರವನ್ನು ನೋಡಿ ಮೇಜಿನ ಎತ್ತರವನ್ನು ಅಳವಡಿಸಿಕೊಳ್ಳಲೂಬಹುದು. ಅಂತೂ ಕವ್ವರುಗಳ ಮೇಜು, ಪತ್ರಿಕೆಗಳ ಕುರ್ಚಿ—ಇವುಗಳಿಗಾಗಿ ಕಲ್ಪನೆ ಕುಣಿದಾಡುತ್ತಿದ್ದರೆ ಆಶ್ಚರ್ಯವೇನು ?

ಇದೊಂದೆ ಉದಾಹರಣೆಯಿಂದ ಬರೆಹಗಾರನ ಬಜೆಟ್ಟಿನ ಕಲ್ಪನೆ ತಮಗೆ ಬರಬಹುದು. ಪ್ರತಿಯೊಂದು 'ಯುಗಾದಿ' ಎಂದರೆ ಅವನಿಗೆ ಎಕ್ಸ್‌ಟ್ರಾ (Extra) ಕುರ್ಚಿ, ಎಕ್ಸ್‌ಟ್ರಾ ಟೇಬಲ್—ಅರ್ಥಾತ್ ಸ್ಥಾವರ ಆಸ್ತಿಯಲ್ಲಿ ಹೆಚ್ಚಳ. ಮನಿಗೆ ಕೊಡುವುದು ಆರಾಣೆ, ಲೇಖನಿಗೆ ಕೊಡುವುದು ಎಲ್ಲಿಯೂ ಸಿಕ್ಕದ್ದೆಂಬ ಸರ್ಟಿಫಿಕೇಟ್; ಇದರ ಜೊತೆಗೆ ಪ್ರತಿಯೊಂದು ಲೇಖ ಕಳುಹಿಸಲು ಅರ್ಧಾಣೆಯ ಸ್ಟಾಂಪು. ಇದಿಷ್ಟು ವ್ಯಯದ ಬಾಬತ್ತು. ಇನ್ನು ಆಯದ ಬಾಬತ್ತು:—ಸಂಪಾದಕರಿಗಾದರೂ ತಮ್ಮ ಸಂಚಿಕೆ ಕಳುಹಿಸಲು ಸ್ಟಾಂಪು ಬೇಕು—ಆದ್ದರಿಂದ ನಮ್ಮ ಸ್ಟಾಂಪಿನ ವ್ಯಯ ಮುಟ್ಟಿದಂತಾಯಿತು. ಅಂಗಡಿಯಿಂದ ಬರುವುದು ಎಂಟು-ಹತ್ತಾಣೆ—ಆದ್ದರಿಂದ ನಮ್ಮ ಮನಿಯ ಲೆಕ್ಕ ಕೈಗೂಡಿದಂತಾಯಿತು. ಇನ್ನುಳಿದ, ಮೇಲೆ ವಿವರಿಸಿದ, ಕುರ್ಚಿ—ಮೇಜುಗಳು ಲಾಭವಾದಂತಾಗಲಿಲ್ಲವೆ ?

ಇದೆಂತಹ ಲೆಕ್ಕ—ಎನಬಹುದು ತಾವು ? ಲೇಖಕನಿಗೆ ಹೊಟ್ಟೆ ಹೊರೆದುಕೊಳ್ಳಲು ಹಣ ಬೇಡವೆ—ಎಂದೂ ಆಶ್ಚರ್ಯದಿಂದ ಕೇಳಬಹುದು. ದಯಮಾಡಿ ಮೇಲೆ ಕಾಣಿಸಿದ ನನ್ನ ಲೇಖಕ-ವ್ಯಾಖ್ಯೆಯನ್ನು ಇನ್ನೊಮ್ಮೆ ಓದಿದರೆ ತಮಗೆ ತಾನಾಗಿಯೇ ಉತ್ತರ ದೊರಕುವುದು. ಲೇಖಕನ ಕೆಲಸ ಬರೆಯುವುದು; ಹೊಟ್ಟೆಹೊರೆದುಕೊಳ್ಳುವುದಲ್ಲ. ಅಂತಹ ವಿಚಾರವಿದ್ದವನು—ಅಥವಾ ಗೊತ್ತಿಲ್ಲದ ವಿಷಯದ ಗೊಡವೆಯಾದರೂ ಯಾಕೆ ?

'ಅವಶ್ಯವೆನಿಸಿದರೆ ಲೇಖಕನ ಮನಸ್ಸನ್ನೂ ಒಳಹೊಕ್ಕು ನೋಡೋಣ' ಎಂದು ಮೇಲೆ ಹೇಳಿದ್ದೆನಲ್ಲವೆ ? ಅದಕ್ಕಾಗಿ ನಾನು ಕಂಡ ಒಂದೇ ಒಂದು ಸಂಗತಿಯ ದೃಷ್ಟಾಂತವನ್ನು ಕೊಡುವೆ. ಒಮ್ಮೆ ನನ್ನ

ಗೆಳೆಯ–ಸಾಹಿತಿ ಅಂಗಡಿಗೆ ಪತ್ರಿಕೆಗಳನ್ನು ಸಾಗಿಸುವಾಗ ಒಂದು ಹಂಚಿಕೆಯನ್ನು ಕಂಡನು. ಆ ಪತ್ರಿಕೆಗಳಲ್ಲಿ ಪ್ರಕಟವಾದ ತನ್ನ ಲೇಖಗಳನ್ನು ತೆಗೆದಿಟ್ಟುಕೊಳ್ಳಬೇಕೆಂಬುದೆ ಆ ಹಂಚಿಕೆ. ಆ ಹಂಚಿಕೆಯನ್ನು ಸಾಧಿಸಿಯೂ ಬಿಟ್ಟನು. ಆ ಮೇಲೆ ಅಂಗಡಿಯಿಂದ ನಾಲ್ಕೂವರೆ ಆಣೆ ಮುಟ್ಟಿದುವೆಂದು ಸಂದೇಶ ಬಂದಿತು. ಹರಹರಾ! ಎಂಟು–ಹತ್ತಾಣೆ ಬರುವಲ್ಲಿ ನಾಲ್ಕೂವರೆ ಆಣೆ ಬಂದಿತಲ್ಲ, ಉಳಿದ ಲೆಕ್ಕ ಮುಟ್ಟಿಸುವುದು ಹೇಗೆ–ಎಂದು ಒಂದು ಕಡೆ ಸಂತಾಪ. ಇನ್ನೊಂದು ಕಡೆ ಇಡಿಯ ಪತ್ರಿಕೆಗಳ ಬೆಲೆಯ ಅರ್ಧದಷ್ಟು ಬೆಲೆ ನನ್ನೊಬ್ಬನ ಲೇಖಗಳಿಗೆ ಇದೆಯಲ್ಲ–ಎಂಬ ಅಭಿಮಾನದ ಸಂತೋಷ.

ಹೀಗಿದೆ ಲೇಖಕನ ಮನಸ್ಸು! ಇಂತಹ ಮನಸ್ಸನ್ನು ಒಳಹೊಕ್ಕು ನೋಡಲು ಯಾರ ಮನಸ್ಸಾದೀತು? ಲೇಖಕನ ಹೊಟ್ಟೆ ಬುಕ್‌ಪೋಸ್ಟಿನಂತೆ ಎರಡೂ ಬದಿಗೆ ತೆರೆದಿಟ್ಟಿದ್ದರೆ, ಅವನ ಮನಸ್ಸು ವ್ಹಿ. ಪಿ. ಪಿ. ಯಂತೆ ಮುಚ್ಚಿದ್ದು ಹಣಕೊಟ್ಟು ಹೊರೆಗೆಳೆಯಬೇಕಾದೀತು. ಹೋಗಲಿ. ಹೆಚ್ಚಿಗೆ ಬರೆದರೆ ಇದೇನೊ ಹರಟೆ ಇದೆ ಎಂದು ತಮ್ಮ ಕಲ್ಪನೆಯಾಗಬಹುದು. ಇದಲ್ಲದೆ ಹೊಟ್ಟೆಹೊರೆಯುವುದನ್ನು ಬಿಟ್ಟು ಲೇಖ ಬರೆಯುವುದರಲ್ಲಿ ನಾನು ಹೆಚ್ಚು ವೇಳೆ ಕಳೆಯುವೆನೆಂದೂ ಅದಕಾಗಿ ನನಗೆ ಹೊಟ್ಟೆಗಾಗಿ ಬೇರೆ ಆಸ್ತಿ–ಪಾಸ್ತಿ ಇದ್ದಿರಬೇಕೆಂದೂ ತರ್ಕ ಹೂಡಿ ಸರಕಾರವು ಹೆಚ್ಚಿನ ಇನ್‌ಕಮ್‌ಟ್ಯಾಕ್ಸ ಹೇರೀತು ನನ್ನ ಮೇಲೆ. ಬರೆಯುವುದೆ ನನ್ನ ಇನ್‌ಕಮ್ ಎಂದು ಯಾರಾದರೂ ಹೇಳಿದರೆ, ಓದುವುದೆ ನಿಮಗೆ ಟ್ಯಾಕ್ಸ ಎಂದು ಹೇಳಿ ಮುಗಿಸುವೆ.



# ಪುರುಷ ಸರಸ್ವತಿ ಒಬ್ಬನೆ? ಇಬ್ಬರೆ?*

## ಪೀಠಿಕೆ

ಈಗ ಕೆಲವು ತಿಂಗಳುಗಳ ಕೆಳಗೆ, **'ಗುಪ್ತ ಸಂಪಾದಕ ಪಂಚಕ'** ಎಂಬ ಐದು ಜನ ಅನಾಮಧೇಯರು **'ಮಹಾಕವಿ ಪುರುಷ ಸರಸ್ವತಿ'** ಎಂಬ ಪ್ರಾಚೀನ ಕವಿಯ **'ಕರ್ಣನಾಟಕ ಪುರಾಣವು'** ಎಂಬ ಶತಕಾರ್ಧ ಷಟ್ಪದವನ್ನು ಪರಿಷ್ಕರಿಸಿ ಪ್ರಕಟಿಸಿದರು. ಆ ಪುರಾಣದ ೩೮ನೆಯ ಪದ್ಯದ ಉತ್ತರಾರ್ಧವಾದ

ಹಿತಮಿತಾಕ್ಷರ ಪೂರರಲಿ ಸಂ
ತತವು ನೆನೆನೆನೆದದನೆ ತಾವೊ
ಪ್ಪುತದೊಳಾತನ ನಾಡಿಗಿಟ್ಟರು ಅದುವೆ ಕರ್ಣಾಟ

ಎಂಬ ಭಾಗವನ್ನು ನೋಡಿ

"ಪಂಪನು ತನ್ನನ್ನು 'ಹಿತಮಿತ ವಚನಂ' ಎಂದು ಕರೆದುಕೊಂಡುದಕ್ಕೂ 'ನೆನೆಯುದಿಂಣ್ಣ' ಎಂಬ ವೃತ್ತದಲ್ಲಿ ಮೇಲಿಂದ ಮೇಲೆ ನೆನೆ, ನೆನೆ–ಎಂದು ನೆನೆದುದಕ್ಕೂ ಈ ಅರ್ಧಷಟ್ಪದವೇನಾದರೂ ಪ್ರೇರಕವಾಗಿದ್ದಿರಬಹುದೆ? ಹಾಗಾದರೆ, ಪುರುಷಸರಸ್ವತಿಯು ಪಂಪನಿಗಿಂತ ಪ್ರಾಚೀನನಾಗುತ್ತಾನಲ್ಲವೆ? ಎಂದರೆ, ಷಟ್ಪದಿಗಳ ಕಾಲವಾದ ಮೇಲೆ ಚಂಪು ಹುಟ್ಟಿದಂತಾಯಿತಲ್ಲವೆ?"

ಎಂದು ಸಂಪಾದಕರು ಸಂದೇಹಗೊಂಡಿದ್ದರು. ಇದರ ಜೊತೆಗೆ ಅದೇ ಪುರಾಣದ ೪೧ನೆಯ ಪದ್ಯದ ಪೂರ್ವಾರ್ಧವಾದ

ಮೀಶವೊತ್ತನವೋಘವರ್ಷನ
ರೇಶ ನೃಪತುಂಗಾಖ್ಯ ತಾನವಿ
ನಾಶಿಯಾತನ ಮಾತಿಗೆದುರೆದ್ದಾರ್ಪರಾರುಂಟು

---

* ಶ್ರೀ ಜಿ. ಪಿ. ರಾಜರತ್ನಂರವರ **'ಮಹಾಕವಿ ಪುರುಷ ಸರಸ್ವತಿ'** ಎಂಬ ವ್ಯಂಗ್ಯ ಕಾವ್ಯದ ಪ್ರಶಸ್ತಿ ಭಾಗದಿಂದ ಆಯ್ದುದು.

ಎಂಬುದಕ್ಕೆ ಪಾಠಾಂತರವಾಗಿ ದೊರಕಿರುವ

ಮೋಶಿವೆತ್ತನ ಮೀಘವಸ್ತ್ರ ನ।
ರೇಶನ ಪತಂಗಾಖ್ಯತಾನ ವಿ।
ನಾಶಿಯಾತನ . . . . . . . .

ಎಂಬ ಪಂಕ್ತಿಗಳನ್ನು ನೋಡಿ

"ಇದಕ್ಕೆ ಅರ್ಥವಾಗುವುದಿಲ್ಲ. ಕನ್ನಡದಂತೆ ಕಂಡರೂ ಕನ್ನಡದಂತೆ ಅರ್ಥವಾಗದ ಈ ಭಾಷೆ ಕೂಡ ಈ ಕಾವ್ಯದ ಪ್ರಾಚೀನತೆಯನ್ನು ತೋರಿಸುತ್ತದೆಯಲ್ಲವೆ?"

ಎಂದು ಸಂಪಾದಕರು ಅಭಿಪ್ರಾಯಪಟ್ಟಿದ್ದಾರು. ಅದೇ ಪುರಾಣದ ೫೦ನೆಯ ಪದ್ಯ ಈ ಅಭಿಪ್ರಾಯವನ್ನು ದೃಢಪಡಿಸಿತು. ಆ ಪದ್ಯ ಹೀಗಿದೆ:

ಶಾಂತವಾಗಲಿ ನಮ್ಮ ಜನ ಸಿರಿ।
ಕಾಂತನೊಲಿಯುಲಿ ನೆಲಸಿ ನಿಲಲಿ ನಿ।
ತಾಂತಮೀ ಕರ್ಣಾಟಕವು ಸಹಣತ್ವವಾಗಿಯೆ ತಾ॥
ಕ್ರಾಂತಿಕಾರಕನಲ್ಲ ನಾ ವಿ।
ಭ್ರಾಂತಿಗೊಂಡವನಲ್ಲಲಾ ವಿ।
ಶ್ರಾಂತಿಗೊಳುವೆನು ಮುಗಿಯಿತೀ ಶತಕಾರ್ಧಷಟ್ಪದವು॥

ಇದರಿಂದ ಈ ಶತಕಾರ್ಧಷಟ್ಪದ ಮುಗಿದ ಕಾಲವು ಆರು ಪಾದಗಳಲ್ಲಿ ನಿರ್ಣಯವಾಗುತ್ತದೆ. ಹೇಗೆಂದರೆ:–

(೧) ಶಾಂತವಾಗಲಿ ನಮ್ಮ ಜನ:—

(೧) ಶಾಂತ —ರಸಗಳಲ್ಲಿ ಒಂಬತ್ತನೆಯದು ∴ ಶಾಂತ = ೯
(೨) ವಾಗಲಿ— ವಾ–ಗ–ಲಿ–ಮೂರಕ್ಷರ ∴ ವಾಗಲಿ = ೩
(೩) ನಮ್ಮ —ನ–ಮ್ಮ–ಎರಡಕ್ಷರ ∴ ನಮ್ಮ = ೨
(೪) ಜನ —ಅನಿರ್ದಿಷ್ಟ ಸಂಖ್ಯೆ ∴ ಜನ = ೦

∴ ಶಾಂತವಾಗಲಿ ನಮ್ಮ ಜನ = ೯೩೨೦

(೨) ಸಿರಿಕಾಂತನೊಲಿಯುಲಿ ನೆಲಸಿ ನಿಲಲಿ ನಿತಾಂತ:—

(೧) ಸಿರಿಕಾಂತ —ತ್ರಿಮೂರ್ತಿಗಳಲ್ಲಿ ಎರಡನೆಯವನು ∴ ಸಿರಿಕಾಂತ = ೨
(೨) ನೊಲಿಯುಲಿ —ಅರ್ಥಾತ್ ಸುಲಿಯುಲಿ. (ಕೊಡು–ಕುಡು,
ಸೊಂಡಿಲು–ಸುಂಡಿಲು, ತೊಡು–ತುಡು,

ಒಳ್–ಉಳ್ ಮುಂತಾದುವನ್ನು ಹೋಲಿ
ಸಿರಿ)–ನುಲಿಯುವುದು ಯಾವುದು ?
ಹೊಟ್ಟೆ–ಹೊಟ್ಟೆ ಎಂದರೆ? ಕರುಳು–ಎಂದರೆ
ಸಣ್ಣ ಕರುಳು, ದೊಡ್ಡ ಕರುಳು ∴ ನೊಲಿಯುಲಿ = ೨

(೨) ನೆಲಸಿ ನಿಲಲಿ—ಸ್ಥಿರವಾಗಿ ಮೇರುವಿನಂತೆ ನಿಲ್ಲಲಿ–ಮೇರುವು
ಅಸದೃಶವಾದ ಪರ್ವತ ∴ ನೆಲಸಿ ನಿಲಲಿ = ೧

(೪) ನಿತಾಂತ —ಸದಾ–ಕೊನೆ ಮೊದಲುಗಳಿಲ್ಲದೆ ಚಕ್ರದಂತೆ ∴ ನಿತಾಂತ = ೦

∴ ಸಿರಿಕಾಂತನೊಲಿಯುಲಿ ನೆಲಸಿ ನಿಲಲಿ ನಿತಾಂತ = ೨೨೧

(೩) ಮೀ ಕರ್ಣಾಟಕವು ಸಹಣತ್ವವಾಗಿಯೆ ತಾ:—

ಸಹ—ಕೂಡುವುದು–ಮೇಲೆ ಬಂದ ಎರಡು ಸಂಖ್ಯೆಗಳನ್ನೂ ಕೂಡುವುದು

∴ ೯೩೨೦+೨೨೧೦ = ೧೧೫೩೦

(೪) ಕ್ರಾಂತಿಕಾರಕನಲ್ಲ ನಾ:—

ಕ್ರಾಂತಿ—ತಲೆ ಕೆಳಗು ಮಾಡುವುದು–ಯಾವುದನ್ನು? ಮೇಲೆ ಸಹ ಮಾಡಿ ಬಂದದ್ದನ್ನು

∴ ೧೧೫೩೦ × ಕ್ರಾಂತಿ = ೦೩೫೧೧ = ೩೫೧೧

(೫) ವಿಭ್ರಾಂತಿಗೊಂಡವನಲ್ಲಲಾ:—

ವಿಭ್ರಾಂತಿ = ಭ್ರಾಂತಿ—ಸಮಾಧಾನಾರ್ಥಕ–ಹೇಗೆ ಬಂತು? ಮೊದಲ ಅಕ್ಷರ ನಾಶ
ಮಾಡಿದ್ದರಿಂದ

∴ ಮೊದಲ ಸಂಖ್ಯೆ ನಾಶಮಾಡಿದರೆ ಉಳಿಯುವುದು–೩೫೧೧ರಲ್ಲಿ ೩ ತೆಗೆದರೆ–೫೧೧.

(೬) ವಿಶ್ರಾಂತಿಗೊಳುವೆನು ಮುಗಿಯಿತೀ ಶತಕಾರ್ಧ ಷಟ್ಪದವು.

ವಿಶ್ರಾಂತಿ—ಲೆಕ್ಕಾಚಾರ ನಿಲ್ಲಿಸುವುದು. ∴ ಕಡೆಗೆ ಉಳಿದದ್ದು—೫೧೧

ಎಂದರೆ, ಶಕ ೫೧೧ರಲ್ಲಿ "ಮುಗಿಯಿತೀ ಶತಕಾರ್ಧ ಷಟ್ಪದವು"

ಇಂತಹ ಮಹಾಪ್ರಾಚೀನ ಕಾವ್ಯವಾದ ಕರ್ಣನಾಟಕ ಪುರಾಣವು ಪ್ರಕಟವಾದ ಮೂರು ತಿಂಗಳಲ್ಲಿ ಅದೇ ಮಹಾ ಕವಿಯು '**ಹಾಮೋ ನಿಯಂ ಹರಣವು**' ಎಂಬ ಎರಡನೆಯ ಶತಕಾರ್ಧವನ್ನು ಅದೇ 'ಗುಪ್ತ ಸಂಪಾದಕ ಪಂಚಕ'ವು ಪ್ರಕಟಿಸಿ ಲೋಕೋಪಕಾರವನ್ನೆಸಗಿತು.

ಈಗ, ಮೇಲಿನ ಎರಡೂ ಶತಕಾರ್ಧಗಳನ್ನು ಒಬ್ಬನೇ ಕವಿ ಬರೆದನೆ? ಅಥವಾ ಬೇರೆ ಬೇರೆ ಕವಿಗಳಿಬ್ಬರು ಬರೆದರೆ?—ಅರ್ಥಾತ್ **ಪುರುಷ**

**ಸರಸ್ವತಿ ಒಬ್ಬನೆ? ಇಬ್ಬರೆ?**—ಎಂಬುದನ್ನು ಚರ್ಚಿಸಿ ತೀರ್ಮಾನಕ್ಕೆ ಬರಬೇಕಾದ ಕಾಲವೊದಗಿದೆ. ಆದ್ದರಿಂದ ಆ ಶತಕಾರ್ಥಗಳನ್ನು ಸಂಪಾದಿಸಿದ 'ಗುಪ್ತಸಂಪಾದಕ ಪಂಚಕ'ದ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಪಂಚಮರ ಮತಗಳನ್ನು ತಿಳಿಸಿ ಕಡೆಯಲ್ಲಿ ನಮ್ಮ ಅಭಿಪ್ರಾಯವನ್ನು ವಾಚಕರ ಅವಗಾಹನೆಗೆ ತರಲೆಳಸುತ್ತೇನೆ.

## ಪ್ರಥಮರ ಮತ

**ಪುರುಷ**ನೆಂಬ ಗಂಡಸೂ **ಸರಸ್ವತಿ**ಯೆಂಬ ಹೆಂಗಸೂ ಸೇರಿ ಈ ಶತಕಾರ್ಥಗಳನ್ನು ರಚಿಸಿದರೆಂದು ನಾನು ಮೊದಲು ಭಾವಿಸಿದ್ದೆ. ಆದರೆ, ಈಚೆಗೆ ವಿಚಾರ ಮಾಡಿದ್ದರಲ್ಲಿ, **ಪುರುಷನು** ಒಂದು ಶತಕಾರ್ಥವನ್ನೂ **ಸರಸ್ವತಿ**ಯು ಇನ್ನೊಂದನ್ನೂ ರಚಿಸಿ, ಎರಡಕ್ಕೂ ಇಬ್ಬರ ಹೆಸರುಗಳನ್ನೂ ಕೂಡಿಸಿ ಬರೆದರೆಂದು ಊಹಿಸಲಾಗಿದೆ. ಆದರೆ, ಯಾವುದನ್ನು ಯಾರು ಬರೆದರೆಂಬುದು ಇನ್ನೂ ನಿರ್ಧಾರವಾಗಿಲ್ಲ, ಆದ್ದರಿಂದ ನಾನು ಈಗಲೇ ನನ್ನ ತೀರ್ಮಾನದ ಬಗ್ಗೆ ಏನೂ ಹೇಳಿಕೆ ಕೊಡಲಾರೆ.

## ದ್ವಿತೀಯರ ಮತ

ಈ ಎರಡೂ ಶತಕಾರ್ಥಗಳನ್ನೂ ಒಬ್ಬನೇ ಬರೆದನು. ಅದಕ್ಕೆ ನಮಗಿರುವ ಕಾರಣಗಳು :

(೧) ಎರಡು ಕಾವ್ಯಗಳಲ್ಲೂ ಕವಿಯು ತನ್ನ ಹೆಸರು **ಪುರುಷ ಸರಸ್ವತಿ**ಯೆಂದು ಹೇಳಿಕೊಂಡಿದ್ದಾನೆ.

(೨) ಎರಡು ಕಾವ್ಯಗಳಲ್ಲೂ ಬ್ರಹ್ಮವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳನ್ನು **ಮೂರು ಮೂರು** ಸಲ ಸ್ಮರಿಸಿದ್ದಾನೆ.

(೩) ಎರಡು ಕಾವ್ಯಗಳಲ್ಲೂ ಪ್ರಾರಂಭದಲ್ಲಿ ಕವಿಸ್ತುತಿಯೂ ವಾಚಕನಿಂದೆಯೂ ಇದೆ.

(೪) ಹಾ, ಹ, ಶ. ನಾ. ಪು., ಗಳಂ ೩.

ನೋಹೋ ಪುರುಷಸರಸ್ವತಿ ರಚಿಸಿದ ಬಳಿಕಾ
ದೇಹವನಚಿ ಪನುಳಿದಾ
ಸಾಹಸಿ ನಿಂಗನೊಲಮುರರ ಪದಕ್ಕೆ ಸಂದಾನ್

ಎಂಬ ಹಾಳೂರಿನ ಹುಲ್ಲುಗಡ್ಡೆ ಶಾಸನ ನಂ. ೩೭ರ ಪ್ರಕಾರ, ಹಾರ್ಮೋ ನಿಯಂ ಹರಣ ಮತ್ತು ಕರ್ಣನಾಟಕ ಪುರಾಣಗಳನ್ನು ರಚಿಸಿದವನು ಒಬ್ಬನೇ ಪುರುಷ ಸರಸ್ವತಿಯೆಂಬುದು ವ್ಯಕ್ತವಾಗಿದೆ.

(೫) ಹಾ. ಹ., ಮತ್ತು ಕ. ನಾ. ಪು., ಗಳನ್ನು ರಚಿಸಿದವರು ಬೇರೆ ಬೇರೆಯೆಂಬುದಕ್ಕೆ ಯಾವ ಶಾಸನಾಧಾರವೂ ದೊರಕಿಲ್ಲ.

## ಮೇಲಿನ ಕಾರಣಗಳಿಗೆ ಇತರರ ಆಕ್ಷೇಪಗಳು

(೧) ಎರಡೂ ಕಾವ್ಯಗಳಲ್ಲಿ ಪುರುಷ ಸರಸ್ವತಿಯೆಂಬ ಹೆಸರು ಕಂಡು ಬಂದರೂ ಎರಡೂ ಕಾವ್ಯಗಳ ಹೆಸರು ಬೇರೆ ಬೇರೆಯಾಗಿವೆ. ಕವಿ ಒಬ್ಬನೇ ಆಗಿದ್ದರೆ ಎರಡು ಕಾವ್ಯಕ್ಕೂ ಒಂದೇ ಹೆಸರನ್ನೇಕೆ ಇಡಲಿಲ್ಲ?

(೨) ಹೌದು. ಆದರೆ ಕರ್ಣನಾಟಕ ಪುರಾಣದಲ್ಲಿ 'ಶಂಭು' ಎಂಬ ಪದಪ್ರಯೋಗಪರ್ಯಾಯದಿಂದ ತ್ರಿಮೂರ್ತಿಗಳನ್ನು **ಒಂದು ಸಲ ಹೆಚ್ಚಾಗಿ** ಸ್ಮರಿಸಿದ್ದಾನೆ. (ಶಂಭು:— ಶಕಾರದಿಂದ ಶರ್ವಾಣೀರಮಣನಾಗಿ ಶಂಕರನೆನಿಸಿದ ಶಿವನನ್ನೂ; ತದನಂತರದ **ಅಖಿಲ** ಬ್ರಹ್ಮಾಂಡದಂತಿರುವ ಅನುಸ್ವಾರದಿಂದ ತದಂಡಕ್ಕೆ ಚರಣಾಯುಧಪ್ರಾಯನಾದ ಸಾಕ್ಷಾತ್ ಹಿರಣ್ಯಗರ್ಭ ಪರಬ್ರಹ್ಮನನ್ನೂ; ಕಡೆಯ ಭುಕಾರದಿಂದ ಭುವನಮೋಹಕವಾದ ಮೋಹಿನೀರೂಪವನ್ನು ತಾಳಿ, ಭೂದೇವಿಯನ್ನು ಉದ್ಧರಿಸಿ, ಭೂಭೃತರನ್ನು ಸಂಹರಿಸಿ, ಸ್ವಯಂಭುವಾದ ಶ್ರೀಮನ್ನಾರಾಯಣ ಸ್ವಾಮಿಯನ್ನೂ ಸ್ಮರಿಸಿದ್ದಾನೆ. — ವಿಪರೀತ ಬುದ್ಧಿವ್ಯಾಖ್ಯಾ.)

(೩) ಹೌದು.! ಆದರೆ ಕ. ನಾ. ಪು. ದಲ್ಲಿ ಕವಿವಾಚಕರ ಸ್ತುತಿ ನಿಂದೆಗಳು **೫ : ೩** ಪ್ರಮಾಣದಲ್ಲಿಯೂ ಹಾ. ಹ. ದಲ್ಲಿ **೪ : ೪** ಪ್ರಮಾಣ ದಲ್ಲಿಯೂ ಗೋಚರವಾಗುವುದನ್ನು ಗಮನಿಸಬೇಕು.

(೪) ಈ ಶಾಸನಪದ್ಯದಲ್ಲಿ ಛಂದಸ್ಸಿನ ದೋಷವಿದೆ. ಇದನ್ನು ನಂಬಲಾಗುವುದಿಲ್ಲ. ಇದು ಕಂದದಂತೆ ಕಂಡು ಬಂದರೂ, ಆರನೆಯ ಸ್ಥಾನದಲ್ಲಿ ಜಗಣವಾಗಲಿ ಸರ್ವಲಘುವಾದ ಗಣವಾಗಲಿ ಬಂದಿಲ್ಲ. ಅಲ್ಲದೆ, ವಿಷಮಸ್ಥಾನದಲ್ಲಿ ಜಗಣ ಬಂದಿದೆ.

(೫) ನಿಜ. ಇದುವರೆಗೆ ಸಿಕ್ಕಿಲ್ಲ. ಆದರೆ ನಾಳೆ ಸಿಕ್ಕಬಹುದು. ಅಲ್ಲಿಯವರೆಗೆ ಈ ಆಧಾರ ಒಪ್ಪುವಂತಿಲ್ಲ.

## ಮೇಲಿನ ಆಕ್ಷೇಪಣೆಗಳಿಗೆ ದ್ವಿತೀಯರ ಸಮಾಧಾನ

(೧) ಕವಿ ಮನಸ್ಸು ಮಾಡಿದ್ದರೆ ಇಡಬಹುದಾಗಿತ್ತು. ಅವನು ಮನಸ್ಸು ಮಾಡಲಿಲ್ಲ; ಆದ್ದರಿಂದ ಇಡಲಿಲ್ಲ.

(೨) ಹೌದು. ಆದರೆ ಹಾ. ಹ. ದಲ್ಲಿ 'ಶ್ರೀ ಗಿರಿಜೆ ಸರಸತಿ' ಎಂದು ತ್ರಿಮೂರ್ತಿಗಳ ಅರ್ಧಾಂಗಿಯರನ್ನು ಸ್ಮರಿಸಿದ್ದಾನೆ. ಆದ್ದರಿಂದ ಪ್ರತಿ ಕಾವ್ಯದಲ್ಲೂ ತ್ರಿಮೂರ್ತಿಗಳ ಸ್ಮರಣೆ **ನಾಲ್ಕು ಬಾರಿ** ಬಂದಂತಾಯಿತು.

(೩) ಗಮನಿಸಿದೆವು. ೫ಕ್ಕೆ ೩ ಕೂಡಿಸಿದರೆ ಹೇಗೆ ೮ ಆಗುವುದೊ ಹಾಗೆಯೇ ೪ಕ್ಕೆ ೪ ಕೂಡಿಸಿದರೂ ಎಂಟಾಗುವುದೆಂಬುದನ್ನು ತಾವು ಮರೆಯಬಾರದು.

(೪) ಇದು ಛಂದಸ್ಸಿನ ದೋಷವಲ್ಲ. ಕಂದ ಪದ್ಯಗಳ ಲಕ್ಷಣವು ನಿಯಮಿಸಲ್ಪಡುವುದಕ್ಕೆ ಮೊದಲೇ ಈ ಶಾಸನವು ಬರೆಯಲ್ಪಡಲಾಗಿತ್ತೆಂದು ಇದರಿಂದ ತಿಳಿಯಬೇಕು. ಕಡೆಯ 'ಸಂದಾನ್' ರೂಪವೂ ಇದನ್ನೇ ಪುಷ್ಟಿಗೊಳಿಸುತ್ತದೆ.

(೫) ಅಂತಹ ಶಾಸನ ಸಿಕ್ಕುವ ವರೆಗೆ ಈ ಆಕ್ಷೇಪವೆತ್ತದಿರುವುದು ಒಳ್ಳೆಯದು.

## ತೃತೀಯರ ಮತ

ದ್ವಿತೀಯರ ಕಾರಣಗಳಿಗೆ ನಾವು ಹಾಕಿದ ಆಕ್ಷೇಪಣೆಗಳಿಗೆ ಅವರು ಕೊಟ್ಟಿರುವ ಸಮಾಧಾನಗಳು ಸಮರ್ಪಕವಾಗಿಲ್ಲ. ಇರಲಿ. ನನ್ನ ಅಭಿಪ್ರಾಯದ ಪ್ರಕಾರ ಈ ಕಾವ್ಯಗಳನ್ನು ಬರೆದವನ ಅಥವಾ ಬರೆದವರ ಹೆಸರು '**ಪುರುಷ ಸರಸ್ವತಿ**' ಅಲ್ಲವೆಂದೇ ನನ್ನ ಭಾವನೆ. ಅದು **ಪರುಷ ಸರಸ್ವತಿ** ಅಥವಾ **ಹರುಷ ಸರಸ್ವತಿ** ಎಂದು ಇರಬೇಕು. ಹಾಗಿದ್ದರೆ, ಆ ಹೆಸರಿನವಳು ಹೆಂಗಸಾಗಿರಬೇಕಲ್ಲದೆ ಆ ಹೆಸರಿನವನು ಗಂಡಸಾಗಿರಲು ಸಾಧ್ಯವಿಲ್ಲ. ಇದನ್ನು ಕುರಿತ ನನ್ನ ಸಂಶೋಧನೆಯು ಕ್ಷಿಪ್ರದಲ್ಲಿಯೇ ಹೊರಬೀಳುವುದು.

## ಚತುರ್ಥರ ಮತ

ದ್ವಿತೀಯರ ಕಾರಣಗಳನ್ನಾಗಲಿ ಸಮಾಧಾನಗಳನ್ನಾಗಲಿ ನಾನು ಒಪ್ಪದಿದ್ದರೂ 'ಪುರುಷ ಸರಸ್ವತಿ ಒಬ್ಬನೇ' ಎಂಬ ಮತವನ್ನು ನಾನೂ ಅನುಮೋದಿಸುತ್ತೇನೆ. ಇದಕ್ಕೆ ನನ್ನ ಅಂತರ್ವಾಣಿಯೇ ಸಾಕ್ಷಿ. ಇದೂ ಅಲ್ಲದೆ, ಮಹಾಕವಿ ಪುರುಷ ಸರಸ್ವತಿಯ ಭವ್ಯ ಮೂರ್ತಿಯು ಇದುವರೆಗೆ ಹದಿಮೂರು ಸಲ ನನಗೆ ಹಗಲುಕನಸುಗಳಲ್ಲಿ ಪ್ರತ್ಯಕ್ಷವಾಗಿ, ತಾನೇ ಆ ಎರಡು ಕಾವ್ಯಗಳನ್ನೂ ಬರೆದುದುಂಟೆಂದು ಒಪ್ಪಿಕೊಂಡಿದ್ದಾನೆ. 'ನಂಬುವರ ತಂಬಿಗೆಯ ತುಂಬಿ ಕೊಡುವನು ಸಾಂಬ' ಎಂಬ ಮಾತು ಸುಳ್ಳಾಗದು.

## ಪಂಚಮರ ಮತ

ನನಗೆ ಮೊದಲಿನಿಂದಲೂ ಸ್ವಂತಂತ್ರಾಭಿಪ್ರಾಯ ಅಭ್ಯಾಸವಾಗಿಲ್ಲ. 'Line of Least Resistance' ಪ್ರಕಾರ ಹರಿಯುವುದು ನನ್ನ ಜೀವನದ ಸೂತ್ರ. ನನ್ನ ಸಹೋದ್ಯೋಗಿಗಳ ಮತಗಳನ್ನೂ ಅದಕ್ಕೆ ಅವರು ಕೊಟ್ಟಿರುವ ಕಾರಣಗಳನ್ನೂ ನಾನು ಪ್ರಶ್ನಿಸುವುದಿಲ್ಲ. ಆದರೆ ನಾಲ್ಕು ಮತಗಳೂ ನಿಜವಾಗಿರಲಾರದೆಂದು ಹೃದಯ ಹೇಳುತ್ತಿದೆ. ಯಾವುದಾದರೂ ಒಂದು ಸರಿಯಾಗಿರಬೇಕಾದರೆ ಮಿಕ್ಕ ಮೂರು ತಪ್ಪಾಗಿರಬೇಕೆಂದು ಮನಸ್ಸು ಮುನ್ನುಡಿಯುತ್ತಿದೆ. ನಾಲ್ಕರಲ್ಲಿ ನಾಲ್ಕೂ ತಪ್ಪಾಗಿದ್ದರೂ ಇರಬಹುದೆಂದು ಆತ್ಮ ಅಂಜುತ್ತಿದೆ. ಯಾವುದೊಂದು ನಿಷ್ಕರ್ಷೆಯಾಗದೆ ಹೀಗೆ ಡೋಲಾಯಮಾನವಾಗಿರುವಾಗ ನಾನು ಖಂಡಿತವಾದ ಅಭಿಪ್ರಾಯವನ್ನು ಕೊಡುವುದು ಜಾಣತನವಲ್ಲ. ಅದು ಅವಿವೇಕದ ಪರಮಾವಧಿ. ಸದ್ಯಕ್ಕೆ ನಾನೇನೂ ಅಭಿಪ್ರಾಯ ಕೊಡಲಾರೆ; ಕ್ಷಮಿಸಬೇಕು.

## ನಮ್ಮ ಮತ

'ಎಂಥೆಂಥಾ ದೇವರಿಗೂ ಅಂತರಾಳ, ಕಾಲುಮುರಿದ ದೇವರಿಗೆ ಕೈಲಾಸ' ಎಂಬ ಗಾದೆಯಂತೆ ಅಂಥಿಂತಹ ಅಪ್ರತಿಮರಾದ ದಗ್ಧೋಪ

ದಗ್ಧರಾದ ವಿದಗ್ಧರೇ ಹೀಗೆ ಮತಿಗೆಟ್ಟು, ಭ್ರಮೆಗೊಂಡು, ದಿಗ್ಮೂಢರಾಗಿರುವಾಗ ನಮ್ಮಂತಹ ಪರಮಪಾಮರರ ಗತಿಯೇನು! ಸರ್ವಜೀವಪ್ರದಾಯಕನಾದ ಸರ್ವೇಶ್ವರನಿಗೆ ಮೊರೆಯಿಡುವುದೊಂದೆ ನಮ್ಮ ಕೈಲಾಗುವ ಕಾರ್ಯ. ಅಂತೆಯೆ ಗೈಯುವೆವು.

**ಹಿರಣ್ಮಯೇಣ ಪಾತ್ರೇಣ**
**ಸತ್ಯಸ್ಯಾಪಿಹಿತಂ ಮುಖಂ**
**ತತ್ತ್ವ ಪೂಷನ್ನ ಪಾವೃಣು**
**ಸತ್ಯಧರ್ಮಾಯ ದೃಷ್ಟಯೇ**

ಓಂ ಶಾಂತಿಃ ಶಾಂತಿಃ ಶಾಂತಿಃ.

'ಗುಪ್ತಸಂಪಾದಕ ಪಂಚಕ'ದ ಆಪ್ತಕಾರ್ಯದರ್ಶಿ
'ಕನ್ನಡಿ ಗರಡಿಯಾಳು'



## ನಮ್ಮ ನಾಟಕ ~ ~ ಎಂ. ಜಿ. ವೆಂಕಟೇಶಯ್ಯ

ಏನಂತೀರಿ, ಸ್ವಾಮಿ! ತಾಳಗಳಲ್ಲಿ ತಾಳ, ಭೇತಾಳ; ರಾಗಗಳಲ್ಲಿ ರಾಗ, ಸರಾಗ; ಹೇಗೆ ಎರಡೆರಡು ಭೇದಗಳುಂಟೋ ಹಾಗೇ ಕಾವ್ಯಗಳಲ್ಲಿ ದೃಶ್ಯಕಾವ್ಯ, ಅದೃಶ್ಯಕಾವ್ಯ ಎಂಬೋ ಎರಡು ಭೇದಗಳು. ದೃಶ್ಯಕಾವ್ಯ ಎನ್ನೋದು ನಮ್ಮಲ್ಲಿ ನಾಟಕ ಎಂತ ರೂಢಿಯಲ್ಲಿದೆ. ಅದೃಶ್ಯಕಾವ್ಯ ಎಂಬೋದಿದೆಯಲ್ಲ ಇದು ನಾಟಕಕ್ಕೆ ಮೊದಲುಮಾಡಿದ ಮೇಲೆ ನಿಮಗೆ ಅಲ್ಪಸ್ವಲ್ಪ ತಿಳಿಯೋದು. ಅಂದರೆ ನಾಟಕ ಆಡೋದಕ್ಕೆ ಮನಸ್ಸು ಮಾಡಿ ನಾಲ್ಕಾರು ಜನರನ್ನು ಒಟ್ಟುಗೂಡಿಸಿ ಇನ್ನೇನು 'ನಮ್ಮ ನಾಟಕ' ಒಂದಾಯಿತು ಎಂಬೋ ಹೊತ್ತಿಗೆ ಅದೃಶ್ಯಕಾವ್ಯದ ತತ್ವಗಳು ನಿಮಗೆ ಗೋಚರವಾಗೋದು.

ಇದೇನು ೨೦ನೆಯ ಶತಮಾನದ ನಾಟಕವಲ್ಲ, ಸ್ವಾಮಿ! ಈಗೇನು ಬಣ್ಣ ಬಳಕೊಂಡರೂ ನಾಟಕ, ಇಲ್ಲದಿದ್ದರೂ ನಾಟಕ. ನಮ್ಮ ನಾಟಕದಲ್ಲಿ ಬಣ್ಣ, ಚಮ್ಕಿ ಡ್ರೆಸ್, ಇವಿಲ್ಲದಿದ್ದರೆ ಒಂದು ಜವಾನನ ಪಾತ್ರ ವಹಿಸೋದಕ್ಕೂ ಯಾರೂ ಸಿಕ್ಕೋಹಾಗಿಲ್ಲ. ಜವಾನ! ಸಾಮಾನ್ಯ ಜವಾನನಲ್ಲ ಸ್ವಾಮಿ, ಅವರು! ರಾಜಾ ಪಾರ್ಟು ಮಾಡೋನು ಹೊತ್ತಿಗೆ ಸರಿಯಾಗಿ, ಏಕೆ ಇನ್ನೂ ಮುಂಚೇನೇ, ತನ್ನ ಪೋಷಾಕು ಹಾಕಿಕೊಂಡರೆ ಅವನಿಗುಂಟು; ಇಲ್ಲದಿದ್ದರೆ ಇರೋ ನಾಲ್ಕು ಚಮ್ಕೀಕೋಟು, ಜವಾನರ ಪಾಲು. ಅವರು ಚಮ್ಕೀಕೋಟು ಸರ, ಎಲ್ಲಾ ಧರಿಸಿಕೊಂಡು ಎರಡು ಗಂಟೆ ಮುಂಚಿತವಾಗಿಯೇ ರಂಗಸ್ಥಳದಲ್ಲಿ ರಂಗಧಾಮರಾಗೋದೇ.

ನಮ್ಮ ನಾಟಕದ ಹೆಸರು ಕೇಳ್ತೀರೋ–ಸರಿ! ಈಗಿನ ಹಾಗೆ ಒಬ್ಬೊಬ್ಬರ ಹೆಸರಿಡೋದುಂಟೆ! ಯಾವ ಶುಭಕಾರ್ಯಕ್ಕೂ ದಂಪತಿಗಳು ಬೇಕು. ಬರೀ 'ನಾರಾಯಣ' ಎಂಬೋದು ಎಲ್ಲಾದರೂ ಉಂಟೆ?

ವೈಶ್ಯರನ್ನು ಕೇಳಿ; ಲಕ್ಷ್ಮೀನಾರಾಯಣ, ಸೀತಾರಾಮ–ಇವೇ ಶ್ರೇಷ್ಠ. ಹಾಗೇ ನಮ್ಮ ನಾಟಕದ ಹೆಸರು–ಪ್ರಮೀಳಾರ್ಜುನೀಯ. ಅಂದರೆ ನೀವು ಭಯಪಡುವ ಕೆಲಸವೇನೂ ಇಲ್ಲ; ಇಬ್ಬರೂ ಗಂಡಸರೇ.

ನಾಟಕ ನೂರಾದರೂ ಬರೆಯಬಹುದು; ಸಾವಿರಾರು ಚೀಟಿ ಅಚ್ಚು ಹಾಕಿಸಬಹುದು; ಹತ್ತಾರು ನಟರನ್ನು ತಯಾರ್ಮಾಡಬಹುದು. ಆದರೆ ಒಬ್ಬ ಅರ್ಜುನನಿಗೆ ಚಮ್ಕಿಡ್ರೆಸ್ ಒದಗಿಸಬೇಕಾದರೆ, ಆಗ ತಿಳಿಯುತ್ತೆ, ಹಿಂದೆ ಕಾಶೀಯಾತ್ರೆ ಏತಕ್ಕಾಗಿ ಬಹಳ ಶ್ರೇಷ್ಠ ಎಂತ ಹೇಳುತ್ತಿದ್ದರು ಎಂಬೋದು! ಬೆಳಗ್ಗೆಲ್ಲಾ ಹತ್ತಾರು ಮನೆ ಸುತ್ತಿ ಚಮ್ಕಿ ಡ್ರೆಸ್ ಸಂಪಾದಿಸಿದೆವು; ರಾತ್ರಿಯೆಲ್ಲಾ ಕಣ್ಣಲ್ಲಿ ಕಣ್ಣಿಟ್ಟುಕೊಂಡು ಬುಡ್ಡಿ ಬುಡ್ಡಿ ಕೆರೋಸಿನ್ ಖರ್ಚು ಮಾಡಿ ಟೈಲರಿಂಗ್ ಮಾಡಿದೆವು. ಇಷ್ಟಾದರೂ ರಾಜನಿಗೆ ಕಾಲಿಗಿದ್ದರೆ ತಲೆಗಿಲ್ಲ; ತಲೆಗಿದ್ದರೆ ಕಾಲಿಗಿಲ್ಲ.

'ಪಂಪನು ತನ್ನ ದೊರೆಯಾದ ಅರಿಕೇಸರಿಯನ್ನು ನಾಯಕನನ್ನಾಗಿ ಮಾಡಿ ವಿಕ್ರಮಾರ್ಜುನ ವಿಜಯವನ್ನು ಬರೆದನು'—ಎಂಬುದನ್ನೋದಿದರೆ ಕೆಲವರಿಗೆ ಎದೆ ಒಡೆಯಬಹುದು; ಆದರೆ ಒಬ್ಬ ಅರ್ಜುನನನ್ನು ತಯಾರ್ಮಾಡಲು ಪಂಪನನ್ನೇ ಬಿಟ್ಟಿದ್ದರೆ ಪಂಪನ ಗತಿ ಏನಾಗುತ್ತಿತ್ತೋ! ಹೇಗಾದರೂ ಆಗಲಿ, ಕಾವ್ಯವನ್ನು ಬರೆಯುವುದು ಅಷ್ಟು ಸುಲಭವಲ್ಲವೆಂದು ಎಲ್ಲರೂ ಒಪ್ಪಿಕೊಂಡಿದ್ದಾಗ್ಯೂ ನಮ್ಮ ಅರ್ಜುನನನ್ನು ನಾವು ತಯಾರ್ಮಾಡುವುದನ್ನು ಯಾರಾದರೂ ನೋಡಿದ್ದರೆ ನಮ್ಮ ಪೈಕಿ ಯಾರಿಗಾದರೂ ಒಬ್ಬನಿಗೆ 'ಅಭಿನಯ ಪಂಪ' ಎಂಬ ಬಿರುದನ್ನು ಕೊಡಬೇಕೆಂದು ಯಾರನ್ನಾದರೂ ಕೇಳಿಕೊಂಡೇ ಬಿಡುತ್ತಿದ್ದರು. ನಟನ ವೈಯಕ್ತಿಕ ಪ್ರತಿಭೆಯು ಪಾತ್ರವನ್ನು ದೇದೀಪ್ಯಮಾನ ಮಾಡುವುದು ಎಲ್ಲರಿಗೂ ವೇದ್ಯವಾಗಿದೆ–ಎಂಬ ವಿಚಾರದಲ್ಲಿ ನಮ್ಮ ಆಚಾರ್ಯರವರು ಸುಮಾರು ಮೂರುಗಂಟೆಗಳ ಕಾಲ, ವೇದೋಕ್ತವಾಗಿ ಉಪನ್ಯಾಸ ಕೊಟ್ಟರು. ನಮ್ಮ ನಟನನ್ನು ಅವರು ನೋಡಿದ್ದರೆ ಎಷ್ಟು ಸಂತೋಷ ಪಡುತ್ತಿದ್ದರೋ! ಡ್ರೆಸ್ ಪೂರ್ತಿಯಾಗಿ ಮಾಡಿಕೊಳ್ಳೋದರ ಒಳಗಾಗಿ ಆರು ಸಲ ಕಾಫಿ ಕುಡಿಯುತ್ತಿದ್ದ, ಬಾಯಲ್ಲಿ ಯಾವಾಗಲೂ 'ಅಲುಕಲೆಲ್ಲ' ಹಾಡಿಕೊಳ್ಳುತ್ತಾ ಇರೋದೇ ಅವನ ಚಿತ್ತಸ್ಥೈರ್ಯಕ್ಕೆ ಸಾಕ್ಷಿ.

ಏನೋ ಹೇಗಾದರೂ ಮಾಡಿ ಹತ್ತು ರಾಜರನ್ನೊಪ್ಪಿಸಬಹು ದಾಗಲಿ, ಒಂದು ರಾಣೀನ ಒಪ್ಪಿಸೋದು ಮಹಾ ಕಷ್ಟ. ಅದರೊಳಗೂ ಇದು ಗಂಡು ರಾಣಿ ಬೇರೆ! ಎದುರು ಮನೆಯಲ್ಲಿ ಹುಡುಗೀಗೆ ಮದುವೆ ಯಾಗಿತ್ತು. ಮಾವನ ಮನೆಯಿಂದ ಸೊಸೆಗೆ ಬಂದ ಬೆಂಗಳೂರು ಅರಳೇ ಪೇಟೆ ಸೀರೆ ಬಂದ ಹೊರತು ಈ ಗಂಡು ರಾಣಿ ಬಣ್ಣ ಬೊಳಕೊಳ್ಳದೆ ಕುಳಿತಳು. ಧರ್ಮರಾಯ ಬಂದ, ಪಾಂಡವರೆಲ್ಲಾ ಬಂದರು; ಕೃಷ್ಣ ಬಂದ; ಪ್ರಮೀಳೆಯ ಮಕ್ಕಳೆಲ್ಲಾ ಬಂದರು. ಯಾರು ಬಂದು ಏನು ಹೇಳಿದರೂ ಏನೂ ಸಾಗಲಿಲ್ಲ. ಕೊನೆಗೆ ಎದುರು ಮನೆ ರಾಮರಾಯನೇ ಬಂದ. ಏನಾದರೇನು, ರಾಮರಾಯ ತನ್ನ ಮಗಳ ಸೀರೆ ತಂದು ಕೊಡೋ ತನಕ ಪ್ರಮೀಳೆ ಪ್ರಸನ್ನವಾಗಲಿಲ್ಲ.

ಒಳಗಡೆ ಡ್ರೆಸ್ಸು ಮಾಡೋದಕ್ಕೆ ಮೊದಲು ಮಾಡಿದರೆ ಹೊತ್ತು ಗೊತ್ತಾಗೋದೇ ಇಲ್ಲ. ಬಂದೋರೆಲ್ಲಾ ಹೊತ್ತಾಯಿತಿರಿ! ಎಂತಾರೇ ಹೊರತು ನಮಗೇನು ಇನ್ನೂ ಒಂದು ಗಂಟೆ ಇದ್ದ ಹಾಗೇ ತೋರುತ್ತೆ. ಆಚೆನವರು ಗ್ರೀನ್ ರೂಮು ( Green Room ) ಗೆ ಬರೋದು, ನಮ್ಮನ್ನ ಗೋಳಾಡಿಸಲಿಕ್ಕೆ ಎಂತ ತೋರುತ್ತೆ. ಮೀಸೆಗಳು, ಗಡ್ಡಗಳು, ಬಾಲಗಳು —ಎಲ್ಲಾ ಕಟ್ಟಿಕೊಂಡಾಯಿತು. ನಾಟಕ ಒಂಭತ್ತೂವರೆಗೆ ಎಂದಿದ್ದೆವು; ಆದರೇನು ಮಾಡೋದು? ಎಷ್ಟು ಬೇಗ ಕೆಲಸ ಮಾಡಿದರೂ ಹನ್ನೊಂ ದಾಯಿತು. ನೋಡೋಕೆ ಬಂದೋರು ನಾಲ್ಕೂವರೆ ಜನ-ನಾಲ್ಕು ಮಂದಿ, ಒಬ್ಬ ಹುಡುಗ! ಏನಾದರೇನು, ಆಡುತ್ತೇವೆಂದು ಹೇಳಿದ್ದೇವೆ; ಕುರ್ಚಿ-ಬೆಂಚುಗಳಿಗಾದರೂ ಆಡಿಯೇ ಬಿಡುತ್ತೇವೆ ಎಂದು ನಿರ್ಧಾರ ಮಾಡಿಕೊಂಡು ಅಲ್ಲಿ ನೆರೆದಿದ್ದ ನಾಲ್ಕೂವರೆ ಜನಕ್ಕೆ ತಿಳಿಸಿಬಿಟ್ಟೆವು. ಅವರಿಗೇನು ಸಂತೋಷವಾದ ಹಾಗೆ ಕಾಣಿಸಲಿಲ್ಲ. 'ಆಡಿಬಿಡಿ, ದೇವ್ರು, ನಾವು ಕಾವಲುಗಾರರು. ಬೆಂಚು, ಕುರ್ಚಿ ನೋಡಿಕೊಳ್ಳೋದಕ್ಕೆ ಕಳಿಸಿ ದ್ದಾರೆ. ಬೇಗ ಮುಗಿಸಿಬಿಟ್ಟರೆ ಬಾಗಿಲು ಜೋಪಾನ ಮಾಡಿ ಹೋಗ್ತೇವೆ.'



# ಕಲೆ ಮತ್ತು ಜೀವನ ~ ~ ಟಿ. ರಾಜಿನ್

ಕಲೆ ಎಂದರೇನು? ಈಗಿನವರಾದ ನಾವು ಅದನ್ನು ಹೇಗೆಂದು ಕಾಣುತ್ತೇವೆ? 'ಕಲೆಯು ಉಂಡುಟ್ಟು ಸುಖಬಡುವ, ದೈವುಳ್ಳವರು ಕಾಲಕಳೆಯಲು ಕೈಕೊಳ್ಳುವ ಒಂದು ವಿನೋದದ ಆಟ, ಒಂದು ಅಸ್ವ ಕಸಬು;–ಮೈದಣಿಯೆ ದುಡಿಯುವ ವ್ಯವಹಾರವಂತನಿಗೂ ಕಲೆಗೂ ಏನೂ ಸಂಬಂಧವಿಲ್ಲ;' ಹೀಗಿದೆ ಈಗಿನ ಭಾವನೆ. ಈ ಮಾತು ಗಾಂಧೀಜಿ ಯವರಿಗೂ ಟಾಗೋರರವರಿಗೂ ಆದ ಒಂದು ಪ್ರಖ್ಯಾತ ವಿವಾದದಲ್ಲಿ ಎದ್ದು ಮೂಡಿ ಕಂಡುಬಂದಿತು. ಟಾಗೋರರ ವಾದ ಹೀಗಿತ್ತು: 'ಸಾಮಾನ್ಯ ಮನುಷ್ಯನ ಸಾಧಾರಣ ಮನಸಿಗೂ ಬಾಳುವೆಯಲ್ಲಿ ಕೆಲ ವೊಂದು ನಿಮಿಷ ಕೇವಲ ಉಪಜೀವನ ಪ್ರಯೋಜನಕಾರಿಯಾದ ಕಾರ್ಯ ಗಳ ಸೀಮೆಯನ್ನು ಮೀರಿ ಪ್ರಪಂಚದ ಸೌಂದರ್ಯಾನುಭವದ ವಿಲಾಸ ದಲ್ಲಿ ಮಗ್ನವಾಗುವ ಲವಲವಿಕೆ ಸ್ವಾಭಾವಿಕವಾಗಿದೆ.' ಇದಕ್ಕೆ ಪ್ರತಿ ವಾದವಾಗಿ ಗಾಂಧಿಜಿಯವರು ಕೊಟ್ಟ ಉತ್ತರವಿದು: 'ಸರಿ; ಇಂದಿನ ಕೆಲಸ ಬಿಟ್ಟು ನಾಳಿನದನ್ನು ಬಣ್ಣಿಸಿ ಮರುಳಾಗುವುದೆಂದರೆ ಬಗಲೊಳ ಗಿನದನ್ನು ಬಿಟ್ಟು ಮುಗಿಲೊಳಗಿನದಕ್ಕೆ ಕೈಹಾಕಿದಂತೆ. ಕವಿಗಳೇನೋ ಉಷಃಕಾಲದಲ್ಲಿ ಉದಯರಾಗವನ್ನು ಹಾಡುವ ಹಕ್ಕಿಗಳ ಚಿತ್ರವನ್ನು ವರ್ಣಿಸಿ ಜನರ ಮನಸ್ಸನ್ನು ಅತ್ತಲೆಳೆಯಲೆಳಿಸಬಹುದು. ಆದರೆ ಎಷ್ಟು ಚಪ್ಪರಿಸಿದರೂ ಕಸುವೇ ಇಲ್ಲದ್ದರಿಂದ ರೆಕ್ಕೆಗಳನ್ನೂ ಅಲ್ಲಾಡಿಸಲಾರದ ಹಕ್ಕಿಗಳ ದುಃಖವನ್ನು ಕಣ್ಣಾರೆ ಕಂಡವನಿಗೆ ಈ ಚಿತ್ರ ಸರಿಬಾರದು. ಹಿಂದುಸ್ಥಾನದ ಆಕಾಶದಲ್ಲಿ ಹಾರಬೇಕಾಗಿರುವ ನರಪಕ್ಷಿಗೆ ಪ್ರತಿ ಸಾಯಂಕಾಲ ನಿದ್ರೆಯ ನಟನೆ ಮಾಡುವಂಥ ಕಾಲಕ್ಕೂ ಇರುವ

ಉತ್ಸಾಹವು, ಆ ಪಕ್ಷಿ ಅನಿವಾರ್ಯವಾಗಿ ಏಳಬೇಕಾದ ಉಷಃಕಾಲಕ್ಕೆ ಇರುವದಿಲ್ಲ.' ಅಂತೂ ಏನು? ಗಾಂಧಿಜಿಯವರ ಹೇಳಿಕೆಯಂತೆ ಹೊಟ್ಟೆ ಬಟ್ಟೆಯ ನಿರ್ವಾಹದ ಕೇವಲ ಆರ್ಥಿಕ ವಿಚಾರವೇ ಸದ್ಯಕ್ಕೆ ಬೇಕಾಗಿದೆ. 'ನಿರುದ್ಯೋಗಿಗಳಾಗಿ ಅರೆಹೊಟ್ಟೆಯಿಂದ ಬಾಳುವ ಜನಕ್ಕೆ ಗ್ರಾಹ್ಯವಾಗುವಂತೆ ದೇವರು ಪ್ರತ್ಯಕ್ಷನಾಗುವ ಧೈರ್ಯವನ್ನೇ ಮಾಡಿದ್ದಾದರೆ ಅದು 'ಕೂಲಿಯ ಕೆಲಸ' ಮತ್ತು 'ಕೂಲಿಗಾಗಿ ನಿಶ್ಚಿತವಾದ ಅನ್ನ' ಈ ಸ್ವರೂಪದಲ್ಲಲ್ಲದೆ ಬೇರೆಯಲ್ಲ.' ಎಂದು ಅವರೇ ಒಂದೆಡೆಗೆ ಹೇಳಿದ್ದಾರೆ.

ಕಲೆಯ ಬಗ್ಗೆ ಈಗಿನವರ ದೃಷ್ಟಿ ಹೀಗಿದೆ; ಎಷ್ಟೋ ಜನರು ಇಂತು ಕಲೆಯನ್ನು ತುಚ್ಛತೆಯಿಂದ ಕಾಣುತ್ತಾರೆ. ಅವರ ಮಟ್ಟಿಗೆ ಕಲೆಯೆಂದರೆ ಜೊಳ್ಳು ಮನಸವರ ಅಧಿಕಪ್ರಸಂಗವಾಗಿ ತೋರುವದೆಂದರೆ ತಪ್ಪಾಗಲಾರದು. 'ಬದುಕಿಗೆ ಹಾಕಿದ ಹುಸಿ ಒಪ್ಪ ಈ ಕಲೆ; ಜೀವನದ ಅತ್ಯಗತ್ಯವಾದ ಕರ್ಮಜಾಲದಿದಿರು ಕಲಾಪ್ರಪಂಚವು ಹುಡುಗೆಯರ ಗೊಂಬೆಯಾಟದೊಳಗಿನ ಬೇಗಡಿಯ ಬೆಡಗಿನ ಒಡವೆ ವಸ್ತುಗಳ ಏಸ್ತಾರದಂತೆಯೆ ಸರಿ,' ಎಂದು ಸಾಮಾನ್ಯವಾದ ತಿಳುವಳಿಕೆ. 'ಬ್ರಿಟಿಶ್ ಏನ್ಸೈಕ್ಲೋಪೀಡಿಯಾ' ಎಂಬ ಆಂಗ್ಲಭಾಷೆಯ ಸರ್ವಜ್ಞಾನದ ಸರ್ವಜ್ಞಕೋಶವು ಎಂಥ ಮಾತಿನಲ್ಲಿಯೂ ಕ್ವಚಿತ್ತಾಗಿಯೆ ಎಡವಿದ್ದರೂ ಕಲೆಯ ಬಗ್ಗೆ ಮೇಲ್ಕಾಣಿಸಿದ ಬಗೆಯ ತಪ್ಪುಕಲ್ಪನೆಗೂ ಎಡೆಗೊಟ್ಟಿದೆ. ಆ ಕೋಶದಲ್ಲಿ 'ಸೌಂದರ್ಯಶಾಸ್ತ್ರ' (Aesthetics) ವನ್ನು ಕುರಿತು ಬರೆಯುವಾಗ ಅತ್ಯುಪಯುಕ್ತವಾದ ವಿಪುಲಜ್ಞಾನದೊಂದಿಗೆ ಕಲೆಯೆಂದರೆ '**ಜೀವನದ ವಸ್ತ್ರಕ್ಕೆ ಜೋಡಿಸಿದ ಹುಸಿ ಜರದ ಸೆರಗು; ಕೆಲವೊಂದೇ ಜನರ ಕ್ರೀಡೆ**' ಎಂಬ ಮಾತೂ ಸೇರಿಕೊಂಡಿವೆ.

ಈ ಬಗೆಯ ವಿಚಾರಪರಂಪರೆಯು ರಾಷ್ಟ್ರೀಯ ಭಾವನೆಯೊಡನೆ ನುಸುಳಾಡುವಾಗ ಬಹಳೇ ಹಾನಿಗೆ ಕಾರಣವಾಗುವದು. ಕಲೆಯ ಬೆಲೆ ಕಡಿಮೆ ಮಾಡಿ ಮಾತನಾಡುವ ಟೀಕಾಕಾರರ ಅಭಿಪ್ರಾಯದಂತೆಯೆ ಕಲೆ ಇರುವದೆಂದು ಒಪ್ಪಿಕೊಂಡ ಪಕ್ಷಕ್ಕೆ,—ಜೀವನವ್ಯವಹಾರದ ಮೈಸುತ್ತ

ಜೋತಾಡುವ ಬೆಡಗಿನ ಜಾಲರಿಯಂತಿರುವ ಈ ಕಲೆ—ಒಳ್ಳೆಯು ಕೆಲಸ ವನ್ನಾವುದನ್ನೂ ಮಾಡಬರದವರು ಹೂಡಿದ ಹುಡುಗಾಟದಂತಿರುವ ಈ ಕಲೆ—ಬಾಳುವೆಯೊಳಗಿಂದ ಅಪೂಟ ಇಲ್ಲದಾದರೆ ಯಾವ ರಾಷ್ಟ್ರವೇನೂ ಹಾಳಾಗಿ ಹೋಗಲಾರದು ಎಂಬುದು ನಿಜವೆ. ಆದರೆ ಆಮೂಲವಾಗಿ ವಿಚಾರಿಸಿದಲ್ಲಿ ಜೀವನಕ್ಕೂ ಕಲೆಗೂ ಒಳ್ಳೆಯು ಮರ್ಮದ ಹತ್ತುಗಡೆ ಯಿದೆ. ಕಲೆಯು ಮಾನವನ ಉತ್ಪಾದಕ ಜೀವನ ಧರ್ಮಗಳಲ್ಲೊಂದಾ ಗಿದೆ. ಅವನ ಅಭ್ಯುದಯ ನಿಶ್ರೇಯುಸಗಳೆರಡನ್ನೂ ರೂಪಗೊಳಿಸುವ, ಪರಿಣಾಮ ಪರಿಪಾಕಗಳನ್ನುಂಟುಮಾಡುವ ಕರ್ಮಕೌಶಲವು ಅದರ ದಾಗಿದೆ. ಜೀವನವು ಜೀವದ ಆವಿಷ್ಕರಣವಲ್ಲದೇನು ? ಮತ್ತು ಕಲೆ ಎಂದರಂತೂ ಜೀವಭಾವಗಳ ಆವಿಷ್ಕರಣ; ಅಭಿ-ನಯುವಲ್ಲದಿದ್ದರೆ ಅದಕ್ಕೆ ಸಾರ್ಥಕತೆಯೇ ಇಲ್ಲ. ಜೀವನವನ್ನು ಸೌಂದರ್ಯದ ಎರಕದಲ್ಲಿ ಹೊಯ್ಯುವ ಕುಶಲಕರ್ಮವೇ ಕಲೆ. ಜೀವನದಲ್ಲಿ ಕಲೆಯು ಪ್ರವೇಶ ಮಾಡುವದು ಈ ದ್ವಾರದಿಂದ. ಮಾತು, ನಡತೆ, ಭಾವಗಳ ಆವಿಷ್ಕರಣ ದಲ್ಲಿ ನಾವು ಒಂದಿಷ್ಟೂ ಕುಶಲತೆಯನ್ನು ತೋರ್ಪಡಿಸದಿದ್ದರೆ ಜೀವನವೇ ಕಟ್ಟಾಗುವದೇನೂ ಇಲ್ಲ; ಜಡ ಮೂಢ ಪ್ರಾಣಿಗಳಂತೆ ರಸವಿಲ್ಲದೆ, ಲಾಲಿತ್ಯವಿಲ್ಲದೆ, ಹಾಳುಕಳೆ ಹೊದ್ದುಕೊಂಡು, ಮಾನವ ಗೌರವಕ್ಕೆ ತಲೆಯೆತ್ತದ ಯಾವುದೋ ರಸಾತಳದ ಕ್ರಿಮಿಗಳಂತೆ ನಮ್ಮ ಜೀವನವೂ ಹೊಟ್ಟೆಹೊಸದು ಇದ್ದುಕೊಳ್ಳಬಹುದು. ಸುತ್ತಲಿನ ಸೃಷ್ಟಿಯಲ್ಲೆಲ್ಲ ಒಡಮೂಡಿ ತೋರುವ ರೂಪಸೃಷ್ಟಿಯ ಮಾಟ ಮತ್ತು ಹೊಂದು ಗೂಡಿಕೆಗಳನ್ನು ಮಾನವನು ತನ್ನ ಜೀವನದಲ್ಲಿಯೂ ಅಳವಡಿಸಿ ಒಪಂಬ ಡಿಸಿಕೊಳ್ಳಬೇಕೆಂಬುದು ಅವನ ಹುಟ್ಟುಗುಣಗಳಲ್ಲೊಂದು. ಅದರಾಟಕ್ಕೆ ನಾವು ಎಡಗೊಡಬೇಕೇ ? ಇಲ್ಲವೇ ? ಎಲ್ಲೆಲ್ಲಿ ಜೀವನಾವಿಷ್ಕಾರವಿದೆಯೊ ಅಲ್ಲಲ್ಲಿ ಈ ಮಾಟದ ಹೊಂದೂಗೂಡಿಕೆಯ ಛಂದದ ಎಡಬಿಡದ ಹವಣಿಕೆ ಯಿದೆ; ನಾಡಿಸ್ಪಂದನವೇ ಇರಲಿ, ಹೃದಯುದುಸಿರಾಟವೇ ಇರಲಿ, ತಪ್ಪಡಿ ಯಿಡುತ್ತ ಕೂಸಾಟವಾಡುವ ಕಂದಮ್ಮಗಳ ತೊದಲ್ನುಡಿಯ ತಿಲ್ಲಾ ಣವೇ ಇರಲಿ, ಪ್ರೌಢಕವಿಯ ಜಾಣ್ನುಡಿ ನಾಣ್ನುಡಿಗಳು ಛಂದಕ್ಕೆ

ಹೊಂದಿಬರುವ ಪ್ರವೀಣವಾಣಿಯೇ ಇರಲಿ ಎಲ್ಲೆಡೆಗೂ ಜೀವನದ ನಡಿಗೆಯಲ್ಲಿ ಒಂದು ಕುಣಿತವಿದೆ.

ಒಟ್ಟಿನಲ್ಲಿ ಹೇಳುವದಾದರೆ ಛಂದದ ಜೀವನಕ್ಕೆ ಮೆಚ್ಚಿನ ಅಚ್ಚುಗಳನ್ನು ನಿರ್ಮಿಸುವದೇ ಕಲಾಪ್ರವೃತ್ತಿಯ ಕೆಲಸ. ಅಂತೆಯೇ ಕಲೆಯನ್ನು ಕಡೆಗಣಿಸಿ ಕಿಗ್ಗಳಮಾಡಲೆಣಿಸುವದು ಮಹಾಪಾತಕಗಳಲ್ಲೊಂದು, ಎಂದು ಗಣಿಸುವದಲ್ಲದೆ ಹಾಗೆ ಮಾಡುವವರನ್ನು ಕುರಿತು 'ಅಯ್ಯೋ ಪಾಪ !' ಎನ್ನದೆ ಗತಿಯಿಲ್ಲ. ಈ ಕಲೆಯು ಮಾನವ ಹಿತವನ್ನು ಪ್ರತ್ಯಕ್ಷವಾಗಿ ಮಾಡುವಂತೆ ತೋರದಿರಬಹುದು; ಆದರೂ ಅದು ಅಪ್ರತ್ಯಕ್ಷವಾಗಿ ಸಾಧಿಸುವ ಹಿತವು ಅಳತೆಗೂ ಮೀರಿದೆ. ಚೆಲುವನ್ನು ಕಾಣುವ ಕಣ್ಣನ್ನು ಚಿತ್ರಕ್ಕೆ ಕೊಟ್ಟು ಬಾಳಿನ ಮೇಲೆ ಬೆಳಕು ಬೀರುವದು ಈ ಕಲೆ.

ಮಧ್ಯಾನ್ಹದ ಬಿಸಿಲು ಮೈ ಕಾಯಿಸದಂತೆ ನೆತ್ತಿಗೊಂದು ನೆರಳಿನ ಚಾಟು ಕಟ್ಟಿಕೊಡುವದು ಪುಣ್ಯದ ಕೆಲಸವೇನೊ ಸರಿಯೇ. ಆದರೆ ಮಾನವ ಹೃದಯಕಮಲವನ್ನರಳಿಸಿ ಕರುಣೆ, ಪ್ರೀತಿ, ಶಾಂತಿರಸಗಳ ಪ್ರವಾಹಗಳನ್ನು ತಡೆಯಿಲ್ಲದಂತೆ ಎಡೆಬಿಡದೆ ಹರಿಯಿಸಹಚ್ಚಿ, ಸತ್ಯಸಾಕ್ಷಾತ್ಕಾರಕ್ಕಾಗಿ ಅವನೊಳಗಿನ ಸಾಕ್ಷಿಪುರುಷನಲ್ಲಿ ವೀರೋತ್ಸಾಹವನ್ನು ವರ್ಧಿಸುವದು ಅದಕ್ಕೂ ಹೆಚ್ಚಿನ ಪುಣ್ಯದ ಕೆಲಸವಲ್ಲವೆ ? ದಿನದ ಪ್ರಪಂಚವನ್ನು ಸಾಗಿಸಲು ನೆರವಾಗಿ, ಅವನ ಹೊಟ್ಟೆ ನೆತ್ತಿಯನ್ನು ನೋಡಿಕೊಂಡು ಅವನಿಗೆ ಸುಖವಾಗಿ ನಿದ್ರೆ ಬರುವಂತೆ ಮೈ ಕೈ ನೋಡಿಕೊಳ್ಳುವದು ಉಪಕಾರದ ಕೆಲಸವೇ ಸರಿ. ಆದರೆ ಮಾನವನ ಊಹಾಶಕ್ತಿಯನ್ನು ಉದ್ದೀಪಿಸಿ, ದೇವನ ಸುಂದರ ಸೃಷ್ಟಿಯ ರಮಣೀಯತೆಗೆ ಮನಸೋಲುವಂತೆ ಎದೆ ಹದಗೊಳಿಸಿ, ಸೃಷ್ಟಿಯ ಅದ್ಭುತರಮ್ಯತೆಗೆ ಬೆರಗು ಬೆಕ್ಕಸಬಟ್ಟು ಬರುವ ಆನಂದವನ್ನು ಮಾತಿನಲ್ಲಿ ಬಿಚ್ಚಿ ಹೇಳಲು ಬರಲಿ ಬಿಡಲಿ, ಆದರೂ ಆ ಅನುಭವದ ಆವೇಶದಲ್ಲಿ ತನ್ಮಯನಾಗುವಂತೆ ಸಂಸ್ಕಾರ ಕೊಡುವದು ನಿಶ್ಚಯವಾಗಿಯೂ ಪರಮ ಹಿತದ ಕೆಲಸ. ಕವಿಗಳು, ಶಿಲ್ಪಚತುರರು ಮಾಡುವ ಕುಶಲಕರ್ಮವೆ ಇದಾಗಿದೆ.

ಇಷ್ಟೇ ಅಲ್ಲ, ಜೀವ ಭಾವಗಳನ್ನು ಉದ್ದೀಪಿಸುವ ಈ ಕುಶಲ ಕರ್ಮವು ದೀಪದಿಂದ ದೀಪ ಹಚ್ಚಿದಂತೆ ಉದ್ದಿಪ್ತ ಜೀವಗಳಿಂದ ಇತರ ಜೀವಗಳನ್ನು ಉದ್ದೀಪಿಸಲನುಗೊಳಿಸುವದು. ಕಲೆಯಿಂದ ನಿರ್ಮಲ ವಾದ ಇಚ್ಛಾಶಕ್ತಿಯು ಕೃತಿಯಲ್ಲಿ ಕೊನೆಗಾಣುವದು. ಇತಿಹಾಸದ ಮಣ್ಣಿನಿಂದ ಶಿಲ್ಪಿಯು ಮನುವಿನ ವಿವಿಧಾವತಾರದ ಮೂರ್ತಿಗಳನ್ನು ರಚಿಸುವನು. ವಿವಿಧ ಸಂದರ್ಭಗಳಲ್ಲಿ ಪ್ರಪಂಚದ ವಿವಿಧ ಪ್ರಾಂತಗಳಲ್ಲಿ ಮಾನವನ ಅಂತಃಕರಣವು ತೋರಿದ ಅನಂತ ಲೀಲಾಭಂಗಿಗಳನ್ನು ಇವನು ನಿರೂಪಿಸುವನು. ಇಂತು ಈ ರೂಪದರ್ಶನದಿಂದ ವಾಚಕ ಸಾಮಾಜಿಕ ರಲ್ಲಿ ಪರಗತ ಸುಖದುಃಖಸಂವೇದನೆಗೆ ಅನುಕೂಲವಾದ ಅಂತಃಕರಣ ವನ್ನು ಜಾಗೃತಗೊಳಿಸಿ ಮಾನವ ಸತ್ವವು ದಿವ್ಯಸ್ವರೂಪದಲ್ಲಿ ಮೈದೋರುವಂತೆ ಮಾಡುವನು. ಹೀಗಾಗಿ ಮಾನವನ ದಿವ್ಯೋನ್ನತ ಭಾವಗಳಲ್ಲಿ ಸಹಾನುಭೂತಿಯಿಂದ ಸಮರಸವಾಗಬಲ್ಲ ಸಾತ್ವಿಕರ ಸಂಖ್ಯೆಯು ಹೆಚ್ಚಾಗುವದು. ತನ್ನಲ್ಲಿ ಎಲ್ಲರ ಗುಣಗಳನ್ನು ಎಲ್ಲರಲ್ಲಿಯೂ ತನ್ನ ಜಾತಿಯ ಲಹರಿಯನ್ನು ಇಂಥ ಸಂಸ್ಕಾರವಂತ ಸಹೃದಯನು ಕಾಣುವನು. ಹಿಗ್ಗಿದ ಆತ್ಮವೇ ಮಹಾತ್ಮ್ಯದ ಹಾದಿಯಾಗಿ, ಸಹಾನು ಭೂತಿಯೆ ಸಹಕಾರ್ಯದ ಸಾಧನವಾಗುವದು. ಮಾನವನ ಉತ್ಕ್ರಾಂತಿ ಯಲ್ಲಿ ಸೌಂದರ್ಯಾನುಭವದ ಸ್ಥಾಯಿಭಾವವು ಅಪೂರ್ವರಸಾವೇಶ ವನ್ನುಂಟುಮಾಡಿ ನವಶಕ್ತಿಗಳನ್ನು ಕೂಡಲಿದೆಯೆಂದು ಡಾ. ಜಯರಾಮು ಕಜಿನ್ಸ ಇವರು ಒಂದೆಡೆಗೆ ಹೇಳಿದ್ದಾರೆ. 'ಇಂಗ್ಲೆಂಡಿನ ಔದ್ಯೋಗಿಕ ಪಟ್ಟಣಗಳಲ್ಲೊಂದರ ಒಂದು ಶಾಲೆಯಲ್ಲಿ ಜ್ಞಾನಿಯೊಬ್ಬನು ಬಾಲಬಾಲಿ ಕೆಯರಾದ ವಿದ್ಯಾರ್ಥಿಗಳಿಗೆ ನಿಸರ್ಗಸೌಂದರ್ಯವನ್ನು ಅನುಭವಿಸುವ ಹದವನ್ನೂ ಅದನ್ನು ಮನದಲ್ಲಿ ಸ್ಥಿರಸಂಸ್ಕಾರವಾಗಿ ನಿಲ್ಲಿಸಿ ಜೀವನದ ವಿವಿಧಾಂಗಗಳಲ್ಲಿ ಅದನ್ನು ಆವಿಷ್ಕರಿಸುವ ಕುಶಲತೆಯನ್ನೂ ಕಲಿಸಲು ಹವಣಿಸುತ್ತಿರುವದನ್ನು ನಾನೊಮ್ಮೆ ಕಂಡೆನು. ಅದನ್ನು ಕಂಡು ಕಿಂಚಿತ್ ವಿಚಿತ್ರಚಮತ್ಕೃತಿಯಿಂದ ಅವನನ್ನು ತಟ್ಟನೆ ನಾನು ಕೇಳಿದೆ: 'ಇದೆಲ್ಲ ಕಲಿಕೆಯಿಂದ ವ್ಯವಹಾರಿಕವಾದ ತಾತ್ಕಾಲಿಕ ಹಿತವೇನು ? ಈ ಹೂದೋಟ

ಗಾರಿಕೆ, ಈ ಬಣ್ಣದ ಬೊಂಬೆ ಬರೆಯುವಿಕೆ ಕಲಿತ ಈ ಹುಡುಗ-ಹುಡುಗಿ ಯರು ಬೇಗನೆ ಯಂತ್ರಶಾಲೆಗಳನ್ನೊ ಕಮ್ಮಟದ ಮನೆಗಳನ್ನೊ ಹೊಕ್ಕು ಹೊಟ್ಟೆ ಹೊರೆಯಬೇಕಾದಾಗ ಈ ಕುಸುರಿನ ಪ್ರಯೋಜನವೇನಾದೀತು?' ಅದಕ್ಕೆ ಆ ಜ್ಞಾನಿಯು ನನ್ನ ಭಾವವನ್ನು ತಟ್ಟನೆ ತಿಳಿದು ಉತ್ತರ ಕೊಟ್ಟನು. 'ಹೌದು. ನಾನು ಕಲಿಸುತ್ತಿರುವದು ಬಂಡುಗಾರರಿಗೆ, ಗುಲಾಮರಿಗಲ್ಲ.' ಅವನು ಹೇಳಿದುದು ಸರಿಯೆ. ಅವನ ವಿದ್ಯಾರ್ಥಿಗಳು ಅಂದಗೆಟ್ಟ ಅಸಡ್ಡಾಳ ಪರಿಕರದ ಭಯಾನಕವಾದ ಕರ್ಮಶಾಲೆಗಳಲ್ಲಿ ಬಾಯಿ ಮುಚ್ಚಿ ಮೊದ್ದು ಕುರಿಗಳಂತೆ ಸುಮ್ಮನೆ ದುಡಿಯುವವರು ಎಂದೂ ಆಗಲಾರರು. ಆ ವಿದ್ಯಾರ್ಥಿಗಳ ನಿಕೃಷ್ಟ ಮನೆಗಳಲ್ಲಿಯೂ ಮಾಡಿದ ಸಿಂಗರದ ಹೆಜ್ಜೆಯು ಅವರ ದುಡಿತದ ದೀನಜೀವನವನ್ನು ಪಲ್ಲಟಿಸಿ ಕಲೆಯ ಐಂದ್ರಜಾಲಿಕ ಚೆಲುವಿನ ಚಿಗುರನ್ನೊಡೆಯಸದೆ ಬಿಡ ದೆಂಬುದರ ಚಿನ್ಹೆಯು ಅದಾಗಲೆ ನನಗೂ ಕಾಣುತ್ತಿತ್ತು.'

ಹಿಗೆಲ್ಲನೆಂಬ ಜರ್ಮನಾ ತತ್ವಜ್ಞಾನಿಯು ಹೇಳಿರುವದೇನಂದರೆ 'ರಾಷ್ಟ್ರಗಳು ತಮ್ಮ ಹೃದಯದ ಭವ್ಯಭಾವಗಳನ್ನೂ ಪ್ರತಿಭೆಯ ದಿವ್ಯ ದರ್ಶನಗಳನ್ನೂ ತಮ್ಮ ಕಲಾಕೃತಿಗಳಲ್ಲಿಯೆ ಒಪ್ಪಿಸಿರುವವು. ಅವುಗಳ ಧರ್ಮದ ಮತ್ತು ಜ್ಞಾನದ ಭಾಂಡಾರಗಳನ್ನು ತೆರೆಯಲು ಬಹುತರವಾಗಿ ಆಂಗ್ಲರ ಲಲಿತಕಲೆಯ ಬೀಗದ ಕೈಯಿಲ್ಲದೆ ಬರದು. ಕೆಲವು ರಾಷ್ಟ್ರಗಳ ಭಂಡಾರಕ್ಕಂತೂ ಅದೊಂದೆ ಬೀಗದ ಕೈ.' ಹೀಗಿರು ವದರಿಂದ ಆ ಆ ರಾಷ್ಟ್ರದ ಕಲೆಯಲ್ಲಿ ಅಲ್ಲಲ್ಲಿಯ ಜನಸಂಕುಲದ, ಶೀಲದ ಮುದ್ರೆಯೆ ಮೂಡಿರುತ್ತದೆ. ಅಂತೆಯೆ ಇಂಥ ಕೃತಿಸಮೂಹವು ಆ ಆ ರಾಷ್ಟ್ರದಲ್ಲಿ ತಲೆತಲಾಂತರವಾಗಿ ಬರುವ ಪೈತ್ರಿಕ ಆಸ್ತಿಯಂತೆ ಅಭಿಮಾನ ಧನವಾಗಿ ಉಳಿಯುವದು. ರಾಷ್ಟ್ರಜೀವನದ ಕೋಟೆ ಕೊತ್ತಳವಾಗು ವದು; ಮಾನದ ಪತಾಕಿಯಾಗುವದು. ಶೇಕ್ಸಪಿಯರನ ಹೆಸರು ಯಾರು ಎಲ್ಲಿಯೂ ಉಚ್ಚರಿಸಿದ್ದನ್ನು ಕೇಳಿದೊಡನೆಯೆ ಆಂಗ್ಲಜನರಿಗೆ ಏನು ಸಂಭ್ರಮ! ಏನು ಉತ್ಸಾಹ! ಏಕೆ? ಆ ಜೀನ ಆಂಗ್ಲಜೀವನದ ಒಂದು ಮಹಾಕೃತಿ. ಯಾವನಾದರೂ 'ರಿನೇಸಾನ್ಸ' ಚಿತ್ರಕಾರನ ಅಥವಾ

ವೈಕೆಲ ಎಂಜೆಲೋವಿನ ಹೆಸರನ್ನೆತ್ತಿದೊಡನೆ 'ನೇಪಲ್ಸ'ರ ನಾಗರಿಕನಿಗೆ ಏನು ತೃಪ್ತಿ! ಏನು ಉಬ್ಬು! ಜರ್ಮನ್ ಜನರಿದಿರು ಅವರ ಮಹಾಕವಿಯಾದ ಗೈಟೆಯನ್ನು ಜರೆದಾಡಬೇಕಾದರೆ ಹಂಗುದೊರೆದ ಧೈರ್ಯವೇ ಬೇಕು. ಒಂದು ಜನರೆಂಬ ಭಾವದಿಂದ ಜನವನ್ನು ಒಂದುಗೂಡಿಸಿ ಅಚಲವಾಗಿ ನಿಲ್ಲಿಸುವ ಸ್ಥೈರ್ಯಧೈರ್ಯಗಳಿಗೆ ಸದ್ ಹೇತುವನ್ನು ಪೂರೈಸಲು ರಾಷ್ಟ್ರೀಯ ಧರ್ಮವೊಂದೇ ಸಮರ್ಥವಾಗಿದೆ. ಅದರೊಳಗೂ ಸಾಮಾನ್ಯಸಂಸ್ಕೃತಿ, ಸಮಾನಕಲೆಗಳಂಥ ನಿರ್ದುಷ್ಟವೂ ದೃಢವೂ ಆದ ಅಸ್ತಿವಾರವು ರಾಷ್ಟ್ರೀಯತೆಗೆ ಬೇರೊಂದಿದ್ದುದನ್ನು ನಾವರಿಯೆ. ಸ್ವದೇಶೀಯವಾದ ಕಲೆಗೆ ದೈವತ್ವವನ್ನು ಕಲ್ಪಿಸಿ ಅದರಿದಿರು ತಲೆಬಾಗುವದರಲ್ಲಿ ಕೀಳುತನವೇನೂ ಇಲ್ಲ. ಕಲೆಯು ಜನಾಂಗದ ಆತ್ಮವಾಗಿದೆ. ಒಂದೊಂದು ರಾಷ್ಟ್ರವೂ ತನ್ನ ಸಂಪದಭ್ಯುದಯದ ಅಥವಾ ಸಂಕಷ್ಟದ ಕಾಲದಲ್ಲಿ ಏನು ತೊರೆದರೊ ಯಾವ ತತ್ವಗಳನ್ನು ಬಿಡಲು ಒಪ್ಪಲಿಲ್ಲವೊ ಅಂಥವುಗಳ ಸತ್ವಸಾರವೆ ಆ ಆ ದೇಶಕಲೆಗಳಲ್ಲಿ ಮೂರ್ತಿಗೊಂಡಿರುವದು. ಗ್ರೀಕರ ಭವ್ಯದಿವ್ಯ ಜೀವನವು ಅವರ ಐತಿಹಾಸಿಕ ಘಟನಾವಳಿಗಳಿಗಿಂತ ಅವರ ಸಾಹಿತ್ಯ, ಮೂರ್ತಿಶಿಲ್ಪ, ವಾಸ್ತುಕಲೆಗಳಲ್ಲಿಯೆ ತಾನೆ ತಾನಾಗಿ ಮೈವೆತ್ತು ಮೈದೋರಿ ನಿಂತಿರುವದು. ಆಂಗ್ಲಸಾಹಿತ್ಯದಲ್ಲಿ ಅವರ ಸ್ವಾತಂತ್ರ್ಯಜೀವನದ ಭಾವನೆಯ ಗುಪ್ತಸರಸ್ವತಿಯು ಅವಿಚ್ಛಿನ್ನವಾಗಿ ಹರಿದಿರುವದನ್ನು ನಾವು ಕಾಣುತ್ತೇವೆ. ಏನು ಸಾತಂತ್ರ್ಯ ಸಂಗೀತದ ಭವ್ಯತೆ! ಅದರ ದುಂದುಭಿ ಗಂಭೀರನಿನಾದವು ದಿಗಂತದಿಂದ ಬಾದಿತೆಂಬಂತೆ ಕಿವಿದುಂಬಿದಾಗ ನೂರು ಸಾಹಿತಿಗಳ ಹೆಸರುಗಳು ನೆನಪಾಗುವವು. ಆ ಸ್ಮೃತಿಶೈಲದ ಶಿಖರದಲ್ಲಿ 'ಏರಿಯೊ ಪೆಗಿಟಿಗಾ' ವನ್ನು ಬರೆದು ಘನಗರ್ಜನೆ ಮಾಡಿದ 'ಮಿಲ್ಟನ್', ಭವ್ಯಭಾವನೆಗಳ ಭಟ್ಟಂಗಿಯಾದ 'ಬರ್ಕ', ಗೊಗ್ಗರದನಿಯಿಂದ ಭವಿಷ್ಯ ಸಾರುವ 'ಕಾರ್ಲೈಲ್' ಶೈಲದುರ್ಗಗಳ ದುರ್ದಮರಮಣೀಯವಾದ ಸ್ವತಂತ್ರತೆಯ ಪಾದದೆಡೆಯಲ್ಲಿ ನಿವೇದಿತವಾದ 'ಎರಡುದನಿ' ಗಳ ಸ್ತೋತ್ರ ಮಾಡುವ 'ವರ್ಡ್ಸವರ್ಥ್'? ಒಬ್ಬರೇ ಇಬ್ಬರೇ! ಎಲ್ಲ ರಾಷ್ಟ್ರಗಳ ಸಾಹಿತ್ಯಕಲೆಗಳ ಹಾಡು ಇದೆ ಆಗಿದೆ.

ದಿವ್ಯಕಾರುಣ್ಯ ಮತ್ತು ದಿವ್ಯಾನುಭೂತಿಗಳ ವಿವಿಧಾರಾಗಾಲಾಪನೆಗಳನ್ನೆತ್ತಿದ ಭರತಖಂಡವೇನು, ಬೇರೆ ಖಂಡಗಳೇನು, ಯಾವುದೂ ತನ್ನ ರಾಷ್ಟ್ರೀಯ ಜೀವನದ ಜೀವಸ್ವರವನ್ನೆತ್ತಿಯೆ ಹಾಡುವುದು. ನಮ್ಮ ರಾಷ್ಟ್ರೀಯ ಗರ್ವ, ದರ್ಪ, ಸ್ವಾಭಿಮಾನಗಳನ್ನು ಎತ್ತಿ ಹಿಡಿಯಲು ಇದೊಳ್ಳೆಯ ಸಾಧನೆಯಾಗುವದಿರಲಿ,ಚಿರಂತನ ಜೀವನಕ್ಕೆ ಇದೊಂದು ಸನಾತನ ಉದ್ದೀಪನವಾಗಿ ಬಾಳುವುದು. ಯಾವ ರಾಷ್ಟ್ರವೂ ತಮ್ಮ ಪ್ರಾಚೀನ ಮಹಾಕೃತಿಗಳ ಮಹೋನ್ನತ ಶಿಖರಗಳಿಂದ ಜರೆದುರುಳುತ್ತಿರುವಾಗ ಅವರವರ ಮಹಾಕಾವ್ಯ, ಮಹಾಮೂರ್ತಿ, ಮಹಾದೇವಾಲಯಗಳು ಕೈಗಂಬಗಳಾಗಿ, ಅವರ ಕುಲದ ಮೊದಲಿಗರು ನಡೆದು ಹೋದ ಸಾಹಸದ ಪಥಗಳನ್ನೂ ಎತ್ತಿ ತೋರಿಸಿ, ಅದೇ ಹಾದಿಯನ್ನು ಈಗಿನವರೂ ನಡೆಯುವದು ಸಾಧ್ಯ ಎಂಬ ಭರವಸೆಯನ್ನು ಹುಟ್ಟಿಸುವದು. ಗತಕಾಲದ ಕಲಾಕೃತಿಯು ನಮಗೊಂದು ಅಮೌಲ್ಯವಾದ ಆಸ್ತಿಯಂತೆ ಇದ್ದುಕೊಂಡದ್ದಾದರೆ ವರ್ತಮಾನಕಾಲದ ಕಲೆಯು ನಮ್ಮ ಜೀವದುಸಿರಂತೆ ಪ್ರತಿಗಳಿಗೆಗೂ ಬೇಕಾದ ಕರ್ಮವಾಗಿ ಬಾಳಬೇಕಾಗುವದು. ಕಜಿನ್ಸರೇ ಹೇಳಿದ್ದಾರೆ: 'ಕಲೆಯಿಲ್ಲದ ರಾಷ್ಟ್ರ ಕಣ್ಣಿಲ್ಲದ ಕಿವಿಯಿಲ್ಲದ ಜೀವ.' ಕಲೆಯಿಲ್ಲ ಎಂದರೆ ಕಳೆಯಿಲ್ಲ. ಟಾಗೋರ ಮನೆತನದವರ ಕಾವ್ಯ, ಸಂಗೀತ, ಚಿತ್ರ ಕರ್ಮಗಳು ಗಾಂಧೀಜಿಯವರ ವೈರಾಗ್ಯ ಮತ್ತು ಕಷ್ಟಸಹನೆಗಳಷ್ಟೆ ನವಭಾರತದ ಉತ್ಕ್ರಾಂತಿಗೆ ಅವಶ್ಯವಾಗಿವೆ.

ಅಷ್ಟೇ ಏಕೆ? ಒಂದು ದೇಶದ ರಾಜಕೀಯ ಭವಿತವ್ಯವನ್ನು ರೂಪುಗೊಳಿಸುವಲ್ಲಿ ರಾಷ್ಟ್ರೀಯ ಕಲೆಯೂ ಕೆಲವು ಸಲ ಅಸಾಧಾರಣ ಸಾಧನವಾಗುವದು. ಐರ್ಲಂಡ ದೇಶದ ಚರಿತ್ರೆಯನ್ನೇ ಈ ಮಾತಿಗೆ ಉದಾಹರಿಸಬಹುದು. ರಾಜಕೀಯ ವಿಚಾರಗಳಿಗೆ ವ್ಯತಿರಿಕ್ತವಾಗಿಯೆ ಐರ್ಲಂಡದ ಸಾಹಿತ್ಯಾಂದೋಲನವು ಬೆಳೆದು ಬಂತು. ಆದರೆ ಐರ್ಲಂಡದ ಸ್ವಾತಂತ್ರ್ಯದ ವಿಷಯದಲ್ಲಿ ಈ ಸಾಹಿತ್ಯದಿಂದಾದ ಸೇವೆಯು ಅಷ್ಟಿಷ್ಟಲ್ಲ. ರಾಜಕಾರಣವು ಸ್ವಾತಂತ್ರ್ಯಕ್ಕೆ ಮೈಯನ್ನು ಕೊಟ್ಟರೆ ಈ ಸಾಹಿತ್ಯವು ಅದಕ್ಕೆ ಉಸಿರನ್ನು ಕೊಟ್ಟಿತು, ಜಡಕ್ಕೆ ಜೀವವಿತ್ತಂತೆ. ಎಂತೋ

ಕುಣಿದಾಡುವ ಪಾತ್ರಗಣಕ್ಕೆ ಹಿಮ್ಮೇಳದ ಒಕ್ಕೊರಲಿನ ಶ್ರುತಿಯು ಸ್ಥಾಯಿ ದೊರೆತಂತಾಯಿತು. ಗಾಳಿಯಲ್ಲಿ ಬಿತ್ತಿ, ಬೆಳೆ ತಕ್ಕೊಂಡವರಿಲ್ಲ. ದೇಶದ ಅಭ್ಯುದಯವು ದೇಶೀಯ ಜೀವನದಿಂದಲೆ ಮೊಳೆತು ಚಿಗಿತು ಬರಬೇಕಾಗುವುದು. ಈ ಪಾಠವನ್ನೂ ನಾವು ಐಯರ್ಲಂಡದ ಚರಿತ್ರೆಯಿಂದ ಕಲಿಯಬಹುದು. ಜನರ ಜೀವಜೀವಾಳವು ಜನರ ಮಾತಿನಲ್ಲಿಯೆ ತಲೆಯೆತ್ತಿ ಮೈದೋರಬೇಕು. ಈಟ್ಸ ಮಹಾಕವಿಗಳು 'ಸಿಂಗ್' ಕವಿಯನ್ನು ಕಂಡುಹಿಡಿದು ಪ್ರೋತ್ಸಾಹಿಸಿ ಪಡುವಲ ಐಯರ್ಲಂಡದ ಒಕ್ಕಲಿಗರ ಜೀವನವನ್ನೂ ಅವರ 'ಕೆಲ್ಟಿಕ್' ದೇಶಿಯನ್ನೂ ಕಲಿಯಲು ಪ್ರೋತ್ಸಾಹಿಸಿರದಿದ್ದರೆ ಆಂಗ್ಲ ನಾಟಕಸಾಹಿತ್ಯದ ಚರಿತ್ರೆಯಲ್ಲಿ ಶೆಕ್ಸಪಿಯರನ ಹತ್ತಿರ ಹತ್ತಿರದ ಸ್ಥಾನವನ್ನು ಪಡೆಯಲರ್ಹನಾದ ಒಬ್ಬ ಮಹಾ ನಾಟಕಕಾರನನ್ನು ಪ್ರಪಂಚವು ಕಳೆದುಕೊಳ್ಳುತ್ತಿತ್ತು. ಕಲೆಯಿಂದ ಪ್ರತಿಯೊಂದು ರಾಷ್ಟ್ರಕ್ಕೆ ಆಗಬೇಕಾದ ಹಿತದ ವಿಷಯದಲ್ಲಿ 'ಈಟ್ಸ' ಅವರೇ ಹೇಳಿದ ಕೆಲ ಮಾತುಗಳು ಮಹಾವಾಕ್ಯವಾಗಿ ನಿಲ್ಲಲರ್ಹವಾಗಿವೆ. ಕಲೆಗಳು 'ಅತಿ ದಾರಿದ್ರ್ಯ ಅತಿ ಶ್ರೀಮಂತಿಕೆಯ ಅತಿ ದುರ್ಗತಿಯನ್ನು ತಪ್ಪಿಸಿ ಮಧ್ಯಮ ಮಾರ್ಗದ ಜೀವನಪರಂಪರೆಯನ್ನು ಪ್ರಸ್ಥಾಪಿಸುವವು. ಇದರಿಂದ ಸಾಧಾರಣ ಜನರಲ್ಲಿಯೂ ಉತ್ತಮ ಕಲೆ ಮತ್ತು ಉನ್ನತ ವಿಚಾರಗಳ ತಿಳುವಳಿಕೆಯಿಂದ ಬರುವ ನಯದ ನಡತೆಯು ನೆಲೆಯಾಗಿ ನಿಲ್ಲುವದು' ಕಲೆಯು ನಮ್ಮನ್ನು ಇಷ್ಟು ದೂರಕ್ಕೆ ಒಯ್ಯಬಲ್ಲದು. ಯಾವ ರಾಷ್ಟ್ರವು ಇದರರ್ಧದಷ್ಟು ದಾರಿಯನ್ನಾದರೂ ತನ್ನ ಕಲಾಕೃತಿಗಳ ಸಹಾಯದಿಂದ ನಡೆಯಬಲ್ಲದೊ ಅದು ಸುಖದ ನೆಲೆವೀಡಾದ ಧನ್ಯದೇಶವೆಂದು ನಾನು ನಂಬಬಲ್ಲೆ.



## ಮಾನ ಮತ್ತು ಮರ್ಯಾದೆ — 'ಶ್ರೀಸ್ವಾಮಿ'

ಮಾನವನ ಗುಣಕಥನವನ್ನು ನಾವು ಮೂರು ಜತೆಯ ಪದಗಳಿಂದ ಮಾಡಬಹುದು. ಈ ಮೂರು ಜತೆ-ಪದಗಳೂ ಯಮುಳ ನದಿಗಳಂತೆ; ಅವಳಿಜವಳಿ ಮಕ್ಕಳಂತೆ. ಮಾನ-ಮರ್ಯಾದೆ, ನಯ-ನೀತಿ, ಘನ ಗಾಂಭೀರ್ಯ ಇವೇ ಆ ಮೂರು ಜತೆ-ಪದಗಳು. ಈ ಮೂರು ಜತೆಗಳಲ್ಲಿ ಒಂದನ್ನು ಮತ್ತೊಂದರಿಂದ ಬೇರ್ಪಡಿಸುವುದು ಸ್ವಲ್ಪ ಕಷ್ಟವೇ. ಅನೇಕರು ಈ ಜತೆಗಳಲ್ಲಿನ ಒಂದು ಪದವನ್ನು ಅದರೊಡನಿರುವ ಮತ್ತೊಂದು ಪದಕ್ಕೆ ಬದಲಾಗಿ ಉಪಯೋಗಿಸಿ ಭ್ರಾಂತಿವಿಲಾಸಕ್ಕೊಳಗಾಗುತ್ತಾರೆ!

ಈ ಮೂರು ಜತೆ ಗುಣಗಳಲ್ಲಿ ಮೊದಲ ಜತೆ ಬಹಳ ಘನವಾದದ್ದು. ಮಾನವನು ಚೆನ್ನಾಗಿ ಬದುಕಿರಬೇಕಾದರೆ ಈ ಜತೆ ಗುಣವನ್ನು ಹೊಂದಿದ್ದರೆಯೇ. ಇವುಗಳಲ್ಲಿ ಮಾನವೆಂದರೇನು ? ಮರ್ಯಾದೆ ಎಂದರೇನು ? ಎಂದು ವಿಂಗಡಿಸುವುದು ಹಾಲಿನಿಂದ ನೀರನ್ನು ಬೇರ್ಪಡಿಸುವಂತೆಯೇ.

ಪ್ರಪಂಚದಲ್ಲಿ ಪ್ರತಿಯೊಂದನ್ನೂ ಒಂದು ಆದರ್ಶಮಾನದೊಂದಿಗೆ ಹೋಲಿಸಿ ನಾವು ಅಳತೆ ಮಾಡುತ್ತೇವೆ. ಮಾನವನ್ನೇ ಮಾನವರು ಆದರ್ಶಮಾನವಾಗಿಟ್ಟುಕೊಂಡಿದ್ದಾರೆ. ಈ ಮಾನವು ಜನತೆಯ ಜೀವನದ ಮಟ್ಟದ ಮೇಲೆ ನಿರ್ಧರಿಸಲ್ಪಡುತ್ತದೆ. ಈ ಮಟ್ಟವನ್ನು ಮೆಟ್ಟಿ ಮೇಲೆ ಬರುವುದೇ ಮರ್ಯಾದೆ.

ಜನತೆಯ ಜೀವನದ ಮಟ್ಟವೆಂದರೆ ನಡೆದ ಕತೆಯೊಂದು ನನಗೆ ನೆನಪಿಗೆ ಬರುತ್ತದೆ. ನನ್ನ ಗೆಳೆಯನೊಬ್ಬನು ನಾಟಕ ಕಂಪನಿಯೊಂದರಲ್ಲಿ ನಟನಾಗಲು ಮ್ಯಾನೇಜರನ್ನು ಹೋಗಿ ನೋಡಿದನು. ಮ್ಯಾನೇಜರು ನಟನ ಯೋಗ್ಯತೆಯನ್ನು ಪರೀಕ್ಷಿಸಲು ಕೆಲವು ಪ್ರಶ್ನೆಗಳನ್ನು ಹಾಕಿದರು.

ಆತನು 'ಒಬ್ಬ ದೊರೆ. ದೊರೆಯ ಹೆಂಡತಿಯು ಮಂತ್ರಿಯಲ್ಲಿ ಅನುರಕ್ತೆ ಳಾಗಿದ್ದುದನ್ನು ದೊರೆಯು ಕಂಡ. ಆತನಿಗೆ ರೇಗಿಹೋಗಿ 'ಸರಿ ಯಾಯ್ತು!' ಎಂದು ರಾಣಿಗೆ ಹೇಳಿದ, ಎಂಬುದನ್ನು ನಾಟ್ಯರಂಗದಲ್ಲಿ ದೊರೆಯ ಪಾತ್ರವನ್ನು ನೀವು ವಹಿಸಿದಾಗ ನಟನೆಯೊಡನೆ ರಾಣಿಗೆ ಹೇಗೆ ಹೇಳುವಿರಿ?' ಎಂದು ನನ್ನ ಗೆಳೆಯನನ್ನು ಪ್ರಶ್ನಿಸಿದನು. ಅದಕ್ಕೆ ನನ್ನ ಗೆಳೆಯನು 'ನಾಟಕವನ್ನು ನೋಡುವ ಪ್ರೇಕ್ಷಕರ ಮಟ್ಟವೇನು?' ಎಂದು ಕೇಳಿದನು. 'ನಾಲ್ಕಾಣೆ ದೇವತೆಗಳು!' 'ರಾಜನು ರಾಣಿಯ ಮುಂದಲೆಯನ್ನು ಹಿಡಿದೆಳೆದು 'ಸರಿಯಾಯ್ತು!' ಎಂದು ಘರ್ಜಿಸ ಬೇಕು. ತಿಳುವಳಿಕೆಯ ಜನವಾದರೆ 'ಸರಿಯಾಯ್ತು.' ಎಂದು ಮುಖವನ್ನು ರಾಜನು ತಿರುಗಿಸಿಕೊಳ್ಳಬೇಕು! ವಿದ್ಯಾವಂತರಾದರೆ 'ಸ–ರಿ–ಯಾ–ಯ್ತು!' ಎಂದು ರಾಜನು ನಿಟ್ಟುಸಿರನ್ನು ಬಿಟ್ಟು ತಲೆ ತಗ್ಗಿಸಿಕೊಳ್ಳಬೇಕು!' ಎಂದು ಉತ್ತರವಿತ್ತನು.

ಇದರಿಂದ ನಮಗೆ ಜನತೆಯ ಮಾನದ ಮಟ್ಟ ತಿಳಿದುಬರುತ್ತದೆ. ಮುಂದಲೆ ಹಿಡಿದೆಳೆಯುವುದೂ, ಮುಖ ತಿರುಗಿಸಿಕೊಳ್ಳುವುದೂ, ನಿಟ್ಟು ಸಿರು ಬಿಡುವುದೂ ಒಂದೇ ಅಭಿಪ್ರಾಯಕ್ಕೆ ಸಂಬಂಧಿಸಿದುವು. ಆದರೆ ಪ್ರತಿಕಾರ್ಯವೂ ಆಯಾ ವರ್ಗದ ಮಾನವನ್ನು ಸೂಚಿಸುತ್ತದೆ. ಮೊದ ಲನೆಯ ವರ್ಗದ ಮಾನದ ಮಟ್ಟ ಬಹಳ ಕೆಳಗಿನದು; ಅಲ್ಲಿ ನಿಟ್ಟುಸಿರು ಉಪಯೋಗವಿಲ್ಲ!

ಮರ್ಯಾದೆಯು ಈ ಮಾನದ ಮಟ್ಟದ ಮೇಲೆ ನಿಲ್ಲುತ್ತಿದೆ. ಮೇಲೆ ಹೇಳಿದ ಒಂದನೆಯ ವರ್ಗದ ಜನತೆಯಲ್ಲಿ ಬಹು ಬೇಗ ಮರ್ಯಾದೆ ದೊರೆ ಯುತ್ತದೆ. ಮೂರನೆಯ ವರ್ಗದವರಲ್ಲಿ ಮರ್ಯಾದೆ ಸಂಪಾದಿಸುವುದು ಬಹುಕಷ್ಟ. ಸಾಧಾರಣವಾಗಿ ಮಾನ ಉಳಿಸಿಕೊಂಡರೆಯೆ ಸಾಕು.

ಮಾನದ ಮಟ್ಟವನ್ನು ಕಾಪಾಡಿಕೊಂಡರೆ ಮರ್ಯಾದೆ ಬರುತ್ತದೆ. ಮಾನ ಹೋಗಿ ಮರ್ಯಾದೆ ದೊರಕುವುದು ಕಷ್ಟಸಾಧ್ಯ.

ಮಾನ ಹೋಗಿ ಮರ್ಯಾದೆ ಬಂದರೂ ಬಹುಮಂದಿ ಅದನ್ನು ಆಶಿ ಸುವುದಿಲ್ಲ. ಮರ್ಯಾದೆ ಹೊಂದಿ, ಮಾನ ಹೋದುದಕ್ಕಾಗಿ ಪ್ರಾಣ

ಬಿಟ್ಟ ಹುಡುಗನೊಬ್ಬನ ಜೀವನವು ಇಲ್ಲಿ ನೆನಪಿಗೆ ಬರುತ್ತದೆ. 'ಇರತನಂದ್ರ' ಎನ್ನುವುದೊಂದು ಊರು. ಅಲ್ಲಿ ನಾರಾಯಣ ಎನ್ನುವ ಹುಡುಗ ಆ ಊರ ಪ್ರತಿಕೇಳಿಕೆ (ಬಯಲು ನಾಟಕ) ದಲ್ಲಿ ಕಥಾನಾಯಕನ ಪಾತ್ರವನ್ನು ಬಹಳ ಸೊಗಸಾಗಿ ಮಾಡಿ ಪ್ರಸಿದ್ಧಿಯನ್ನೂ ಎಲ್ಲರಿಂದಲೂ ಮರ್ಯಾದೆಯನ್ನೂ ಪಡೆದಿದ್ದನು. ಆದರೆ ಒಂದು ದಿನ 'ಸೀತಾವನವಾಸ' ದಲ್ಲಿ ರಾಮನ ಪಾತ್ರವನ್ನು ಅದ್ಭುತವಾಗಿ ನಟಿಸುತಿದ್ದಾಗ ಮುಂದೆ ಕುಳಿತಿದ್ದ ಪ್ರೇಕ್ಷಕರಲ್ಲಿ ಒಬ್ಬರು 'ಹುಡುಗ ಬಹು ಚೆನ್ನಾಗಿ ನಟಿಸುತ್ತಾನೆ' ಎಂದರು. ಅದಕ್ಕೆ ಅವರ ಪಕ್ಕದಲ್ಲಿದ್ದ ಮತ್ತೊಬ್ಬರು—ಆ ಊರಿನವರೇ—'ಅಪ್ಪ ಯಾರೋ ತಿಳಿಯದ ಸೂಳೇಮಗ, ಪಾತ್ರ ನಟಿಸೋದಕ್ಕೇನು!' ಎಂದರು. ಇದು ನಾರಾಯಣನ ಕಿವಿಗೆ ಬಿತ್ತು. ಮಾರನೆಯ ದಿನ ಬೆಳಗ್ಗೆ ಊರ ಜನ, ಊರ ಹೊರಗಿದ್ದ ಹೊಂಗೆಮರಕ್ಕೆ ನೇಣು ಹಾಕಿಕೊಂಡು ಮಡಿದಿದ್ದ ನಾರಾಯಣನ ಶವವನ್ನು ಕಂಡಿತಂತೆ! ಆತನು ತಾನು ಗಳಿಸಿದ್ದ ಮರ್ಯಾದೆಯಿಂದ ಒಂದು ಮಾನದ ಮಟ್ಟವನ್ನು ನಿರ್ಧರಿಸಿದ್ದನು. ಆ ಮಟ್ಟ ಕೆಳಗೆ ಜಾರಿದಾಗ ತನ್ನ ಜೀವವನ್ನು ಈ ಭೂಮಿಯಿಂದ ಜಾರಿಸಿದನು!

ಕೆಲವರಿಗೆ ಮಾನದ ಮಟ್ಟ ಬಹು ಕಿರಿದಾಗಿದ್ದರೂ ಬಹಳ ಮರ್ಯಾದೆ ಬೇಕು. ನಾನಿದ್ದ ಶಾಲೆಯೊಂದರಲ್ಲಿ ನಡೆದ ದೃಶ್ಯವೊಂದರಿಂದ ಇದನ್ನು ಊಹಿಸಬಹುದಾಗಿದೆ. ಒಂದು ದಿನ ನಾನು ಶಾಲೆಯಲ್ಲಿ ಪಾಠ ಹೇಳುತ್ತಿದ್ದಾಗ ನೀಲಿಯ ಜರತಾರೆಯ ಸೀರೆಯನ್ನುಟ್ಟು, ಅದೇ ಬಣ್ಣದ ಜಾಕೀಟನ್ನು ತೊಟ್ಟು, ಕಾಲಿಗೆ ಬೂಟ್ಸನ್ನು ಧರಿಸಿ, ನಡುವಿನಲ್ಲಿದ್ದ ಬಂಗಾರದ ಡಾಬನ್ನು ಹೊಳೆಯಿಸುತ್ತ, ಕಿವಿಯಲ್ಲಿದ್ದ ವಜ್ರದ ಲೋಲಾಕುಗಳನ್ನು ಅಲುಗಾಡಿಸುತ್ತಾ, ತಲೆಯಲ್ಲಿ ಮುಡಿದಿದ್ದ ಮಲ್ಲಿಗೆ ದಂಡೆಯ ಮೇಲೆ ನಿಮಿಷ ನಿಮಿಷಕ್ಕೂ ಕೈಹಾಕಿ ಮುಟ್ಟಿ ನೋಡಿಕೊಳ್ಳುತ್ತಿದ್ದ, ಸುಮಾರು ಮೂವತ್ತು ವರ್ಷ ವಯಸ್ಸಿನ ಹೆಂಗಸೊಬ್ಬಳು ನೆಟ್ಟಗೆ ತರಗತಿಯೊಳಕ್ಕೆ ಇನ್‌ಸ್ಪೆಕ್ಟರ್‌ನಂತೆ ಬಂದಳು. ನಾನು ಚಕಿತನಾದೆ. ಹುಡುಗರಲ್ಲಿ ಕೆಲವರು ಆಕೆಯ ಕಡೆಗೂ ಮತ್ತೆ ಕೆಲವರು

ಎರಡನೆಯ ಬೆಂಚಿನ ಮೊದಲಲ್ಲಿ ಕುಳಿತಿದ್ದ ಹುಡುಗನ ಕಡೆಗೂ ತಿರುಗಿದರು. ಬಂದಾಕೆ 'ಯಾರ್‍ರಿ ಅವರು, ಅರಿಯದ ಕೃಷ್ಣದೇವರ ಹಾಗಿರೊ ನಮ್ಮ ಹುಡುಗನ್ನ ಮನೆ ವಿಚಾರನೆಲ್ಲಾ ಕೇಳ್ದೋರು? ಅವರಿಗೇನ್ರಿ ನಮ್ಮ ಹುಡುಗನ ಅಪ್ಪ ಶಿವರುದ್ರನೋರಾದ್ರೆ ಆತ ಕೃಷ್ಣಮೂರ್ತಿಯಾದ್ರೆ? ಇದೇನೆ ಇವರು ಪಾಠ ಹೇಳಿಕೊಡುವುದು?' ಎಂದು ಘರ್ಜಿಸಿದಳು. ನಾನಿನ್ನೂ ಆ ಶಾಲೆಗೆ ಹೊಸದಾದುದರಿಂದ 'ಯಾರಪ್ಪ ಹುಡುಗ?' ಎಂದೆ. ಹರಕು ಕೋಟೊಂದನ್ನು ಹಾಕಿಕೊಂಡು, ಕೊಳಕು ಪಂಚೆಯೊಂದನ್ನುಟ್ಟು, ಮಾಸಿದ ಟೋಪಿಯೊಂದನ್ನು ಹಾಕಿಕೊಂಡಿದ್ದ ಕೃಷ್ಣಮೂರ್ತಿ ಎದ್ದು ನಿಂತು, 'ಈ ಮೇಷ್ಟ್ರಲ್ಲ, ಇನ್ನೊಬ್ಬರು' ಎಂದ. ಆ ವೇಳೆಗೆ ಶಾಲೆಯ ಹೆಡ್ಮಾಷ್ಟರು ಬಂದು, 'ಆ ಮೇಷ್ಟ್ರಿಗೆ ಬುದ್ಧಿಯಿಲ್ಲ ನೀವು ಹೋಗಿರಮ್ಮ. ನಾವು ಅವರಿಗೆ ಬುದ್ಧಿ ಹೇಳುತ್ತೇವೆ' ಎಂದರು. 'ಎಲ್ರಿ ಅವರು, ಅವರಿಗೆ ಬುದ್ಧಿ ಕಲಿಸ್ತೀನಿ?' ಎಂದು ಕೋಪದ ಕಿಡಿಗಳನ್ನುದುರಿಸುತ್ತ ಆಕೆ ಕೇಳಿದಳು. 'ಅವರು ರಜಾದ ಮೇಲೆ ಹೋಗಿದ್ದಾರೆ.' ಎಂದು ಉತ್ತರ ಬಂದ ಮೇಲೆ, ಏನೇನೋ ಬೈಗಳ ಸುರಿಮಳೆಯನ್ನು ಆ ಮೇಷ್ಟ್ರರ ಮೇಲೆ ಸುರಿಸುತ್ತಾ ಆಕೆ ಹೊರಟುಹೋದಳು. ಹೆಡ್ಮಾಷ್ಟರು 'ಆತನಿಗೆ ಸ್ವಲ್ಪವೂ ಬುದ್ಧಿಯಿಲ್ಲ. ಯಾವ ಕಡೆಯಿಂದ ಯಾವ ಮಟ್ಟದಿಂದ ಹುಡುಗರು ಶಾಲೆಗೆ ಬಂದರೆ ಅವರಿಗೇನು? ಅವರ ಬುದ್ಧಿಪ್ರಮಾಣ ಕಟ್ಟಿಕೊಂಡು ಅವರೇನು ಮಾಡಬೇಕು? ಸುಮ್ಮನೆ ದಿನ ಕಳೆದು ಸಂಬಳ ತೆಗೆದುಕೊಂಡು ಹೋಗೋದು ಮೇಲು. ಈ ಸ್ಕೂಲಿನ ಹುಡುಗರು ಬಹು ಮಂದಿ ಈ ಗುಂಪಿನವರೇ. ಹುಷಾರಾಗಿರಬೇಕು' ಎನ್ನುತ್ತಾ ಹೊರಟು ಹೋದರು!

ಬಂದಿದ್ದ ಆಕೆಗೆ ಮಾನ ಉಳಿಸಿಕೊಳ್ಳುವುದು ಬೇಕಿಲ್ಲ. ತನ್ನ ಜೀವನವನ್ನು—ಮಾನವನ್ನು—ಮಾರಿಕೊಂಡವಳಿಗೆ ಮರ್ಯಾದೆ ಬೇಕು!

ಮಾನದ ಮಟ್ಟವನ್ನು ನೋಡದೆ ನಾವು ಮರ್ಯಾದೆ ಮಾಡಬಹುದಾದ ಅನೇಕರು ನಮಗೆ ಗೋಚರಿಸುತ್ತಾರೆ. ಅವರ ಜೀವನವನ್ನು, ಅವರ ಮಾನದ ಮಟ್ಟವನ್ನು ನೋಡಿ, ಅವರು ಮಾಡುವ ಕೆಲಸಗಳನ್ನು

ನೋಡಿದರೆ ಅಪಮಾನವಾಗುತ್ತದೆ! ಆದರೆ ಅವರ ಬುದ್ಧಿಶಕ್ತಿಯನ್ನು ಮಾತ್ರ ನೋಡುತ್ತಾ, ಜನತೆಗೆ ಅವರಿಂದಾಗಿರುವ ಉಪಕಾರನ್ನು ಮಾತ್ರ ಕಾಣುತ್ತಾ, ಅವರ ಮಾನದ ಮಟ್ಟವನ್ನು ಮರೆತರೆ ಅವರನ್ನು ನಾವು ಮರ್ಯಾದಿಸುತ್ತೇವೆ. ಇಂತಹ ವ್ಯಕ್ತಿಗಳನ್ನು ಕೆಲವರು ಮರ್ಯಾದಿಸುತ್ತಾರೆ; ಕೆಲವರು ಮರ್ಯಾದಿಸುವುದು ಹಾಗಿರಲಿ, ಅವರನ್ನು ಅಪಮಾನಿಸುತ್ತಾರೆ!

ಮಾನದಿಂದ ಬಾಳನ್ನು ನಿರ್ವಹಿಸುವವರ ಜೀವನ ಕಂಡು ಹೂಗಳ ಜೀವನದಂತೆ, ಅವರು ಮರ್ಯಾದೆಗೆ ಇದಿರು ನೋಡುವುದಿಲ್ಲ. ವನಸುಮಗಳಂತೆ ಪ್ರಪಂಚದಲ್ಲಿ ತಮ್ಮ ಕೆಲಸಗಳನ್ನು ತಾವು ಮಾಡಿ ಈ ಲೋಕವನ್ನು ಬಿಟ್ಟು ಕೃತಕೃತ್ಯರಾಗುವರು.

ಮಾನವನ್ನು ಕಾಪಾಡಿಕೊಂಡರೆ ಒಂದೊಂದು ವೇಳೆ ಮರ್ಯಾದೆ ತನ್ನಷ್ಟಕ್ಕೆ ತಾನೇ ಬರುವುದು. ಇದನ್ನು ಶ್ರೀಮಾನ್ ಶ್ರೀನಿವಾಸರು ಒಂದು ಕವಿತೆಯಲ್ಲಿ ಕಟ್ಟಿ ಮಳಲವಾಡಿಯ ನೀಲಗಾರ ಮಾದನನ್ನು ಚಿತ್ರಿಸುವುದರಿಂದ ತೋರಿಸಿರುವರು. ಮಾರಮ್ಮನಿಗೆ ನೀಲಗಾರನಾಗಿ ಮೀಸಲಾದ ಮಾದನು ಹೈದರಲ್ಲಿ ನವಾಬರ ಮಾತನ್ನು ಕೇಳದೆ, ತಾನು ವೇಷ ಹಾಕುವುದಿಲ್ಲವೆಂದು ಹಠಹಿಡಿದು, ದೊರೆ ಕೊಡುವ ಶಿಕ್ಷೆಗೂ ಸಿದ್ಧನಾಗಿ ನಿಂತನು. ಹೈದರಲ್ಲಿಯು ಈತನನ್ನು ಮೆಚ್ಚಿ 'ಭೇಷ್ ಭೇಷ್ ನೀಲ್ಗಾರ' ಎಂದು ಹೊಗಳಿ, 'ಎಲೆಯಡಿಕೆ ಕೊಟ್ಟು ಮರ್ಯಾದೆ ಮಾಡಿ ಕಳುಸಿದರು.

ಮಾನವನ್ನು ಉಳಿಸಿಕೊಂಡಾಗ, ಆಶಿಸದೆ ಬಂದ ಮರ್ಯಾದೆ ಇದು! ಗಿಡ ನಡಲು ಅಗೆದಾಗ ಭೂಮಿಯಲ್ಲಿ ದೊರೆತ ಚಿನ್ನದಂತೆ ಇದೆ!

ಮಾನವನು ತನ್ನ ಆವರಣದಲ್ಲಿ ಅರಿಷಡ್ವರ್ಗಗಳಿಗೆ ಒಳಗಾಗದೆ ನೈಜಸ್ಥಿತಿಯಿಂದ ನಡೆಯುತ್ತಿದ್ದರೆ ಅವನಿಗೆ ಮಾನ ಉಳಿಯುವುದು. ತನ್ನಲ್ಲಿ ಯಾವದಾದರೂ ಕೆಟ್ಟ ಸ್ವಭಾವವಿದ್ದು, ಅದರ ಮೇಲೂ ಮರ್ಯಾದೆ ಬರಬೇಕೆಂದರೆ, ಆ ಪ್ರಯತ್ನ, ಅಭಿಮಾನಧನನಾದ ಕೌರವೇಶ್ವರನು ತನ್ನ ಛಲವನ್ನು ಸಾಧಿಸಲು ಪ್ರಯತ್ನಪಟ್ಟು ಅವಮಾನಿತನಾಗಿ

ಮಡಿದಂತೆ ಆಗುವುದು. ಒಂದು ಕಟ್ಟಿನಿಂದ ಮಾನ ಉಳಿಸಿಕೊಂಡು ಮರ್ಯಾದೆ ಪಡೆಯಬೇಕೆಂದರೆ ಅದು ಸಾಧ್ಯವಿಲ್ಲ.

ವ್ಯಕ್ತಿಯ ಮಾನದ ಮಟ್ಟವನ್ನರಿಯದೆ ಮರ್ಯಾದೆ ಮಾಡಹೋಗಿ ತನಗೆ ಅವಮಾನವಾಗಲೂಬಹುದು. ನಾನು ಕಂಡ ಒಂದು ನೈಜ ದೃಶ್ಯ ದಿಂದ ಈ ಮಾತನ್ನು ಹೇಳಬೇಕಾಗಿದೆ. ಬಹು ಕೆಳಗಿನ ದರ್ಜೆಯಲ್ಲಿದ್ದು ದೈವಕಟಾಕ್ಷದಿಂದ ಉನ್ನತ ಪದವಿಗೆ ಬಂದ ಅಧಿಕಾರಿಗಳೊಬ್ಬರು ಶಾಲೆ ಯೊಂದರಲ್ಲಿ ಒಬ್ಬ ಮಾಂತ್ರಿಕನ ಯಕ್ಷಿಣಿಗೆ ಅಧ್ಯಕ್ಷರಾದರು. ಯಕ್ಷಿಣಿ ಮುಗಿದ ಮೇಲೆ ತನಗೆ ಹಣ ಶೇಖರಿಸಿಕೊಟ್ಟುದಕ್ಕಾಗಿ ತನ್ನ ಕೃತಜ್ಞತೆ ಯನ್ನು ವ್ಯಕ್ತಪಡಿಸಲು ಆತನು ಒಂದು ಪುಷ್ಪಮಾಲೆಯನ್ನು ಅಧ್ಯಕ್ಷ ರಿಗೆ ಹಾಕಿದನು. ಇದಾದೊಡನೆಯೇ ಆ ಯಕ್ಷಿಣಿಯನ್ನು ನೋಡು ತ್ತಿದ್ದ ಸುಪ್ರಸಿದ್ಧ ಸಾಹಿತಿಗಳೊಬ್ಬರ ಭಾಷಣವೂ ಆಗಬೇಕಾಗಿತ್ತು. ಆ ಅಧಿಕಾರಿಗಳೇ ಅಗ್ರಾಸನವನ್ನು ವಹಿಸಿದರು. ಅಂದು ಯಾವುದೋ ಅನಿ ವಾರ್ಯದಿಂದ ಕಾರ್ಯದರ್ಶಿಗಳಿಗೆ ಹೊತ್ತಿಗೆ ಸರಿಯಾಗಿ ಪುಷ್ಪಮಾಲೆ ಯೊಂದನ್ನು ತರಲು ಆಗಲಿಲ್ಲ. ಭಾಷಣವು ಮುಗಿದ ಮೇಲೆ ಅಧಿಕಾರಿ ಗಳು ತಮಗೆ ಹಾಕಿದ್ದ ಮಾಲೆಯನ್ನು ಭಾಷಣಕಾರರಿಗೆ ಬಲಾತ್ಕಾರ ದಿಂದ ಹಾಕಿದರು. ಭಾಷಣಕಾರರು ತಲೆ ತಗ್ಗಿಸಿಕೊಂಡು ಬಲಾತ್ಕಾರ ದಿಂದ ಕತ್ತಿನ ಮೇಲೆ ಬಿದ್ದ ಮಾಲೆಯನ್ನು ಕೈಗೆ ತೆಗೆದುಕೊಂಡು ಹೊರಟರು. ಅಧಿಕಾರಿಗಳು ಉಪನ್ಯಾಸಕರು ಸ್ವಲ್ಪ ದೂರ ಹೋದ ಮೇಲೆ 'ಹೇಗೆ ಮರ್ಯಾದೆ ಮಾಡಿದೆ ನೋಡಿ, ಇಂದು ಉಪನ್ಯಾಸಕರಿಗೆ. ಹಣ ಖರ್ಚು ಮಾಡದೆ ಮರ್ಯಾದೆ ಮಾಡಿದೆ' ಎಂದರು. ಈ ಮಾತನ್ನು ಕೇಳಿ ನಾವು ನಸುನಕ್ಕೆವು! ಅಧಿಕಾರಿಗಳ ಮಾನದ ಮಟ್ಟದಿಂದ ಅವರು ಉಪನ್ಯಾಸಕರಿಗೆ ಹಾರ ಹಾಕಿದ್ದು ಉಪನ್ಯಾಸಕರಿಗೆ ಮರ್ಯಾದೆ ಮಾಡಿ ತಮ್ಮ ಮಾನ ಉಳಿಸಿಕೊಂಡ ಹಾಗೆ. ಉಪನ್ಯಾಸಕರ ಮಟ್ಟ ದಿಂದ ಅಂತಹ ಹಾರವನ್ನು ಹೊಂದುವ ಸಮಯ ಒದಗಿ ಅವಮಾನಿತ ರಾದದ್ದು ತಮ್ಮ ದುರಾದೃಷ್ಟದಿಂದ. ಮಾನದ ಮಟ್ಟವನ್ನು ತಿಳಿದು

ಮರ್ಯಾದೆ ಮಾಡಿದರೆಯೇ ಅದು ಮರ್ಯಾದೆ ಮಾಡಿದಂತೆ. ಮಾನದಿಂದ ಬಾಳುವುದರಿಂದಲೇ ಮನುಷ್ಯರನ್ನು ಮಾನವರೆನ್ನುತ್ತಾರೆ.

ಅಂತೂ ಸರಿಯಾಗಿ ಬಾಳಲು ಮಾನ ಉಳಿಸಿಕೊಂಡರೆ ಸಾಕು. ಇದು ತನ್ನ ಆವರಣದ ಮೇಲೆ ನಿರ್ಧರಿಸಲ್ಪಡುತ್ತದೆ. ಮಾನ ಹೋದ ಬಾಳು ಒಂದು ಬಾಳಲ್ಲ! ಮಾನದ ಮಟ್ಟದ ಮೇಲೆ ಮಾಡುವ ಪ್ರತಿ ಕೆಲಸವೂ ಮರ್ಯಾದೆಯನ್ನು ತರುತ್ತದೆ. ಮಾನ ಹೋಗಿ ಬಂದ ಮರ್ಯಾದೆ ಒಂದು ಮರ್ಯಾದೆಯಲ್ಲ! ಅಂತಹ ಮರ್ಯಾದೆ ಕ್ಷಣಿಕ. ಮರ್ಯಾದೆ ಬಹಳವಾಗಿ ಇಲ್ಲದಿದ್ದರೂ ಮಾನದಿಂದ ಬಾಳಿದರೆ ಜಿವನ ಸಾರ್ಥಕವಾಯಿತು.

ಮಾನ ಮರ್ಯಾದೆಗಳೆರಡೂ ಮಕ್ಕಳಿಂದೊಡಗೂಡಿದ ಐಶ್ವರ್ಯದಂತೆ; ಪಾರ್ವತೀಪರಮೇಶ್ವರರಂತೆ. ಜತೆಜತೆಯಾಗಿದ್ದರೆ ಇವೆಲ್ಲಾ ಚೆನ್ನ!



# ಹೋಟಲುಗಳು

ಎ. ಎನ್. ಮೂರ್ತಿರಾವ್

ಹೊಟಲಿಗೆ ಹೋಗುವುದು ಕೆಟ್ಟದೆಂದು ಪ್ರಪಂಚವೇ ಒಪ್ಪುತ್ತದೆ. ನಾವು ಹೋಟಲಿನಲ್ಲಿ ಕಾಫಿಯನ್ನು ಸವಿಯುತ್ತಾ ಕುಳಿತಿರುವಾಗ ಈ ವಿಷಯವನ್ನು ಕೂಲಂಕಷವಾಗಿ ವಿಮರ್ಶಿಸಿ ಇದೇ ನಿರ್ಣಯಕ್ಕೆ ಎಷ್ಟೋ ಸಾರಿ ಬಂದಿದ್ದೇವೆ. ಹೋಟಲಿನವರು ಕೇವಲ ಹಣದಾಸೆಗಾಗಿ ಕೆಲಸ ಮಾಡುವವರು; ನಮ್ಮ ಆರೋಗ್ಯವೂ ಸೌಖ್ಯವೂ ಅವರಿಗೇನು ಬೇಕು! ಅಲ್ಲಿ ನಾವು ಒಬ್ಬರಿಗಾಗಿ ಖರ್ಚುಮಾಡುವ ಹಣದಲ್ಲಿ ಮನೆಯವರೆಲ್ಲರಿಗೂ ಮೃಷ್ಟಾನ್ನಭೋಜನ ಮಾಡಿಸಬಹುದು. ಅದಲ್ಲದೆ ಮನೆಯಲ್ಲಿ ಹೆಂಡತಿ ಮಕ್ಕಳೊಡನೆ ಸುಖಸಲ್ಲಾಪಮಾಡುತ್ತಾ, ನಮ್ಮ ನಲ್ಲೆಯ ಪ್ರೇಮದಲ್ಲಿ ನೆನೆದು ನಮ್ಮ ಹಸಿವಿಗೆ ಮಾತ್ರವಲ್ಲದೆ ಹೃದಯಕ್ಕೂ ತಂಪೆರೆಯುವ ತಿಂಡಿತೀರ್ಥಗಳನ್ನು ನಿರಾಕರಿಸಿ ಹೋಟಲಿನವನಿಗೆ ಹಣ ಸುರಿಯುವುದು ಯಾವ ನ್ಯಾಯ! ಆಹಾರದಲ್ಲಿ ಮುಖ್ಯವಾಗಿರಬೇಕಾದ ನೈರ್ಮಲ್ಯ ಸಹ ಹೋಟಲುತಿಂಡಿಗಳಲ್ಲಿಲ್ಲ—ಇತ್ಯಾದಿ ವಿಷಯಗಳನ್ನು ಮನಸ್ಸಿಗೆ ತಂದುಕೊಂಡೇ ನಾವು ಹೋಟಲಿಗೆ ಹೋಗುವುದನ್ನು ಒಂದು ಸಲವಲ್ಲ, ಸಾವಿರ ಸಲ ತ್ಯಜಿಸಿದ್ದೇವೆ. ನಮ್ಮ ಹಿರಿಯರಂತೂ ಹೋಟಲಿಗೆ ಹೋಗುವುದು ಕೆಟ್ಟದ್ದು ಮಾತ್ರವಲ್ಲ, ಪಂಚಮಹಾಪಾತಕಗಳಲ್ಲಿ ಒಂದೆಂದೇ ಭಾವಿಸಿದ್ದರು. ಅವರ ಕಾಲದಲ್ಲಿ ಹೋಟಲುಗಳಿಗೆ ಸಭ್ಯಸಮಾಜದಲ್ಲಿ ಸ್ಥಳವೇ ಇರಲಿಲ್ಲ. ಹೋಟಲು, ಕುಡಿತ, ನಾಟಕ, ಸಂಗೀತ, ಸೂಳೆಗಾರಿಕೆ—ಇವೆಲ್ಲವೂ ಹೆಚ್ಚು ಕಡಿಮೆ ಒಂದೇ ವರ್ಗಕ್ಕೆ ಸೇರಿದ್ದವು. ಆದ್ದರಿಂದಲೇ ಹಿರಿಯರು, ಪುರೋಹಿತರು ಮೊದಲಾದವರು ಆ ನರಕವನ್ನು ಪ್ರವೇಶಿಸಿ ಹುಡುಗರಿಗೆ ದುಷ್ಟಮೇಲ್ಪಂಕ್ತಿಯನ್ನು

ಹಾಕಬಾರದೆಂಬ ಸದುದ್ದೇಶದಿಂದ ಹೋಟಲಿಗೆ ಹೋದಾಗಲೆಲ್ಲ ಗುಟ್ಟಾಗಿಯೇ ಹೋಗುತ್ತಿದ್ದರು.

ಆದರೆ ಅಲ್ಲಿಗೆ ಹೋಗುವುದರಿಂದ ಜಾತಿ ಕೆಡುವುದೆಂದೂ ಆದರ ಹತ್ತಿರವೂ ಸುಳಿಯಬಾರದೆಂದೂ ಕಟ್ಟಾಜ್ಞೆಯಾಗಿದ್ದುದರಿಂದ ಸ್ವಾತಂತ್ರ್ಯಪ್ರಿಯರಾದ ನಮಗೆ ಹಿರಿಯರ ನಿಯಮವನ್ನು ಮುರಿದು ಆ ಪಾಪದ ರುಚಿಯನ್ನು ಸವಿಯುವುದು ಕರ್ತವ್ಯವಾಗಿ ತೋರಿತು. ನಿಷಿದ್ಧವಾದ ಕಾರ್ಯವನ್ನು ಮಾಡುವುದರಲ್ಲಿ ಒಂದು ಬಗೆಯ ಅಪೂರ್ವ ಸೌಖ್ಯವಿದೆ. ಅದರ ಅನುಭವ ನಮಗೆ ಬೇಡವೆ! ಇದರ ಮೇಲೆ ಮನೆಯಲ್ಲಿ ನಮಗೆ ಅಜೀರ್ಣವಾಗಬಹುದೆಂಬ ಭಯದಿಂದ ತಿಂಡಿಯನ್ನು ಔಷಧಿಯ ಪ್ರಮಾಣದಲ್ಲಿ ಕೊಡುತ್ತಿದ್ದರು. ಮನೆಯಲ್ಲಿ ಅಜೀರ್ಣಕ್ಕೆ ಅವಕಾಶವಿಲ್ಲದ್ದರಿಂದ ನಾವು ಆದನ್ನು ಹೋಟಲಿನಲ್ಲಿ ಕೊಂಡುಕೊಳ್ಳಬೇಕಾಯಿತು. ಅಜೀರ್ಣವಾಗಲಿ ಬಿಡಲಿ, ಆ ತಿಂಡಿ ರುಚಿಯಾಗಿರುತ್ತಿತ್ತು. ಬೀದಿಯಲ್ಲಿ ಹೋಗುತ್ತಿರುವಾಗ ಹೋಟಲಿನಲ್ಲಿ ಕರಿಯುತ್ತಿರುವ ತಿಂಡಿಗಳ ಕಂಪೂ ಆಗ ತಾನೆ ಕಾವಲಿಯ ಮೇಲೆ ಬೀಳುತ್ತಿರುವ ದೋಸೆಯ ಮೆಲು ದನಿಯೂ ನಮ್ಮ ಮನೋನಿಶ್ಚಯವನ್ನು ಕರಗಿಸಿ, ತಮ್ಮ ಮೃದುವಾದ ಪಾಶಗಳಿಂದ ನಮ್ಮನ್ನು ಬಿಗಿದು ನಮಗೆ ಅರಿವಿಲ್ಲದಂತೆಯೇ ನಮ್ಮ ಮನಸ್ಸನ್ನು ಸೆಳೆಯುವುವು. ಆ ತಿಂಡಿಗಳ ಹೆಸರುಗಳು ಸಹ ಎಷ್ಟು ಮನೋರಂಜಕವಾಗಿರುವುವು! ಹಾಗೆ ಹೆಸರು ಕೊಡುವ ಕಲೆಯು ಮನೆಯವರಿಗೆ ಬರದು. ಒಳ್ಳೆಯ ಪದಾರ್ಥಕ್ಕೆ ಒಳ್ಳೆಯ ಹೆಸರನ್ನೇಕೆ ಕೊಡಬಾರದು? ಅನುಪಮ ಸುಂದರಿಯಾದವಳಿಗೆ 'ಲಲಿತ' ಎಂದು ಹೆಸರಿಡದೆ 'ಸುಬ್ಬಿ' ಎಂದೇಕೆ ಕರೆಯಬೇಕು! ನೀರುಳ್ಳಿಯ ಉಪ್ಪಿಟ್ಟೊ ಕೇಸರಿ ಸಜ್ಜಿಗೆಯೊ ರುಚಿಯಾಗಿರಬಹುದು; ಆದರೆ ಆ ಹೆಸರಿನ ತಿಂಡಿಗಳನ್ನು ಯಾರು ಮೆಚ್ಚುತ್ತಾರೆ! ಅದನ್ನೇ ಕಾಂತಾಭಾತ್ ಎಂದೋ ಮೋಹನ ಭಾತ್ ಎಂದೋ ಕರೆದರೆ ನಮ್ಮ ಮನಸ್ಸು ಸೋಲಬಹುದು.

ಹೀಗೆ ಮನೆಯವರು ತಮ್ಮ ಮೌಢ್ಯದಿಂದ ಕಲಾಪ್ರೇಮಿಗಳಾದ ಯುವಕರನ್ನು ತಾವಾಗಿಯೇ ಹೋಟಲಿಗೆ ತಳ್ಳಿದಂತಾಯಿತು. ಇದಲ್ಲದೆ

ನಮ್ಮ ಹಳ್ಳಿಗೆ ಮಸಾಲೆ ದೋಸೆಯ ರುಚಿ ಇಳಿಯುವ ವೇಳೆಗೆ ಹೋಟಲು ಗಳ ಸ್ಥಿತಿಯೂ ಉತ್ತಮಗೊಂಡಿತ್ತು. ಹಿಂದೆ 'ಕಾಫಿ ಕ್ಲಬ್' ಎಂದು ಕರೆಸಿಕೊಳ್ಳುತ್ತಿದ್ದ ಹೋಟಲುಗಳು ಆಗ 'ಫಲಾಹಾರ ಮಂದಿರ'ಗಳಾಗಿ ದ್ದುವು. ಈಗಿನಂತೆ ಅಗ್ಗದ ಶೃಂಗಾರದಿಂದ ಮೆರೆಯುವ 'ಭವನ'ಗಳು ಇನ್ನೂ ಬಂದಿರಲಿಲ್ಲ. ಗಾಜಿನ ಗೂಡುಗಳಲ್ಲಿ ಮೆಟ್ಟಲುಮೆಟ್ಟಲಾಗಿ ಭಕ್ಷ್ಯ ಗಳನ್ನು ಪ್ರದರ್ಶಿಸುವ 'ಭಟಜಿ'ಗಳೂ 'ಪ್ರಸಾದ'ರೂ ಮೈಸೂರಿಗೆ ಇನ್ನೂ ಕಾಲಿಟ್ಟಿರಲಿಲ್ಲ. ಹೋಟಲಿನ ಸಾಮ್ರಾಜ್ಯಸೂತ್ರಗಳು ಇನ್ನೂ ಉಡುಪಿಯವರ ಕೈಯಲ್ಲಿಯೇ ಇದ್ದುವು. ಅವರ ಹೋಟಲುಗಳು ಈಗಿ ನವರಿಗೆ ಸ್ವಲ್ಪ ಅನಾಗರಿಕವಾಗಿ ಕಂಡರೂ ಅಲ್ಲಿ ಒಂದು ಬಗೆಯ ಚಿತ್ತಾ ಕರ್ಷಕವಾದ ಆವರಣವಿತ್ತು. 'ಕೋಮಲವಿಲಾಸ,' 'ಆನಂದವಿಲಾಸ' ಎಂದು ಕರೆಯಿಸಿಕೊಳ್ಳುವ ಈ ಹಳೆಯ ಮಾದರಿ ಹೋಟಲುಗಳನ್ನು ಈಗಲೂ ಒಂದೊಂದು ಕಡೆ ಕಾಣಬಹುದು. ಅಲ್ಲಿಯ ಆವರಣ ಸುಮಾರು ಐವತ್ತು ವರ್ಷಗಳ ಹಿಂದಿನ ಮೈಸೂರಿನದು. ಅಲ್ಲಿಯ ಗೋಡೆಗಳಿಗೆ ಈಗಿನ 'ಭವನಗಳಲ್ಲಿರು'ವಂತೆ ಕಣ್ಣು ಕೋರೈಸುವ ಜಪಾನ್ ಹೆಂಚುಗಳ ಜೋಡಣೆಯಿಲ್ಲ; ದೇಹದ ಪ್ರಮಾಣವನ್ನೇ ಅರಿಯದ ಸಿಂಹಸಾರಂಗಗಳ ಚಿತ್ರಗಳು ಕಣ್ಣು ನೋಯಿಸುವುದಿಲ್ಲ; ಎತ್ತ ನೋಡಿದರೂ ನಿಮ್ಮನ್ನು ಅಣಕಿಸುವ ನಿಲುವುಗನ್ನಡಿಗಳಿಲ್ಲ. ಅಲ್ಲಿಯ ಆವರಣದಲ್ಲಿ ಒಂದು ಸೌಮ್ಯತೆಯಿದೆ. ಅಲ್ಲಿರುವ ಚಿತ್ರಗಳೆಂದರೆ, ರವಿವರ್ಮನ ಕೃತಿಗಳು, ನಮ್ಮ ರಾಜಮನೆತನದವರು, ಅಂಬೆಗಾಲಿಡುವ ಕೃಷ್ಣ, ಚಾಮುಂಡೇ ಶ್ವರಿ, ರಾಜರಾಜೇಶ್ವರಿ ಮೊದಲಾದ ಹಳೆಯ ವರ್ಣಕೃತಿಗಳು. (ಈಚೆಗೆ ಮಧ್ಯೆ ಮಧ್ಯೆ ಪಾಶ್ಚಾತ್ಯರಮಣಿಯರ ಚಿತ್ರಗಳನ್ನೂ ಸೇರಿಸಿರುತ್ತಾರೆ.) ಮೇಜುಗಳೂ ಕುರ್ಚಿಗಳೂ ಅಷ್ಟೇನೂ ಮೆರುಗಿನಿಂದ ಹೊಳೆಯ ದಿದ್ದರೂ ಆ ಸ್ಥಳವೆಲ್ಲ ಊದುಬತ್ತಿಯ ಸುಗಂಧದಿಂದ ತುಂಬಿರುತ್ತದೆ.

ನಾವು ಹೈಸ್ಕೂಲಿನಲ್ಲಿರುವಾಗಲೆ ಈ ಹೋಟಲುಗಳಲ್ಲಿ ಹಳೆಯ ಮತ್ತು ಹೊಸ ನಾಗರಿಕತೆಗಳ ಘರ್ಷಣವು ಪ್ರಾರಂಭವಾಗಿತ್ತು. ಹಾಸ ನದ ಟೋಪಿಯೂ ಹಿಂಜುಟ್ಟೂ ಫರ್ ಟೋಪಿಯು ಮತ್ತು 'ಕ್ರಾಪಿ'ನ

ದಾಳಿಯನ್ನೆದುರಿಸಲಾರದೆ ಹಿಮ್ಮೆಟ್ಟುತ್ತಿದ್ದವು. ಸಮಾಜದಲ್ಲಾಗುತ್ತಿದ್ದ ಬದಲಾವಣೆಗಳನ್ನೆಲ್ಲ ಈ ಹೋಟಲುಗಳು ಸ್ವಲ್ಪ ಮಟ್ಟಿಗೆ ಪ್ರತಿಬಿಂಬಿಸುತ್ತಿದ್ದವು. ಆದರೂ ಒಟ್ಟಿನಲ್ಲಿ ಅಲ್ಲಿಯ ಗಿರಾಕಿಗಳು ಬಹುಮಟ್ಟಿಗೆ ಹಳೆಯ ಕಾಲದವರೇ. ಸಾಧಾರಣವಾಗಿ ಹೋಟಲಿನವರು ಬದುಕುವುದೆಂದರೆ ವಿದ್ಯಾರ್ಥಿಗಳಿಂದ. ಆದರೆ ಈ ಹೋಟಲುಗಳು ವಿಶೇಷವಾಗಿ ಸಂಗೀತಗಾರರ, ನಾಟಕದ ಕಂಪೆನಿಯವರ ಮತ್ತು ಅವರಿಗೆ ಆಶ್ರಯ ಕೊಡುವ ಸಂತೇಪೇಟೆಯ ವರ್ತಕರ ಅಭಿಮಾನಕ್ಕೆ ಪಾತ್ರವಾಗಿದ್ದವು. ಈಗಲೂ ಅಲ್ಲಿ ವರದಾಚಾರ್ಯರ ಕಂಪೆನಿಯ ನಟರ ವಿಮರ್ಶೆಯು ನಡೆಯುತ್ತಿರುತ್ತದೆ. ನೀವೇನಾದರೂ ಮಧ್ಯೆ ತಲೆ ಹಾಕಿ ಈಗಿನ ಕಾಲದ ನಟರನ್ನು ಪ್ರಶಂಸೆ ಮಾಡಿದರೆ ಅವರು 'ನಾಟಕದ ವಿಷಯ ನಿಮಗೇನ್ರಿ ಗೊತ್ತು? ನಕಲಿ ಅನ್ನುವುದು ಕೃಷ್ಣಮೂರ್ತಿಯ ತಲೆಗೇ ಹೋಯಿತು. ವರದಾಚಾರ್ಯರ ಹಾಗೆ ಒಂದು 'ಕಂದ' ಅನ್ನಬೇಕಾದರೆ ಏಳು ಜನ್ಮ ತಪಸ್ಸು ಮಾಡಿ ಬರಬೇಕು' ಎಂದು ನಿಮ್ಮ ಬಾಯಿ ಮುಚ್ಚಿಸಿಬಿಡುವರು. ಇನ್ನು ಸ್ವಲ್ಪ ವಯಸ್ಸಾದವರಿಗೆ ವರದಾಚಾರ್ಯರನ್ನು ಹೊಗಳಿದರೂ ಸಹಿಸದು. 'ಆಚಾರ್ಯರ ಗುರುಗಳು ಗೌರೀನರಸಿಂಹಯ್ಯನವರನ್ನು ನೀವು ಕಾಣಿರಿ—ಅವರ ಜಾಡೇ ಬೇರೆ. ವರದಾಚಾರ್ಯರು ಲಾಗ ಹಾಕಿದರೂ ಆ ಮಟ್ಟಕ್ಕೆ ಏರಲಾರರು. ಪಾಪ, ಈ ಹುಡುಗರಿಗೇನು ಗೊತ್ತು, ನಿನ್ನೆ ಮೊನ್ನೆಯವರು' ಎಂದು ನಿಮ್ಮ ಸಹಾಯಕ್ಕೆ ಬರುವರು. ಅವರಿಗೆ ನಿಮ್ಮನ್ನು ಕಂಡರೆ ಕೋಪವಿಲ್ಲ, ಕನಿಕರ ಮತ್ತು ತಿರಸ್ಕಾರ ಮಾತ್ರ. ಹೋಟಲಿನವನ ಗಮನವೆಲ್ಲಾ ಬಹುಮಟ್ಟಿಗೆ ಈ ಗುಂಪಿನವರ ಮೇಲೇ ಇರುತ್ತದೆ. ಅವನು ನಿಮ್ಮ ಕಡೆ ತಿರುಗಬೇಕಾದರೆ ಈ ಕಲಾಭಿಮಾನಿಗಳ ಸೇವೆ ಮುಗಿದ ಮೇಲೆಯೇ.

ಈಚೆಗೆ ಪ್ರಾಶಸ್ತ್ಯ ಪಡೆದಿರುವ ಬಾಲೂಷಾ, ಸೋನಪಪಡಿ, ಗುಲಾಬ್ ಜಾಮೂನ್ ಮೊದಲಾದ ತಿಂಡಿಗಳು ಈ ಹಳೆಯ ಹೋಟಲುಗಳಲ್ಲಿ ಸಿಕ್ಕದಿದ್ದರೂ, ನಮ್ಮ ಸರಳವಾದ ಮೈಸೂರು ದೋಸೆ, ಹೋಯಾಗಡುಬು, ಬಾಳೆಯ ಕಾಯಿ ಬೋಂಡ—ಮೊದಲಾದುವು ದೊರೆಯಬೇಕಾದರೆ ಅಲ್ಲಿ ಮಾತ್ರ. ಆದ್ದರಿಂದಲೇ ನಮ್ಮಲ್ಲಿ ಕೆಲವರಿಗೆ ಈ ಹೋಟಲು

ಗಳನ್ನು ಕಂಡರೆ ಅಭಿಮಾನ. ಆದರೂ ನಾವು ನಮ್ಮ ಆದರವನ್ನೆಲ್ಲ ಯಾವುದೊಂದು ಹೋಟಲಿಗೂ ಧಾರೆಯೆರೆಯುತ್ತಿರಲಿಲ್ಲ. ತಿಂಡಿಗಳನ್ನು ಅನೇಕ ಕಡೆ ರುಚಿ ನೋಡಿ, ಅವುಗಳ ಗುಣಾವಗುಣಗಳ ವಿಷಯದಲ್ಲಿ ಶೋಧನೆ ನಡೆಸಿ, ಹೋಟಲುಗಳನ್ನು 'ಏಟೆಂವಾರ್ ಗ್ರೇಡ್‌ವಾರ್' ವಿಂಗಡಿಸಿಟ್ಟುಕೊಳ್ಳದವರನ್ನು ಕಂಡರೆ ನಮಗೆ ತಿರಸ್ಕಾರ. ಬಾದಷಹರಿಗೆ ದೊಡ್ಡ ಜನಾನಾ ಹೇಗೆ ಭೂಷಣವೋ ಪಟ್ಟಣವಾಸದವರಿಗೆ ಅನೇಕ ಹೋಟಲುಗಳನ್ನು ಚಾಲ್ತಿಯಲ್ಲಿಟ್ಟುಕೊಂಡಿರುವುದು ಹಾಗೆ ಭೂಷಣ. ಸಿಹಿ ತಿಂಡಿಗೆ ಬೊಂಬಾಯಿ ಭವನ, ಕಾರದ ತಿಂಡಿಗೆ ಸಂತೇಪೇಟೆಯ ಹೋಟಲು, ಮೈಸೂರು ದೋಸೆಗೆ ಹಳ್ಳದ ಕೇರಿಯ ಹೋಟಲು—ಹೀಗೆ ಅವುಗಳ ಯೋಗ್ಯತಾನುಸಾರವಾಗಿ ನಮ್ಮ ಕೃಪಾಕಟಾಕ್ಷ ಎಲ್ಲಾ ಹೋಟಲುಗಳ ಮೇಲೆಯೂ ಬೀಳುತ್ತಿತ್ತು.

ಆದರೆ ನಮ್ಮ ಆಶ್ರಯ ಹೋಟಲುಗಳಿಗೆ ದೊರಕುವುದಕ್ಕೆ ಅಲ್ಲಿಯ ತಿಂಡಿಗಳ ರುಚಿಯೊಂದೇ ಕಾರಣವಲ್ಲ; ಅಲ್ಲಿಯ 'ಮಾಣಿ'ಯ ಯೋಗ್ಯತೆಯೂ ಒಂದು ಮುಖ್ಯ ಕಾರಣ. 'ಮಾಣಿ' ಎಂಬ ಪದ 'ಮಾಣವಕ' ಎಂಬುದರಿಂದ ಬಂದಿತಂತೆ. ಎಲ್ಲಿಂದಲಾದರೂ ಬರಲಿ, ಮಾಣಿಯೆಂದರೆ ಹೋಟಲಿನಲ್ಲಿ ನಮಗೆ ತಿಂಡಿ ಕೊಡುವ ಮನುಷ್ಯ. ಅವನಿಲ್ಲದಿದ್ದರೆ ಹೋಟಲಿನ ಮುಖ್ಯ ಅಂಗವೇ ಇಲ್ಲದಂತೆ. ಪ್ರಪಂಚದಲ್ಲಿ ನಾವು ಯಾರನ್ನು ಬೇಕಾದರೂ ಹಿಡಿದು ಅವರ ಮೇಲೆ ಅಧಿಕಾರ ನಡೆಸಬಹುದು. ಆದರೆ ಮಾಣಿಗಳ ಮೇಲೆ ನಮ್ಮ ಜೋರು ಏನೇನೂ ನಡೆಯುವುದಿಲ್ಲ. ನನ್ನ ಸ್ನೇಹಿತನೊಬ್ಬನು ತನಗೆ ತಿಂಡಿ ಕೊಟ್ಟ ಮಾಣಿಯ ಬೆನ್ನು ತಟ್ಟಿ ಅವನಿಗೆ ಪೆಪ್ಪರ್‌ಮೆಂಟ್ ಕೊಟ್ಟದ್ದನ್ನು ನೋಡಿದ್ದೇನೆ; ಅದೇ ಸ್ನೇಹಿತನು ಇನ್ನೊಬ್ಬ ಮಾಣಿಯನ್ನು ಕತ್ತೆತ್ತಿ ನೋಡುವ ಧೈರ್ಯವಿಲ್ಲದೆ ಅವನು ತಂದುಕೊಟ್ಟ ಹರಳೆಣ್ಣೆವಾಸನೆಯ ಕಾಫಿಯನ್ನು ಚಪ್ಪರಿಸುತ್ತಾ ಕುಡಿಯುವಂತೆ ನಟಿಸಿದ್ದನ್ನೂ ನೋಡಿದ್ದೇನೆ.

ಮಾಣಿಯ ವಯಸ್ಸು ಇಪ್ಪತ್ತಕ್ಕೆ ಮೀರಿರಬಾರದು; ಮೀರಿದ್ದರೆ ಅವನಲ್ಲಿರಬೇಕಾದ ಮಾನುಷ ಸಹಾನುಭೂತಿ ಅಳಿದು ಹೋಗಿ ಅವನ

ಸ್ವಭಾವವೇ ಬದಲಾಯಿಸುತ್ತದೆ. ಅಲ್ಲಿಂದಾಚೆಗೆ ಅವನು ಹುಡುಗನಲ್ಲ, ತಾನೂ ಒಬ್ಬ ಗಣ್ಯನಾದ ಮನುಷ್ಯ. ಅವನು ನಿಮಗೆ ತಿಂಡಿಯನ್ನು ತಂದುಕೊಟ್ಟರೂ ತನ್ನ ಘನತೆಯನ್ನು ಸ್ಪಷ್ಟಪಡಿಸುವುದಕ್ಕಾಗಿ ಸ್ವಲ್ಪ ಸಾವಕಾಶವಾಗಿಯೇ ತಂದು, ನಿಮ್ಮ ಇರವನ್ನೇ ಕಾಣದವನಂತೆ ಉದಾಸೀನನಾಗಿ ಅದನ್ನು ನಿಮ್ಮ ಮುಂದಿಟ್ಟು ಹೋಗುವನು. ತಿಂಡಿಯ ಲೆಕ್ಕವನ್ನು ಕೊಡಬೇಕಾದರೆ ಚಕ್ರವರ್ತಿಯು ಬಿರುದನ್ನು ದಯಪಾಲಿಸುವ ಗಾಂಭೀರ್ಯದಿಂದಲೂ ದರ್ಪದಿಂದಲೂ ಕೊಡುವನು. ಆ ವಯಸ್ಸಿಗೇ ಅವನ ಮುಖಕ್ಕೆ ಸರ್ವಶಾಸ್ತ್ರಪಾರಂಗತನ ಕಳೆ ಬಂದಿರುತ್ತದೆ. ಅವನ ಗಾಂಭೀರ್ಯವನ್ನೂ ಶಾಂತಿಯನ್ನೂ ನೋಡಿದರೆ ಅವನು ಮನುಜ ಸಂಬಂಧವಾದ ಕುಂದುಕೊರತೆಗಳೆಲ್ಲವನ್ನೂ ಜಯಿಸಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದವನಂತೆ ಕಾಣುತ್ತಾನೆ. ನಿಮ್ಮ ಕೋಪವಾಗಲಿ, ಹೊಗಳಿಕೆಯಾಗಲಿ, ಜುಗುಪ್ಸೆಯಾಗಲಿ, ಅವನ ಮೇಲೆ ಯಾವ ಪರಿಣಾಮವನ್ನೂ ಮಾಡುವುದಿಲ್ಲ. ನಮ್ಮ ಕಚೇರಿಯ ಬಳಿ ಇರುವ ಹೋಟಲಿನ ಮಾಣಿಯೊಬ್ಬನು ಈ ತೆರದವನು. ಅವನೊಡನೆ ಸ್ವತಂತ್ರಿಸಿ ಮಾತಾಡಲು ಇಂದಿಗೂ ನನಗೆ ಧೈರ್ಯವಿಲ್ಲ. ನೀವು ಜವಾನನೊಡನೆ ವರ್ತಮಾನವನ್ನು ಕಳುಹಿಸಿ ಹತ್ತು ನಿಮಿಷವಾದ ಮೇಲೇ ಅವನು ಹೊರಡುವನು. ಬಂದವನು ನಿಮ್ಮ ಕಡೆಯೇ ನೋಡದೆ ಭೂಮ್ಯಾಕಾಶಗಳನ್ನು ಒಂದು ಬಾರಿ ಸಾವಧಾನವಾಗಿ ಪರೀಕ್ಷಿಸಿ, ತ್ಯಾಗರಾಜರ ಕೀರ್ತನೆಯ ಪಲ್ಲವಿಯೊಂದನ್ನು ಮೆಲ್ಲನೆ ಸಿಳ್ಳು ಹಾಕಿ, ಅನಂತರ 'ಏನು ತರಲಿ ಸಾರ್' ಎಂದು ದಿಗಂತವನ್ನು ನೋಡುತ್ತಾ ನಿಲ್ಲುತ್ತಾನೆ. 'ಏನಿದೆ?' ಎಂದು ನೀವು ಕೇಳುವುದೇ ತಡ, 'ಜಾಮೂನಾ ಜಿಲೇಬಿ ಜಹಾಂಗೀರಾ ಬಾಸುಂದಿ ಬಾದಾಮಿ ಹಲ್ವಾ ಬಾಲೂಷಾ ಕಾರಾಬೂಂದಿ ಕಾರಾಸೆವ್' ಎಂದು ಉಸಿರು ತೆಗೆದುಕೊಳ್ಳದೆಯೇ ಒದರಿಬಿಡುತ್ತಾನೆ. ಆ ಶಬ್ದಸಾಗರದಲ್ಲಿ ನೀವು ಮುಳುಗಿ ಹೆಣಗಾಡುತ್ತಿರುವುದು ಅವನ ಕಣ್ಣಿಗೆ ಬಿದ್ದರೂ ಅವನಿಂದ ನಿಮಗೆ ಸಹಾನುಭೂತಿಯೇನೂ ದೊರಕದು. ಏನು ಬೇಕೆಂದು ನೀವು ನಿಶ್ಚಯಿಸುವವರೆಗೂ ಅವನಿಗೆ ತಾಳ್ಮೆಯಿಲ್ಲ. 'ತಿಂಡಿಯನ್ನು

ಆರಿಸಿಕೊಳ್ಳುವುದು ಸಹ ತಿಳಿಯದು, ಈ ಮೃಗಗಳಿಗೆ' ಎಂಬ ಅರ್ಥವುಳ್ಳ ತಿರಸ್ಕಾರ ಸೂಚಕವಾದ ನೋಟವನ್ನು ಬೀರಿ ಬಾಗಿಲಿನ ಕಡೆಗೆ ಹೊರಟೇ ಬಿಡುವನು. ನೀವು ಅದೇ ಹೋಟಲಿಗೆ ಹತ್ತುವರ್ಷಗಳ ಕಾಲ ಎಡೆಬಿಡದೆ ಹೋಗುತ್ತಿದ್ದರೆ ಅವನೇನಾದರೂ ನಿಮ್ಮ ವಿಷಯದಲ್ಲಿ ಕೃಪೆ ತೋರಿ ಹಸನ್ಮುಖಿಯಾಗಬಹುದು; ಆದರೆ ಅದುವರೆಗೂ ಅವನನ್ನು ತಾಳ್ಮೆಯಿಂದ ಓಲೈಸುತ್ತಿರಬೇಕು.

ಆನಂದಭವನದ ವಿಷಯದಲ್ಲಿ ನನಗಿರುವ ಆದರಕ್ಕೆ ಅಲ್ಲಿಯ ಮಾಣಿಯೇ ಕಾರಣ. ಅವನು ಸುಮಾರು ಇಪ್ಪತ್ತು ವರ್ಷದ ಸ್ಫುರದ್ರೂಪಿ. ಸ್ವಲ್ಪ 'ಷೋಕಿಲಾಲ್'. ಅಲ್ಲಿ ಕೆಲಸ ಮಾಡುವಾಗಲೂ ಗರಿಮುರಿಯದ ರೇಷ್ಮೆ ಷರಟನ್ನೇ ಧರಿಸಿರುತ್ತಾನೆ. ತಲೆಗೂದಲು ಕೇಶರಂಜನ ತೈಲದಿಂದ ಮಿನುಗುತ್ತಿರುತ್ತದೆ. ಅವನಿಗೆ ಸಿನೇಮಾ ಸಂಗೀತಗಳಲ್ಲಿ ಬಹಳ ಅಭಿರುಚಿ. ಆದರೆ ನಡತೆ ಅಷ್ಟು ಪರಿಶುದ್ಧವಾಗಿರಲಾರದು. ಮುಖ ಆಗಲೇ ಸ್ವಲ್ಪ ಸುಕ್ಕುಗಟ್ಟಿ, ಕಣ್ಣು ಗುಳಿಬಿದ್ದು, ಸುಖಲೋಲುಪತೆಯ ಚಿಹ್ನೆ ಕಾಣುತ್ತದೆ. ಅದು ಹೇಗಾದರೂ ಇರಲಿ, ಅವನಲ್ಲಿ ನೈಜವಾಗಿರುವ ಮರ್ಯಾದೆ, ತಾಳ್ಮೆ, ಸೇವೆಯಲ್ಲಿ ಅವನಿಗಿರುವ ಸಂತೋಷ-ಇವು ಎಲ್ಲರ ಆದರವನ್ನೂ ಸಂಪಾದಿಸಿದ್ದವು. ನೀವು ಬಿಸಿಲಿನಲ್ಲಿ ಬಳಲಿ ಬಂದರೆ ಅವನು ಮಹಡಿಯ ಮೇಲೆ ತಂಪಾಗಿರುವ ಮಿಗ್ನೋನಿಯಾ ಲತಾಗೃಹದಲ್ಲಿ ನಿಮಗಾಗಿ ಬೇರೆ ಕುರ್ಚಿಗಳನ್ನು ಹಾಕಿಸುವನು. ತಿಂಡಿಯ ಪಟ್ಟಿಯನ್ನು ಕೊಟ್ಟ ಕ್ಷಣ 'ಏನು ಬೇಕು?' ಎಂದು ಕೇಳದೆ, ನಿಮಗೆ ಬೇಕಾದ್ದನ್ನು ಆರಿಸಿಕೊಳ್ಳಲು ಕಾಲದೊರೆಯಲೆಂದು ನೀರು ತರುವ ವ್ಯಾಜದಿಂದ ಹೊರಟುಹೋಗುತ್ತಾನೆ. ಅನಂತರ ತಾನಾಗಿಯೇ 'ಜಿಲೇಬಿ ಚೆನ್ನಾಗಿದೆ, ಬೋಂಡ ಈಗ ತಾನೆ ಮಾಡಿದ್ದು' ಎಂದು ಮರ್ಯಾದೆಯಿಂದ ಸಲಹೆಕೊಡುತ್ತಾನೆ. ನೀವು ಸ್ಪೇಷಲ್ ಕಾಫಿ ಬೇಕೆಂದರೆ 'ಸ್ಪೇಷಲ್ ಕಾಫಿಯಲ್ಲಿ ದೊಡ್ಡಸ್ತಿಕೆ ಹೊರತು ಇನ್ನೇನೂ ಇಲ್ಲ, ಸಾರ್' ಎಂದು ಹೇಳಿ ನಿಮಗೆ ಸ್ವಲ್ಪ ಹಣವನ್ನುಳಿಸುತ್ತಾನೆ. ಅವನು ಅಷ್ಟಾವಧಾನ ಶತಾವಧಾನ ಕಲಿತಿರಬೇಕು. ಹತ್ತು ಜನರು ಒಂದೇ ಸಲ ಬೇರೆ

ಬೇರೆ ತಿಂಡಿಗಳನ್ನು ಕೇಳಿದರೂ ಎಲ್ಲವನ್ನೂ ನೆನಪಿನಲ್ಲಿಟ್ಟುಕೊಂಡು ಚಾಚೂ ತಪ್ಪದೆ ತರುವನು. ಅಲ್ಲಿಯ ತಿಂಡಿಗಳ ರುಚಿ ಮಾಣಿಯ ಗುಣ ದಿಂದ ಇಮ್ಮಡಿಯಾದಂತೆ ತೋರುತ್ತದೆ.

'ಮನೆಯ ತಿಂಡಿಗಳು ನಮ್ಮ ನಲ್ಲೆಯ ಪ್ರೇಮಹಸ್ತದಿಂದಲೇ ಬರುತ್ತವೆ, ಆ ಸೌಖ್ಯಕ್ಕೂ ಹೋಟಲಿನ ಸೌಖ್ಯಕ್ಕೂ ಹೋಲಿಕೆಯೆಲ್ಲಿ? ಎಂದು ಕೆಲವರು ಹೇಳಬಹುದು. ನಮ್ಮ ನಲ್ಲೆಯರ ಹಸ್ತಕ್ಕೆ ಕಾಫಿ ಮಾಡುವುದಕ್ಕಿಂತ ಉಚಿತವಾದ ಕೆಲಸವಿದೆ. ಅದಲ್ಲದೆ ನಮಗೂ ಅವ ರಿಗೂ ಇರುವ ಬಾಂಧವ್ಯದಿಂದ ನಮ್ಮ ಸ್ವಾತಂತ್ರ್ಯಕ್ಕೆ ಕುಂದು ಬರು ವುದು. ಮಾಣಿಯನ್ನು ಹತ್ತು ಸಲ ತಿಂಡಿಗಾಗಿ ಓಡಿಸುವಂತೆ ಹೆಂಡತಿ ಯನ್ನು ಓಡಿಸಲಾಗುವುದಿಲ್ಲ. ಮಾಣಿ ಎಷ್ಟು ಒಳ್ಳೆಯವನಾದರೂ ನಿಮಗೆ ದೂರದವನು. ನಿಮ್ಮ ಅಪ್ಪಣೆಯನ್ನು ಪಾಲಿಸಿದ ಕೂಡಲೆ ನಿಮಗೂ ಅವನಿಗೂ ಇರುವ ಸಂಬಂಧ ತೊಡೆದುಹೋಗುತ್ತದೆ. ನೀವು ದಿನಕ್ಕೆ ಹತ್ತು ಸಲ ಕಾಫಿ ಕುಡಿಯಿರಿ, ಬೇಡವೆನ್ನುವ ಹಕ್ಕು ಅವನಿಗಿಲ್ಲ. ಮನೆಯಲ್ಲಿ ನಿಮಗೆ ಈ ಸ್ವಾತಂತ್ರ್ಯವಿಲ್ಲ. ನಿಮ್ಮ ಹೆಂಡತಿ ನಿಮಗೆ ಕಾಫಿ ಕೊಟ್ಟ ಮೇಲೆ ತಮ್ಮ ಕೆಲಸಕ್ಕೆ ತಾವು ಹೋಗದೆ ಅಲ್ಲಿಯೇ ಮಾತಿಗೆ ನಿಲ್ಲುತ್ತಾರೆ; ಕಾಫಿಯನ್ನು ಕುಡಿಯುವುದರಿಂದಾಗುವ ದುಷ್ಪರಿಣಾಮ ಗಳ ಮೇಲೆ ಒಂದು ಪುಟ್ಟ ಉಪನ್ಯಾಸವನ್ನು ಕೊಡುತ್ತಾರೆ. ನಿಮಗೆ ಬೇಕಾದ್ದು ಕಾಫಿ ಮಾತ್ರ, ಉಪನ್ಯಾಸವಲ್ಲ, ಎಂದು ಆಕೆಗೆ ಹೊಳೆಯು ವುದೇ ಇಲ್ಲ. ನೀವು ನಿರಾಳವಾಗಿ ಮನಸ್ಸನ್ನು ಅಲೆಯಬಿಟ್ಟು, ಯುರೋ ಪಿನ ಸಂಗ್ರಾಮ ಸಿದ್ಧತೆ, ನೀವು ಬರೆಯಬೇಕೆಂದಿರುವ ಕಾವ್ಯ, ಸಿನೆಮಾ ತಾರೆಯರ ಅಭಿನಯಕೌಶಲ ಮುಂತಾದ ಗಹನವಾದ ವಿಷಯಗಳನ್ನು ಚಿಂತಿಸುತ್ತಿರುವಾಗ ನಿಮ್ಮ ಗಮನವನ್ನು ಕಾಫಿಯ ದುರ್ಗುಣಗಳ ಕಡೆ ಗೆಳೆದರೆ ನಿಮಗೆ ಕೋಪ ಬರುವುದು ಸಹಜ.

ಹೀಗೆ ಮನೆಯಲ್ಲಿ ವೈಮನಸ್ಯವನ್ನು ತಂದುಕೊಳ್ಳುವುದಕ್ಕಿಂತ ಅನಾರೋಗ್ಯಕರವಾದರೂ ಹೋಟಲು ತಿಂಡಿ ತಿನ್ನುವುದೇ ಉತ್ತಮ. ದೇಹದ ಆರೋಗ್ಯಕ್ಕಿಂತ ಮನಸ್ಸಿನ ಆರೋಗ್ಯವೂ ಗಂಡಹೆಂಡಿರ ಸಾಮ

ರಸ್ಯವೂ ಮುಖ್ಯವಾದುವು. ಹೋಟಲಿಗೆ ಹೋಗುವುದು ಅನ್ಯಾಯ ವೆಂದು ಹೇಳುವವರ ಮಾತಿಗೆ ನಾವು ಮರುಳಾಗಬಾರದು. ಅದು ಕೇವಲ ಸ್ವಾರ್ಥಿಗಳ ವಾದ. ಮನೆಯ ತಿಂಡಿಗಳಿಂದ ನಮಗೆ ಸುಖವಿರಬಹುದು. ಆದರೆ ಘಳಿಗೆಗೊಂದು ಸಲ ನಮಗಾಗಿ ಒಲೆಯ ಮುಂದೆ ದುಡಿಯ ಬೇಕಾದ ನಮ್ಮ ಪತ್ನಿಯರಿಗೆ ಸುಖವೆ? 'ಅವರು ನಮಗಾಗಿ ಎಷ್ಟು ಕಷ್ಟವನ್ನಾದರೂ ಸಂತೋಷವಾಗಿ ಅನುಭವಿಸುತ್ತಾರೆ, ಅದು ಕಷ್ಟ ವೆಂಬ ಅರಿವು ಸಹ ಅವರಿಗಿಲ್ಲ' ಎಂದು ಹೇಳುವುದೆಲ್ಲಾ ನಿಜ. ಆದರೆ ಅವರ ನಿಷ್ಕಪಟವಾದ ಪ್ರೇಮವನ್ನೂ ಹೃದಯದ ಸರಳತೆಯನ್ನೂ ನಾವು ದುರುಪಯೋಗಪಡಿಸುತ್ತಿಲ್ಲವೆ? ಎಂದು ಎಷ್ಟೋ ವೇಳೆ ನನ್ನ ಮನಸ್ಸು ತಪಿಸಿದೆ. ನಾವು ಹೋಟಲಿಗೆ ಹಣವನ್ನು ತೆರಲು ಹಿಂಜರಿದು ನಮ್ಮ ಪತ್ನಿಯರನ್ನು ಹೀಗೆ ಕಷ್ಟಪಡಿಸುವುದಕ್ಕಿಂತ ಹೇಯವಾದ ಕಾರ್ಯ ವಿಲ್ಲ. ಖರ್ಚಿಗಾಗಿ ಹಿಂದೆಮುಂದೆ ನೋಡಬಾರದು. ಮನುಷ್ಯನು ಬದುಕುವುದು ಹಣದಿಂದಲ್ಲ, ನಿಸ್ವಾರ್ಥವಾದ ಪ್ರೇಮದಿಂದ. ನಮ್ಮ ಪತ್ನಿಯರ ಸೌಂದರ್ಯವೂ ಪ್ರೇಮವೂ ಹೀಗೆ ಅಡಿಗೆಯ ಮನೆಯಲ್ಲಿ ವ್ಯಯವಾಗಬೇಕೆ! ಕೋಮಲವಾದ ಆ ಪುಷ್ಪವನ್ನು ಬೆಂಕಿಯ ಮುಂದೆ ಬಾಡಿಸುವುದೆ! ನಿಷ್ಪಕ್ಷಪಾತವಾಗಿ ನೋಡಿದರೆ ನಾವು ಹೋಟಲಿಗೆ ಹೋಗುವುದು ನಮ್ಮ ಪತ್ನಿಯರ ಮೇಲೆ ನಮಗಿರುವ ಪ್ರೇಮದ ಗುರುತು.



# ನಮ್ಮ ಸಹಾಯಕರು ಮತ್ತು ಪೋಷಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ಈ ವರ್ಷವೂ ನೆರವಿತ್ತು ಪ್ರೋತ್ಸಾಹಿಸಿದ ಮಹನೀಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ. ಇದರಂತೆ ಕನ್ನಡಿಗರೆಲ್ಲರೂ ಸಹಾಯಕರಾಗಿಯಾಗಲಿ, ಪೋಷಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

**ಪೋಷಕರು:—**

೧ ಪ್ರಿನ್ಸಿಪಾಲ್ 'ದಿ. ಸ್ಕೂಲ್' ರಿಷಿವ್ಯಾಲಿ ೧೦೦೦

**ಸಹಾಯಕರು:—**

೧ ಶ್ರೀ ಜಿ. ವಿ. ಬೇವೂರು ಆಯ್. ಸಿ. ಎಸ್.
ಡಾಯರೆಕ್ಟರ ಜನರಲ್ ಆಫ್ ಪೋಸ್ಟ್ಸ್, ದಿಲ್ಲಿ ೫೦೦

೨ ಶ್ರೀ ವ್ಹಿ. ಎನ್. ಅಡವಿ, ಅಸಿಸ್ಟಂಟ ಅಕೌಂಟಂಟ್
ಜನರಲ್, ಮುಂಬಯಿ ೫೦೦

೩ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಬಿ. ಎಲ್., ಗವ್ಹರ್ನ
ಮೆಂಟ ಓರಿಯಂಟಲ್ ಟ್ರಾನ್ಸ್‌ಲೇಟರ ಬೆಂಗಳೂರು ೫೦೦

೪ ,, ಆರ್. ಎ. ಜಾಗೀರದಾರ ಎಂ. ಎ. ಎಲ್ ಎಲ್. ಬಿ.
ಮುಂಬೈ ೫೦೦

೫ ,, ನಾರಾಯಣರಾವ ಜೋಶಿ ಬಿ. ಎ. ಎಲೆಲ್. ಬಿ.
ಬೆಳಗಾಂವಿ ೫೦೦

೬ ,, ಆರ್. ಜಿ. ದೇಶಪಾಂಡೆ ಎಂ. ಎ.
ಇನ್‌ಕಮ್ ಟ್ಯಾಕ್ಸ ಆಫೀಸರ, ಸಾತಾರಾ ೫೦೦

೭ ,, ಎಂ. ಪಿ. ವಾಲಿ ಎಂ. ಎ. ಚೀಫ್‌ಆಫೀಸರ,
ಬೆಳಗಾಂವಿ ೫೦೦

೮ ಶ್ರೀ ಮೋಹನರಾವ್ ಕರೀಕಟ್ಟಿ ಬಿ. ಎ.

ಸಬ್‌ರಜಿಸ್ಟ್ರಾರರು ಬದಾಮಿ ೫ ೦ ೦

೯ ಶ್ರೀ ಅಶ್ವಥರಾವ ಮುಷಿ ಶಿಕ್ಷಣ ಮಂತ್ರಿಗಳು ಸಾಂಗ್ಲಿ ೫ ೦ ೦

೧೦ ,, ಶ್ರೀಮಂತ ಸರದಾರ ಬಾಳಾಸಾಹೇಬ

ಭೀಮಪ್ಪ ಗಿರಿಯಪ್ಪ ದೇಸಾಯಿ, ಕೌಜಲಗಿ ೫ ೦ ೦

೧೧ ,, ಶ್ರೀಮಂತ ವೆಂಕಟಾದ್ರಿ ಶ್ರೀನಿವಾಸ ಒಹದ್ದೂರ

ದೇಸಾಯಿ, ಸೊರಟೂರ ೫ ೦ ೦

೧೨ ,, ಗೋಕುಲದಾಸ ವಿಠ್ಠಲದಾಸ ವಾರಕರ

ವ್ಯಾಪಾರಸ್ಥರು ಗದಗ ೫ ೦ ೦

೧೩ ,, ವಲ್ಲಭದಾಸ ಪುಣೇಕರ. ಸಾಹುಕಾರರು

ಗದಗ ಬೆಟಗೇರಿ ೫ ೦ ೦

೧೪ ,, ಶ್ರೀನಿವಾಸರಾವ ಪೋತದಾರ ಆರ್ಟಿಸ್ಟ ಮಾಳಮಡ್ಡಿ ೫ ೦ ೦

೧೫ ,, ಎಚ್. ಬಿ. ಕೊಣ್ಣೂರ ಎಂ ಎ ವಿಜಾಪುರ ೫ ೦ ೦